ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೪೩

# ಶ್ರೀ ಸಾಂಬಪುರಾಣಂ

## ಭಾಗ ೧

(ಅಧ್ಯಾಯ ೧—೩೮)

ಅನುವಾದಕ :

ಎಚ್. ಗಂಗಾಧರ ಶಾಸ್ತ್ರೀ,

ಆಸ್ಥಾನ ವಿದ್ವಾನ್,

ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ, ಮೈಸೂರು.



ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೭

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೪೩

# ಶ್ರೀ ಸಾಂಬಪುರಾಣಂ

(ಸಂಸ್ಕೃತಮೂಲ, ಮತ್ತು ಕನ್ನಡದ ಅರ್ಥಾನುವಾದದೊಡನೆ)

ಭಾಗ ೧

(ಅಧ್ಯಾಯ ೧—೩೮)

ಅನುವಾದಕ :

ಎಚ್. ಗಂಗಾಧರಶಾಸ್ತ್ರೀ,

ಆಸ್ಥಾನ ವಿದ್ವಾನ್

ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ, ಮೈಸೂರು.

ಶ್ರೀವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೭

# ಮುನ್ನುಡಿ

## ಶ್ರೀ ಸೂರ್ಯಪರಬ್ರಹ್ಮಣೇ ನಮಃ

---

ಸಾಂಬಪುರಾಣದ ಹೆಸರನ್ನು ಕೇಳಿದೊಡನೆಯೇ, ಇದರಲ್ಲಿ ಪಾರ್ವತೀಪತಿಯಾದ ಪರಶಿವನ ಪಾರಮ್ಯವು ವಿವೃತವಾಗಿರಬಹುದೆಂದು ಆಪಾತತಃ ಹೊಳೆಯುವದು. ಇಲ್ಲಿ ಹಾಗಿಲ್ಲ. ಶ್ರೀಕೃಷ್ಣ ಮತ್ತು ಜಾಂಬವತಿಯರಿಗೆ ಪುತ್ರನಾದ ಸಾಂಬನೆಂಬ ಯಾದವನು ಪಿತೃಶಾಪದಿಂದ ಕುಷ್ಠರೋಗವನ್ನು ಪಡೆದು, ಅದನ್ನು ಸೂರ್ಯಾರಾಧನೆಯಿಂದ ಕಳೆದುಕೊಂಡ ವಿಷಯವು ಇಲ್ಲಿ ಪ್ರತಿಪಾದಿತವಾಗಿರುವ ಅಂಶ. ಸಾಂಬನಿಗೆ ಪ್ರೋಕ್ತವಾದ ಸೂರ್ಯಮಹಿಮೆಯೇ ಈ ಪುರಾಣದ ಮುಖ್ಯ ಕಥಾವಸ್ತು.

ಅಷ್ಟಾದಶ ಮಹಾಪುರಾಣಗಳಲ್ಲಿಯೂ, ಹಾಗೆಯೇ ಹದಿನೆಂಟು ಉಪಪುರಾಣಗಳಲ್ಲಿಯೂ ಅಲ್ಲಲ್ಲಿ ಸಂದರ್ಭಾನುಸಾರವಾಗಿ, ಸೂರ್ಯದೇವತಾಪ್ರಭಾವ, ಆರಾಧನೆಯ ಕ್ರಮ, ಸೂರ್ಯೋತ್ಪತ್ತಿ, ಸೂರ್ಯಸಂಚಾರಾದಿಗಳು ವಿವೃತವಾಗಿವೆ. ಆದರೆ ಈ ಸಾಂಬಪುರಾಣದಲ್ಲಿರುವಂತೆ ಆದ್ಯಂತವಾಗಿ ಕೇವಲ ಸೂರ್ಯೋಪಾಸನಮಾರ್ಗವೊಂದೇ ಮತ್ತಾವ ಗ್ರಂಥದಲ್ಲಿಯೂ ಇರಲಾರದು. "ಆರೋಗ್ಯಂ ಭಾಸ್ಕರಾದಿಚ್ಛೇತ್" ಎಂಬ ಲೋಕೋಕ್ತಿಯನ್ನು ವಿವರಿಸುವ ಸಲುವಾಗಿಯೇ ಸೂರ್ಯನಿಗೆ ಸಕಲ ಹೃದ್ರೋಗಾದಿಗಳ ನಿವಾರಕತ್ವವನ್ನು ಪ್ರತಿಪಾದಿಸಿ, ಸೂರ್ಯಾನುಗ್ರಹವನ್ನು ಸಂಪಾದಿಸುವ ವಿಧಿಯನ್ನು ಈ ಪುರಾಣದಲ್ಲಿ ವಿವರವಾಗಿ ತೋರ್ಪಡಿಸಿರುವರು. ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದ ಎಪ್ಪತ್ತುಮೂರನೆಯ ಅಧ್ಯಾಯದಿಂದ ಮುಂದಿನ ಕೆಲವು ಅಧ್ಯಾಯಗಳಲ್ಲಿ ಸಾಂಬನ ಕಥೆಯು ವಿಸ್ತಾರವಾಗಿಯೇ ಬಂದಿದೆ. ಅಲ್ಲಿ ಸಾಂಬನಿಗೆ ತಂದೆಯಿಂದ ಶಾಪವುಬಂದಂತೆ, ದೂರ್ವಾಸಮಹರ್ಷಿಗಳಿಂದಲೂ ಶಾಪಬಂದಿತ್ತೆಂದು ವರ್ಣಿತವಾಗಿದೆ. ಅಲ್ಲಿನ ಶ್ಲೋಕಗಳ ಆನುಪೂರ್ವಿಯಲ್ಲಿಯೂ ಸಾಂಬಪುರಾಣಕ್ಕೆ ಅನೇಕಕಡೆ ಸಾಮ್ಯವು ಕಂಡುಬರುತ್ತಿದೆ. ಇವೆರಡರ ಕಾಲನಿರ್ಣಯಕ್ಕೆ ಇಲ್ಲಿ ಗಮನಕೊಟ್ಟಿಲ್ಲವಾದುದರಿಂದ, ಯಾವ ಪುರಾಣದಿಂದ ಯಾವುದಕ್ಕೆ ಶ್ಲೋಕಗಳು ಬಂದಿವೆ, ಎಂಬುದನ್ನು ಹೇಳಲಾಗುವುದಿಲ್ಲ. ಪರಿವರ್ತನೆಯ ಕಾಲದಲ್ಲಿ ನನಗೆ ದೊರೆತ ಎರಡು ಸಾಂಬಪುರಾಣಪ್ರತಿಗಳಲ್ಲಿಯೂ, ಅನೇಕ ವ್ಯತ್ಯಾಸಗಳು ತೋರಿಬಂದುವು. ಅಧ್ಯಾಯಸಂಖ್ಯೆ, ಶ್ಲೋಕಗಳ ಆನುಪೂರ್ವಿ, ಇವುಗಳಲ್ಲಿ ಸಹ ಹೆಚ್ಚುವ್ಯತ್ಯಾಸವು ಕಂಡುಬಂದಿತು. ವಿಷಯದಕಡೆಗೆ ನೋಡಿದರೆ ಸಾಂಬಪುರಾಣದಲ್ಲಿ ಉಕ್ತವಾಗಿರುವ ಸೂರ್ಯ ಪ್ರತಿಮಾನಿರ್ಮಾಣ, ಸೂರ್ಯಸ್ತುತಿ, ಸೂರ್ಯಾರಾಧನಕ್ರಮ ಮೊದಲಾದುವುಗಳು ವಿಸ್ತಾರವಾಗಿ

ಭವಿಷ್ಯಪುರಾಣದಲ್ಲಿಯೂ ಅಲ್ಲಲ್ಲಿ ದೊರೆಯುವುವು. ಆದರೆ ಅವೆಲ್ಲವೂ ಕ್ರಮವಾಗಿ ಒಂದೇಕಡೆ ದೊರೆಯುವಂತೆ ಈ ಸಾಂಬಪುರಾಣದಲ್ಲಿ ವಿಷಯವನ್ನು ಅಳವಡಿಸಿರುವರು. ಮತ್ತು ಭವಿಷ್ಯಪುರಾಣದಲ್ಲಿಲ್ಲದ ಸೂರ್ಯಪೂಜಾ ವಿಶೇಷಗಳು ಸಾಂಬಪುರಾಣದ ಕೊನೆಯ ಮೂವತ್ತು ಅಧ್ಯಾಯಗಳಲ್ಲಿ ದೊರೆಯುವುವು. ಗ್ರಂಥಶೈಲಿ, ವಿಷಯ ನಿರೂಪಣೆಯ ಕ್ರಮ ಇವು ಪ್ರಾಚೀನ ರೀತಿಯನ್ನೇ ಅನುಸರಿಸಿವೆ.

ಸೂರ್ಯಮಂಡಲ ವಿಷಯವನ್ನು ವಸ್ತುಸ್ವರೂಪ ದೃಷ್ಟಿಯಿಂದ ನೋಡಬೇಕಾದರೆ ಖಗೋಳಶಾಸ್ತ್ರದ ಕಡೆಗೆ ತಿರುಗಬೇಕು. ಪೂಜ್ಯರಾದ ವರಾಹಮಿಹಿರ, ಭಾಸ್ಕರಾಚಾರ್ಯ, ಆರ್ಯಭಟ ಮೊದಲಾದ ಮೇಧಾವಿಗಳೇ ಆ ಖಗೋಳಶಾಸ್ತ್ರಪ್ರವರ್ತಕರು. ಅವರು ಆಧುನಿಕ ವೈಜ್ಞಾನಿಕರಂತೆ ಕೇವಲ ಪದಾರ್ಥದ ಶಕ್ತಿಯಿಂದಲೇ ಪದಾರ್ಥಕ್ಕೆ ಬೆಲೆಯನ್ನು ಕೊಡತಕ್ಕವರು. ಅಂತಹವರೂ ಶ್ರೀ ಸೂರ್ಯದೇವನಲ್ಲಿ ಸರ್ವೇಶ್ವರತ್ವವನ್ನು ಒಪ್ಪಿಕೊಂಡಿರುವರು. ಆದರೆ ಅದಕ್ಕೆ ಅವರು ಕಾರಣವಾಗಿ ತೋರಿಸಿರುವ ವಿಷಯಗಳು ಮಾತ್ರ ಬೇರೆ. ಪ್ರಕೃತ ಈ ಪುರಾಣಕಾರರೂ ಸೂರ್ಯಪಾರಮ್ಯವನ್ನೇ ನಿರೂಪಿಸುತ್ತಾ, ಸೂರ್ಯನಲ್ಲಿಯೇ ಸಕಲ ಶಕ್ತಿಗಳಿರುವುದನ್ನೂ, ತತ್ಪ್ರಾಪ್ತಿಗಾಗಿ ಸೂರ್ಯಾರಾಧನೆ ಮಾಡುವುದೇ ಶ್ರೇಯಸ್ಕರವೆಂಬುದನ್ನೂ ಪ್ರತಿಪಾದಿಸಿರುವರು. ಪುರಾಣಕಾರರು ಸೂರ್ಯಾದಿ ಗ್ರಹಗಳ ವಿಷಯದಲ್ಲಿ ಆಡುವ ಮಾತುಗಳು ಖಗೋಳಶಾಸ್ತ್ರಜ್ಞರಿಗೆ ಸರಿಬರುವುದಿಲ್ಲ.

ಪುರಾಣದಲ್ಲಿ ಹೇಳುವ ಭೂಮಿಯ ಮತ್ತು ಗ್ರಹಗಳ ಆಕಾರನಿರೂಪಣೆಯನ್ನೂ, ಚಲನವಲನಾದಿಗಳನ್ನೂ ಭಾಸ್ಕರಾಚಾರ್ಯರೇ ಮೊದಲಾದವರು ಖಂಡಿಸಿರುವರು. ಖಗೋಳಶಾಸ್ತ್ರವಿಷಯವನ್ನು ಮಾತ್ರ ಪುರಾಣಿಕರು ಕೆಲವು ಕಡೆ ಖಂಡನೀಯವಾಗಿಯೇ ನಿರೂಪಿಸಿರುವರು. ಗ್ರಹಕಕ್ಷಾಕ್ರಮವನ್ನಂತೂ ಪ್ರತ್ಯಕ್ಷ ವಿರುದ್ಧವಾಗಿಯೇ ಹೇಳಿದ್ದಾರೆ. ಆದರಿಂದಲೇ ನಮ್ಮವರಿಗೆ ಖಗೋಳದ ಪರಿಚಯ ವಿರಲಿಲ್ಲವೆಂದು ಹೇಳಲಾಗುವುದಿಲ್ಲ. ಜನರು ಸೂರ್ಯಪರಮಾತ್ಮನಲ್ಲಿ ಸರ್ವೇಶ್ವರ ಭಾವನೆಯನ್ನಿಟ್ಟು, ಭಕ್ತಿಪೂರ್ವಕವಾಗಿ ಆರಾಧಿಸಿ, ಅದರಿಂದ ಸಕಲ ಸನ್ಮಂಗಳಗಳನ್ನೂ ಪಡೆಯಲಿ ಎಂಬುದೇ ಪುರಾಣಕಾರರ ಮುಖ್ಯ ಉದ್ದೇಶ. ಖಗೋಳ ವಿವರವನ್ನು ಜ್ಯೋತಿಷಿಕರಿಗೇ ಬಿಟ್ಟಿರುವರು. ಗ್ರಹಗಳಲ್ಲಿ ಸೂರ್ಯನೂ ಒಬ್ಬನೆನಿಸಿದರೂ, ಸ್ವಪ್ರಕಾಶಕವಾದ ಗ್ರಹವೆಂದರೆ ಸೂರ್ಯನೊಬ್ಬನೇ. ಇತರ ಗ್ರಹಗಳು ಸೂರ್ಯನಿಂದಲೇ ತೇಜಸ್ಸನ್ನು ಪಡೆದು ಪ್ರಕಾಶಿಸಬೇಕು. ಆಕಾರದಲ್ಲಿ, ದೂರಸ್ಥಿತಿಯಲ್ಲಿ, ಸೂರ್ಯನಿಗಿಂತ ದೊಡ್ಡಗ್ರಹಗಳಿರಬಹುದು. ಆದರೆ ತೇಜಸ್ಸಿನಲ್ಲಿ, ಆಕರ್ಷಣೆ ಮಾಡುವ ಸಾಮರ್ಥ್ಯದಲ್ಲಿ, ಸೂರ್ಯದೇವನಿಗೆ ಸಮನಾದ ಗ್ರಹವೊಂದಿಲ್ಲ ಎಂಬುದನ್ನು ಎಲ್ಲರೂ ಒಪ್ಪಿರುವರು. ಆದರೆ ಸಾಂಬಪುರಾಣದಲ್ಲಿ ಸೂರ್ಯ ಚಂದ್ರರ ಗ್ರಹಣವಿಷಯವನ್ನು ಮಾತ್ರ ಇತರ ಪುರಾಣಕಾರರು ಹೇಳಿರುವುದಕ್ಕಿಂತ ಸ್ವಲ್ಪ ಖಗೋಳಶಾಸ್ತ್ರಕ್ಕೆ ಅವಿರುದ್ಧವಾಗಿರುವಂತೆ ಸೂಚಿಸಿರುವರು

ಇತರ ಪುರಾಣಗಳಲ್ಲಿ ರಾಹುಕೇತುಗಳು ರಾಕ್ಷಸರು. ಅವರು ಸೂರ್ಯಚಂದ್ರರಿಂದ ತಮಗುಂಟಾದ ಅನ್ಯಾಯಕ್ಕಾಗಿ ಅವರಿಬ್ಬರನ್ನೂ ಗ್ರಹಣಕಾಲದಲ್ಲಿ ಪೀಡಿಸುವರೆಂದು ವರ್ಣಿತವಾಗಿದೆ. ಆದರೆ ಈ ಪುರಾಣದಲ್ಲಿ ರಾಹುಕೇತುಗಳು ಆಚ್ಛಾದಕರಾಗುವರೇ ಹೊರತು ಗ್ರಹಪೀಡೆಯನ್ನುಂಟುಮಾಡಲಾರರು. ಭೂಛಾಯೆಯಿಂದ ಚಂದ್ರ ಗ್ರಹಣವೂ, ಚಂದ್ರಾಚ್ಛಾದನೆಯಿಂದ ಸೂರ್ಯಗ್ರಹಣವೂ ಆಗುವುದೆಂಬ ಖಗೋಳಜ್ಞರ ಅಭಿಪ್ರಾಯಕ್ಕೆ ಈ ಪುರಾಣಕಾರರು ಮಾತ್ರ ಬೆಂಬಲಕೊಟ್ಟಿರುವರು. ಒಟ್ಟಿನಲ್ಲಿ ನಮ್ಮ ಪ್ರಾಚೀನರು, ಖಗೋಳಶಾಸ್ತ್ರದ ದೃಷ್ಟಿಯಿಂದಲೂ, ಪುರಾಣ ಕಥಾಮಾರ್ಗದಿಂದಲೂ, ಸೂರ್ಯಪರಮಾತ್ಮನಲ್ಲಿ ಅನೇಕ ಮಹಿಮೆಗಳನ್ನೂ, ದಿವ್ಯಶಕ್ತಿಯನ್ನೂ ತೋರ್ಪಡಿಸಿ, ಸಕಲಜಗನ್ನಿಯಾಮಕನೆನಿಸಿ ಪ್ರತ್ಯಕ್ಷದೈವವೆನಿಸಿದ ಸೂರ್ಯದೇವನೇ ಪರಬ್ರಹ್ಮ ವಸ್ತುವು, ಅದೇ ಜಗತ್ಪೂಜ್ಯವಾದುದು, ಐಹಿಕಾಮುಷ್ಮಿಕಾದಿ ಸಕಲಸುಖಗಳೂ ಅವನ ಅನುಗ್ರಹದಿಂದಲೇ ಜನರಿಗೆ ಲಭಿಸುವುವು ಎಂಬುದನ್ನು ನಾನಾ ಪ್ರಕಾರ ಗಳಿಂದ ತಿಳಿಯಪಡಿಸಿರುವರು. ಆದರೆ ಸೂರ್ಯಾದಿಗ್ರಹಗಳ ವಿಷಯದಲ್ಲಿ ನಮ್ಮವರು ವಿಮರ್ಶೆಮಾಡಿರುವುದನ್ನು ನಾವು ತಿಳಿಯಬೇಕಾದರೆ ಹೆಚ್ಚಾಗಿ ವರಾಹಮಿಹಿರಾದಿ ಗಳಿಂದ ಪ್ರತಿಪಾದಿತವಾದ ಖಗೋಳಶಾಸ್ತ್ರಗಳ ಕಡೆಗೆ ದೃಷ್ಟಿಯಿಡಬೇಕೇ ಹೊರತು, ಪುರಾಣಕಾರರ ಅಭಿಪ್ರಾಯವನ್ನೇ ಸಿದ್ಧಾಂತವಾಗಿಟ್ಟುಕೊಳ್ಳುವುದು ಯುಕ್ತವಲ್ಲ.

ಆಸ್ತಿಕವರೇಣ್ಯರೂ, ಪಂಡಿತಮಾನ್ಯರೂ, ಸಂಸ್ಕೃತ ಮತ್ತು ಕನ್ನಡಸಾಹಿತ್ಯಾಭಿ ವರ್ಧಕರೂ ಎನಿಸಿದ ನಮ್ಮ ಶ್ರೀಮನ್ಮಹಾರಾಜರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**, ಜಿ. ಸಿ. ಬಿ., ಜಿ.ಸಿ. ಎಸ್. ಐ. ಮಹಾಪ್ರಭುಗಳು, ಈ ಪ್ರಾಚೀನ ಗ್ರಂಥಗಳ ಪುನರುದ್ಧಾರಕ್ಕೆ ದೀಕ್ಷಾಬದ್ಧರಾಗಿ ನಿಂತಿರುವುದು, ಕನ್ನಡ ನಾಡಿನ ಪ್ರಜೆಗಳ ಸುಯೋಗವೆಂದೇ ತಿಳಿಯಬೇಕು. ರಾಜರ್ಷಿಗಳಂತಿರುವ ಮಹಾ ಪ್ರಭುಗಳವರಿಗೂ, ಅವರ ಕುಟುಂಬವರ್ಗಕ್ಕೂ ಜಗದೀಶ್ವರನು ಸರ್ವದಾ ಆಯುರಾ ರೋಗ್ಯೈಶ್ವರ್ಯಗಳನ್ನೂ, ಸತ್ಸಂತಾನಸಂಪತ್ತನ್ನೂ ದಯಪಾಲಿಸಲಿ ಎಂದು ಶ್ರೀಸೂರ್ಯ ಪರಮಾತ್ಮನನ್ನು ನಾನು ಸದಾ ಪ್ರಾರ್ಥಿಸುತ್ತೇನೆ.

ಇತಿ ಸಜ್ಜನವಿಧೇಯ,

ಶ್ರೀ ಸರ್ವಜಿನ್ನಾಮ ಸಂವತ್ಸರದ
ಜ್ಯೇಷ್ಠ ಶುದ್ಧ ದ್ವಿತೀಯಾ ಗುರುವಾರ
ತಾ॥ 22—5—1947.

**ಹೊನ್ನೇನಹಳ್ಳಿ, ಗಂಗಾಧರಶಾಸ್ತ್ರೀ,**
ಆಸ್ಥಾನ ವಿದ್ವಾನ್, ಮೈಸೂರು.

# ಶ್ರೀ ಸಾಂಬಪುರಾಣದ ಮೊದಲನೆಯ ಮೂವತ್ತೆಂಟು ಅಧ್ಯಾಯಗಳ ವಿಷಯಾನುಕ್ರಮಣಿಕೆ.



ಶ್ರೀಃ

॥ ಶ್ರೀ ಗಣೇಶಾಯ ನಮಃ ॥

# ಅಥ ಸಾಂಬಪುರಾಣಂ ಪ್ರಾರಭ್ಯತೇ



## ಪ್ರಥಮೋಽಧ್ಯಾಯಃ

**ನಮಃ ಸವಿತ್ರೇ ಜಗದೇಕಚಕ್ಷುಷೇ ಜಗತ್ಪ್ರಸೂತಿಸ್ಥಿತಿನಾಶಹೇತವೇ ।**
**ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ ವಿರಿಂಚಿನಾರಾಯಣ**
**ಶಂಕರಾತ್ಮನೇ ॥ ೧ ॥**

**ಸಮಸ್ತಪ್ರಾಣದೇಹಾಯ ಸದಾ ವಿಶುದ್ಧಬುದ್ಧಯೇ ।**
**ತ್ರಯೀಮಯಾಯ ದೇವಾಯ ನಮೋ ಲೋಕೈಕಸಾಕ್ಷಿಣೇ ॥ ೨ ॥**

---

### ಒಂದನೆಯ ಅಧ್ಯಾಯ.

೧. ಸಮಸ್ತ ಲೋಕಕ್ಕೂ ಮುಖ್ಯ ಕಣ್ಣಿನಂತಿರುವ, ಮತ್ತು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಿರುವ ಸವಿತೃ ದೇವತಾತ್ಮಕನಾದ ಶ್ರೀ ಸೂರ್ಯ ದೇವನಿಗೆ ನಮಸ್ಕಾರ. ಶ್ರೀ ಸೂರ್ಯನಾರಾಯಣನು ವೇದತ್ರಯಾತ್ಮಕನು, ಸತ್ತ್ವ ರಜಸ್ತಮೋಗುಣಗಳುಳ್ಳವನು. ಬ್ರಹ್ಮ, ವಿಷ್ಣು, ಶಂಕರರೆಂಬ ಮೂರ್ತಿತ್ರಯದಿಂದ ವಿರಾಜಿಸುವವನು. ಇಂತಹ ಮಹಾಮಹಿಮನಾದ ಶ್ರೀ ಸೂರ್ಯನಾರಾಯಣನನ್ನು ನಾನು ಭಕ್ತಿಯಿಂದ ವಂದಿಸುತ್ತೇನೆ.

೨. ಪಂಚಪ್ರಾಣಗಳಿಗೂ ದೇಹದಂತೆ ಆಶ್ರಯವಿತ್ತಿರುವವನು ಸೂರ್ಯನು. ಮಾಯಾರಹಿತನಾಗಿ, ಅಜ್ಞಾನದ ಸಂಬಂಧವೇ ಇಲ್ಲದೆ ವೇದತ್ರಯಾತ್ಮಕನಾಗಿ, ಲೋಕಚರ್ಯೆಗಳನ್ನು ಪ್ರತ್ಯಕ್ಷವಾಗಿ ನೋಡುತ್ತಿರುವ ಸೂರ್ಯದೇವನಿಗೆ ನಮಸ್ಕಾರವು.

ಪಿತಾಮಹಾಯ ಕೃಷ್ಣಾಯ ಯೋಗಿನೇ ವ್ಯಕ್ತರೂಪಿಣೇ ।
ಭೂತಭವ್ಯಭವಿಷ್ಯಾಯ ವಿಶ್ವಸಂಸೃಷ್ಟಯೇ ನಮಃ ॥ ೩ ॥

ನಮಸ್ತಸ್ಮೈ ಮುನೀಶಾಯ ಸನ್ನತಾಯ ತಪಸ್ವಿನೇ ।
ಶಾಂತಾಯ ವೀತರಾಗಾಯ ತಸ್ಮೈ ಜ್ಞಾನಾತ್ಮನೇ ನಮಃ ॥ ೪ ॥

ನಮಸ್ತಸ್ಮೈ ವಿಧಾತ್ರೇ ಚ ಸ್ವವ್ಯಕ್ತಪ್ರಭವಾಯ ಚ ।
ಭೂತಸಂಹಾರತಿಗ್ಮಾಯ ಭಾಸ್ಕರಾಯ ಗಭಸ್ತಿನೇ ॥ ೫ ॥

ಶಕ್ರೋ ವಹ್ನಿರ್ಯಮೋ ರಕ್ಷೋ ವರುಣೋಽಥ ಸಮೀರಣಃ ।
ಧನದಶ್ಚೇಶ್ವರಶ್ಚೈವ ಅಥ ಊರ್ಧ್ವಂ ತಥೈವ ಚ ॥ ೬ ॥
ಯೇ ದಿಶೋ ವ್ಯಾಪ್ಯ ತಿಷ್ಠಂತಿ ತಸ್ಮೈ ಸರ್ವಾತ್ಮನೇ ನಮಃ ।

---

೩. ಸೃಷ್ಟಿಕಾರ್ಯದಲ್ಲಿ ಬ್ರಹ್ಮನಂತೆಯೂ, ದುಷ್ಟನಾಶಕನಾಗಿ ಕೃಷ್ಣನಂತೆಯೂ, ಅವತರಿಸಿ, ಯೋಗಶಾಸ್ತ್ರಜ್ಞನಾಗಿಯೂ, ಪ್ರತ್ಯಕ್ಷರೂಪಿಯಾಗಿಯೂ ಇದ್ದೂ, ವರ್ತಮಾನ, ಭೂತ, ಭವಿಷ್ಯತ್ತೆಂಬ ಕಾಲತ್ರಯಸ್ವರೂಪನಾಗಿಯೂ, ಲೋಕ ನಿರ್ಮಾಣಕನಾಗಿಯೂ ಇರುವ ಪರಮಾತ್ಮನಿಗೆ ನಮಸ್ಕಾರ.

೪. ಸಮಸ್ತ ಮುನಿಗಳೂ ಯಾರನ್ನು ಕುರಿತು ತಪಸ್ಸುಮಾಡುವರೋ. ಯಾರು ಕೇವಲ ತಪಸ್ವಿಯಂತೆ, ಶಾಂತಸ್ವಭಾವದವನೂ, ರಾಗದ್ವೇಷಾದಿಗಳನ್ನು ದೂರಮಾಡಿದವನೂ ಆಗಿರುವನೋ, ಅಂತಹ ಜ್ಞಾನರೂಪಿಯಾದ ಸೂರ್ಯ ನಾರಾಯಣನಿಗೆ ವಂದನೆ.

೫. ಲೋಕದ ಸೃಷ್ಟಿಕರ್ತನೂ, ಸ್ವಸ್ವರೂಪದಿಂದ ಪ್ರಕಾಶಿಸುವವನೂ, ಪಂಚ ಭೂತಗಳನ್ನೂ ನಾಶಪಡಿಸುವ ಕಿರಣಗಳುಳ್ಳವನೂ, ಪ್ರಕಾಶಮಾನವಾದ ತೇಜಸ್ಸುಳ್ಳ ವನೂ ಆದ ದಿವಸ್ಪತಿಯೇ, ನಿನಗೆ ಸಾಷ್ಟಾಂಗ ಪ್ರಣಾಮವು.

೬. ಎಂಟು ದಿಕ್ಕುಗಳಿಗೂ ಕ್ರಮವಾಗಿ, ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನ ಎಂಬ ದಿಕ್ಪತಿಗಳಿರುವರು. ಅವರೆಲ್ಲರೂ ಬೇರೆ ಬೇರೆಯಾಗಿ ಕಂಡರೂ, ಆ ಅಷ್ಟದಿಕ್ಪತಿಗಳಿಗೂ ಮತ್ತು ಊರ್ಧ್ವಾಧೋಭಾಗಗಳಿಗೂ ಒಡೆಯನೆನಿಸಿ, ಸರ್ವಾತ್ಮನಾಗಿರುವ ಸೂರ್ಯದೇವನಿಗೆ ನಮಸ್ಕಾರ.

ಶೌನಕೋ ನೈಮಿಷಾರಣ್ಯೇ ಪುರಾ ಸೂತಮಪೃಚ್ಛತ ।
ಸತ್ರೇ ದ್ವಾದಶವಾರ್ಷಿಕ್ಯೇ ಗತೇ ಕಾಲೇ ಚ ವಿಶ್ರುತೇ ॥ ೭ ॥

ಏತಸ್ಮಿನ್ನಂತರೇ ಕಾಲೇ ಕಥಾಮೇತಾಮಪೃಚ್ಛತ ।
ತ್ವಯಾತ್ರ ಕಥಿತಾ ಸೂತ ಪುರಾಣಾ ಬಹುವಿಸ್ತರಾ (?) ॥ ೮ ॥

ಷಣ್ಮುಖಸ್ಯ ಕಥಾ ಚಾದೌ ಪುನರ್ಬ್ರಹ್ಮಾಂಡಮೇವ ಚ ।
ವಾಯುನಾಪಿ ಚ ಯತ್ಪ್ರೋಕ್ತಂ ತಥಾ ಸಾವರ್ಣಿಕೇನ ಚ ॥ ೯ ॥

ಮಾರ್ಕಂಡೇಯೇನ ಯತ್ಪ್ರೋಕ್ತಂ ಯದ್ವೈಶಂಪಾಯನೇನ ಚ ।
ದಧೀಚಿನಾ ಚ ಯತ್ಪ್ರೋಕ್ತಂ ಯಚ್ಚ ಶರ್ವೇಣ ಭಾಷಿತಂ ॥ ೧೦ ॥

ಹರಿಣಾಪಿ ಚ ಯತ್ಪ್ರೋಕ್ತಂ ಋಷಿಭಿಸ್ಸಮುದಾಹೃತಂ ।
ವಾಲಖಿಲ್ಯೈಶ್ಚ ಯತ್ಪ್ರೋಕ್ತಂ ಯಚ್ಛ್ರುತಂ ಚರ್ಷಿಭಿಸ್ಸಹ ॥ ೧೧ ॥

---

೭. ಹಿಂದೆ ಒಂದುಸಾರಿ ನೈಮಿಷಾರಣ್ಯ ಕ್ಷೇತ್ರದಲ್ಲಿ ಸತ್ರಾತ್ಮಕವಾದ ಒಂದು ದೊಡ್ಡಯಾಗವು ಹನ್ನೆರಡು ವರ್ಷಪರ್ಯಂತವಾಗಿ ನಡೆಯಿತು. ಆ ಸಮಯದಲ್ಲಿ ಶೌನಕಮಹರ್ಷಿಯು ಸೂತಮಹಾಮುನಿಯನ್ನು ಕುರಿತು ಹೀಗೆ ಪ್ರಶ್ನೆಮಾಡಿದನು.

೮. ಆ ಕಾಲದಲ್ಲಿಯೇ ಈ ಸಾಂಬಪುರಾಣದ ಕಥೆಯು ಶೌನಕಾದಿಗಳಿಗೆ ಸೂತನಿಂದ ಹೇಳಲ್ಪಟ್ಟಿತು. ಮೊದಲು ಶೌನಕನು ಸೂತನನ್ನು ಕುರಿತು ಮುನಿಯೇ, ನೀನು ಇಲ್ಲಿನವರೆಗೆ ಅನೇಕ ಪುರಾಣಕಥೆಗಳನ್ನು ಬಹು ವಿಸ್ತಾರವಾಗಿ ತಿಳಿಸಿರುವೆ.

೯-೧೧. ಮೊದಲು ಗುಹನಿಂದ ಹೇಳಲ್ಪಟ್ಟ ಸ್ಕಾಂದಪುರಾಣ, ಬ್ರಹ್ಮಾಂಡ ಪುರಾಣ, ವಾಯುಪುರಾಣ, ಸಾವರ್ಣಿಕಪ್ರೋಕ್ತವಾದ ಬ್ರಹ್ಮಾಂಡ ಪುರಾಣ, ಮಾರ್ಕಂಡೇಯ ಪುರಾಣ, ವೈಶಂಪಾಯನೋಕ್ತವಾದ ಮಹಾಭಾರತ, ದಧೀಚಿಯಿಂದ ಉಕ್ತವಾದ ಪದ್ಮಪುರಾಣ, ಶಿವಪುರಾಣ, ವಿಷ್ಣುಪುರಾಣ, ಇನ್ನೂ ವಾಲಖಿಲ್ಯಾದಿಗಳಿಂದ ಹೇಳಲ್ಪಟ್ಟ ಇತಿಹಾಸಾದಿಗಳು ಇವೆಲ್ಲವನ್ನು ನನಗೂ ಇತರ ಋಷಿಗಳಿಗೂ ವಿವರವಾಗಿ ತಿಳಿಸಿರುವೆ.

ಹರಿಪುತ್ರಕೃತಂ ಚಾತ್ರ ನ ತ್ವಯಾ ಕಥಿತಂ ಮುನೇ ।
ನ ಮೇ ಕರ್ಣಸುಖಂ ಮೌನಂ ಪ್ರೀಣಾತ್ಯಮೃತಸಂಮಿತಂ ॥ ೧೨ ॥

ಭಾಸ್ಕರಸ್ಯ ಪುರಾಣಂ ಯತ್ಪೃಷ್ಟಂ ಸಾಂಬೇನ ಧೀಮತಾ ।
ತದೇತದ್ವಾದಶಾಕಾರಂ ನ ತ್ರಿಂಶಾರ್ಧಮೂರ್ತಿಕಂ ॥ ೧೩ ॥

ಪುರಾಣಮಖಿಲಂ ಚಾತ್ರ ಸರ್ವಶಾಸ್ತ್ರಪ್ರತಿಷ್ಠಿತಂ ।
ಕಥಯಸ್ವ ಮಹಾಭಾಗ ಯಥಾವಚ್ಛ್ರುತವಾನಸಿ ॥ ೧೪ ॥

॥ ಸೂತ ಉವಾಚ ॥

ಪ್ರಶ್ನಭಾರೋ ಮಹಾನೇಷ ಯಥಾ ವದಸಿ ಸುವ್ರತ ।
ಯನ್ಮಹಾಭಾರತಾಖ್ಯಾನಾದ್ಪೃಹ್ವರ್ಥಃ ಶ್ರುತಿವಿಸ್ತರಾತ್ ॥ ೧೫ ॥

---

೧೨. ಆದರೆ ಶ್ರೀಕೃಷ್ಣನ ಮಗನಾದ ಸಾಂಬನು ಹೇಳಿರುವ ಪುರಾಣದ ಕಥೆಯನ್ನು ಮಾತ್ರ ನಾನು ಇದುವರೆಗೂ ಕೇಳಿಲ್ಲ. ಅಲ್ಲದೆ ಸುಮ್ಮನೆ ಮಾತನಾಡದೆ ಕುಳಿತಿರುವುದು ನನಗೆ ಕರ್ಣಸುಖವನ್ನು ಕೊಡಲಾರದು. ಪುರಾಣ ಶ್ರವಣವು ಅಮೃತಪಾನಕ್ಕೆ ಸಮನಲ್ಲವೇ !

೧೩. ಸಾಂಬನು ಸೂರ್ಯಮಹಿಮೆಯನ್ನು ತಿಳಿಯಲೋಸುಗ ಕೇಳಿದ ಸಂದರ್ಭದಲ್ಲಿ, ವಸಿಷ್ಠಋಷಿಗಳು ಹೇಳಿದ. ಸೂರ್ಯ ಪ್ರಭಾವವನ್ನು ನಾನು ಈಗ ಕೇಳಲು ಇಷ್ಟಪಡುತ್ತೇನೆ. ಸೂರ್ಯನು ದ್ವಾದಶಾತ್ಮನಲ್ಲವೇ ? ಕೆಲವುಕಡೆ ಉಕ್ತವಾಗಿರುವಂತೆ ಸೂರ್ಯನು ಎಂದೂ ಪಂಚದಶಾತ್ಮಕನಲ್ಲವಷ್ಟೆ.

೧೪. ಈ ಸಾಂಬಪುರಾಣದಲ್ಲಿ ಸರ್ವಶಾಸ್ತ್ರಗಳ ಸಾರವೂ ಉಕ್ತವಾಗಿದೆಯೆಂದು ಕೇಳಿದ್ದೇನೆ. ಆದ್ದರಿಂದ ಮಹರ್ಷಿಯೇ, ಅದನ್ನು ನನಗೆ ಸಂಪೂರ್ಣವಾಗಿ ಈಗ ತಿಳಿಸಬೇಕು. ಎಂದು ಶೌನಕಮಹರ್ಷಿಯು ಕೇಳಿಕೊಳ್ಳಲು,

೧೫. ಸೂತಮಹರ್ಷಿಗಳು ಶೌನಕನಿಗೆ ಹೀಗೆ ಹೇಳಲಾರಂಭಿಸಿದರು. ಶೌನಕನೆ, ನೀನು ಕೇಳಿದ ಪ್ರಶ್ನೆಯು ಬಹಳ ದೊಡ್ಡದು. ಮಹಾಭಾರತದ, ಮತ್ತು ವೇದಗಳಮುಖ್ಯಸಾರವು. ಈ ಪುರಾಣದಲ್ಲಿ ಉಕ್ತವಾಗಿದೆ. ಅವೆಲ್ಲಕ್ಕಿಂತಲೂ ಇದೇ ಅಧಿಕ ಫಲಕಾರಿಯೆಂದರೆ ತಪ್ಪಲ್ಲ.

ಪುರಾಣಾನಾಂ ಚ ಸರ್ವೇಷಾಂ ಪ್ರವರಃ ಪ್ರಶ್ನ ಉತ್ತರಃ ।
ಕಥಾಶ್ಚ ವಿವಿಧಾಶ್ಚಿತ್ರಾಃ ಪುರಾಣಾಃ ಸಂಪ್ರತಿಷ್ಠಿತಾಃ ॥ ೧೬ ॥

ವೇದಾರ್ಥಸ್ಮೃತಿಸಾರಾಣಿ ವರ್ಣಧರ್ಮಾಶ್ರಮಾಣಿ ಚ ।
ಭೂತಂ ಭವ್ಯಂ ಭವಿಷ್ಯಂ ಚ ಮಂತ್ರವಾದಸ್ತಥೈವ ಚ ॥ ೧೭ ॥

ಉತ್ಪತ್ತಿಃ ಪ್ರಲಯಶ್ಚೈವ ಪೂಜಾಯಾಶ್ಚ ವಿಧಾನಕಂ ।
ಸಾಂಗೋಪಾಂಗಸಮಾಹಾರೋ ವಿಧಿಪೂಜಾಪ್ರವರ್ತನಂ ॥ ೧೮ ॥

ವಶ್ಯಾಕರ್ಷಣವಿದ್ವೇಷಸ್ತಂಭನೋಚ್ಚಾಟನಾದಿಕಂ ।
ಪ್ರತಿಮಾಲಕ್ಷಣಂ ಚೈವ ಪೂಜಾನ್ಯಾಸವಿಧಾನಕಂ ॥ ೧೯ ॥

ಮಂಡಲಾನಿ ಕ್ರಿಯಾಯೋಗಾಃ ಸಿದ್ಧಿಯೋಗಶ್ಚ ಸಾಧನಂ ।
ಮಹಾಮಂಡಲಯಾಗಾಶ್ಚ ಸಾನ್ನಿಧ್ಯಂ ದ್ವಾದಶಾತ್ಮನಃ ॥ ೨೦ ॥

೧೬. ಎಲ್ಲಾ ಪುರಾಣಗಳಲ್ಲಿಯೂ ಇದು ಶ್ರೇಷ್ಠವೆನಿಸಿದೆ. ಇದರಲ್ಲಿ ಅನೇಕ ಹಿಂದಿನ ಕಥೆಗಳು ಚಿತ್ರವಿಚಿತ್ರವಾಗಿ ಉಕ್ತವಾಗಿವೆ.

೧೭-೧೮. ಈ ಪುರಾಣದಲ್ಲಿ ಶ್ರುತಿ, ಸ್ಮೃತಿ, ಇವುಗಳ ಸಾರಾರ್ಥವೂ, ವರ್ಣಾಶ್ರಮಧರ್ಮಗಳ ವಿಷಯವೂ, ವರ್ತಮಾನ ಭೂತ ಭವಿಷ್ಯತ್ಕಾಲಿಕ ವೃತ್ತಾಂತಗಳೂ, ಅಲ್ಲಲ್ಲಿ ಕಂಡುಬರುತ್ತವೆ. ಅಲ್ಲದೆ ಮಂತ್ರವಾದ, ಸೃಷ್ಟಿ, ಪ್ರಲಯ, ದೇವಪೂಜಾಕ್ರಮ, ಅಂಗ ಪ್ರತ್ಯಂಗಗಳಿಂದ ಸಹಿತವಾದ ಪೂಜಾವಿಧಿಗಳೂ ಸ್ಪಷ್ಟವಾಗಿ ಉಕ್ತವಾಗಿವೆ.

೧೯-೨೦. ವಶೀಕರಣ, ಆಕರ್ಷಣ, ದ್ವೇಷಸಾಧನ, ಸ್ತಂಭನ, ಉಚ್ಚಾಟನ, ಹಾಗೆಯೇ ಪ್ರತಿಮಾಲಕ್ಷಣ, ಪೂಜಾಕ್ರಮದಲ್ಲಿ ನ್ಯಾಸವಿಧಿಗಳು, ಮಂಡಲನಿರ್ಮಾಣ, ಯಾಗಗಳು, ಸಿದ್ಧಿಯೋಗಗಳು, ಮಹಾಮಂಡಲ ಯಾಗಗಳೂ, ಅವುಗಳಲ್ಲಿ ಸೂರ್ಯಸಾನ್ನಿಧ್ಯಪ್ರಾಪ್ತಿ-ಇವೇ ಮುಂತಾದ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ.

ಭೂಮೇರ್ವಾ ತೋಷಣಂ ಚೈವ ಪುಷ್ಪಧೂಪವಿಧಿಸ್ತಥಾ
ಸಪ್ತಮೀಕರಣಂ ಚೈವ ಉಪವಾಸವಿಧಿಸ್ತಥಾ ॥ ೨೦ ॥

ಪ್ರೋಕ್ಷಣಂ ಯಚ್ಚ ದಾನಸ್ಯ ಫಲಂ ಯಚ್ಚ ಪ್ರಕೀರ್ತಿತಂ ।
ವೇಲಾಕಾಲವಿಧಾನಂ ಚ ಯಶ್ಚ ಧರ್ಮವಿಧಿಸ್ತಥಾ ॥ ೨೧ ॥

ಧೂಪಕರ್ಮವಿಧಿಶ್ಚೈವ ಜಯಸ್ಯಾಪಿ ತಥಾ ವಿಧಿಃ ।
ಪ್ರಯತಾ ಪ್ರಯತಸ್ಯೈವ ತಥಾ ಸ್ವಪ್ನಾನುವರ್ಣನಂ ॥ ೨೩ ॥

ಪ್ರಾಯಶ್ಚಿತ್ತವಿಧಾನಂ ಚ ತಥಾಚಾರಸ್ಯ ಲಕ್ಷಣಂ ।
ದೀಕ್ಷಣಂ ಸರ್ವಶಿಷ್ಯಾಣಾಂ ಮಂತ್ರೇಣಾಪಿ ವಿನಿಶ್ಚಯಃ ॥ ೨೪ ॥

ಸ್ತವಾಶ್ಚ ವಿವಿಧಾಶ್ಚೈವಂ ಹ್ಯಸ್ಮಿನ್ ಗ್ರಂಥೇ ಸಮಾಸತಃ ।
ಭವಿಷ್ಯಂತಿ ಯಥಾನ್ಯಾಯಮಾಥಾಯ ವಿವಿಧಾಶ್ರಯಾಃ ॥ ೨೫ ॥

---

೨೦-೨೨. ಭೂಕರ್ಷಣಕ್ರಮ, ಹೂವು, ಧೂಪ ಇವುಗಳನ್ನು ನಿರ್ಮಿಸುವ ಕ್ರಮ, ಸಪ್ತಮೀವ್ರತವಿಧಿ, ಪ್ರೋಕ್ಷಣ, ದಾನಫಲ, ಇವುಗಳಿಗೆ ಯೋಗ್ಯವಾದ ಕಾಲನಿರೂಪಣ, ಧರ್ಮನಿರೂಪಣ ಇವು ಸ್ಪಷ್ಟವಾಗಿ ಉಕ್ತವಾಗಿವೆ.

೨೩-೨೫. ಧೂಪಕರ್ಮವಿಧಿ, ಜಯಲಾಭವಿಧಿ, ಪ್ರಯತ್ನವಿಧಿ, ಪ್ರಯತ್ನ ಸಿದ್ಧಿಕ್ರಮ, ಸ್ವಪ್ನ ಚಿಂತಾವರ್ಣನ, ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವಿಧಿ, ಆಚಾರ್ಯಲಕ್ಷಣ, ಶಿಷ್ಯದೀಕ್ಷಾವಿಧಿ, ಮಂತ್ರವಿನಿಶ್ಚಯ, ವಿವಿಧವಾದ ದೇವತಾಸ್ತೋತ್ರಗಳು, ಇವೇ ಮೊದಲಾದ ಅನೇಕ ವಿಷಯಗಳು ಈ ಗ್ರಂಥದಲ್ಲಿ ಪ್ರತಿಪಾದಿತವಾಗಿದೆ. ನ್ಯಾಯ ಸಂಬಂಧವಾದ ಅನೇಕ ವಿಷಯಗಳಿಗೆ ಈ ಪುರಾಣವು ಆಶ್ರಯವನ್ನಿತ್ತಿದೆ ಎಂದು ವ್ಯಾಸಮಹರ್ಷಿಗಳು ಶೌನಕಾದಿಗಳಿಗೆ ಹೇಳಿದರೆಂಬಲ್ಲಿಗೆ—

**ಇತಿ ಶ್ರೀ ಸಾಂಬಪುರಾಣೇ ಉದ್ದೇಶಾನುಕ್ರಮಣಿಕಾಕಥನಂ ನಾಮ ಪ್ರಥಮೋಽಧ್ಯಾಯಃ.**

---

ಸಾಂಬಪುರಾಣದಲ್ಲಿ ಉದ್ದೇಶಾನುಕ್ರಮಣಿಕೆಯನ್ನು ವಿವರಿಸುವ ಮೊದಲನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವಿತೀಯೋಽಧ್ಯಾಯಃ.

॥ ಸೂತ ಉವಾಚ ॥

ವಸಿಷ್ಠಂ ಸ್ವಸ್ಥಮಾಸೀನಮೃಷಿರಾಜಂ ಬೃಹದ್ಬಲಃ ।
ರಘುವಂಶೋದ್ಭವೋಽಪೃಚ್ಛದ್ಗುರುಂ ನಿಃಶ್ರೇಯಸಂ ಪರಂ ॥ ೧ ॥

ಭಗವನ್ ಶ್ರೋತುಮಿಚ್ಛಾಮಿ ಪರಂ ಬ್ರಹ್ಮ ಸನಾತನಂ ।
ಯಸ್ಮಿನ್ನಪುರಾವೃತ್ತಿಂ ಪ್ರಾಪ್ನುವಂತಿ ಮನೀಷಿಣಃ ॥ ೨ ॥

---

## ಎರಡನೆಯ ಅಧ್ಯಾಯ.

೧. ಸೂತಮಹರ್ಷಿಯು ಶೌನಕಾದಿಗಳಿಗೆ ಮುಂದೆ ಸಾಂಬಪುರಾಣ ಕಥಾಭಾಗವನ್ನು ವಿವರಿಸಲು ಆರಂಭಿಸಿದನು. ಎಲ್ಲೈ ಶೌನಕಾದಿಗಳೇ, ಹಿಂದೆ ಒಂದುಸಾರಿ ಋಷಿಶ್ರೇಷ್ಠನೂ, ಮಹಾಮಹಿಮನೂ ಆದ ವಸಿಷ್ಠ ಮಹರ್ಷಿಯು ಶಾಂತಚಿತ್ತನಾಗಿ ಕುಳಿತಿರುವಾಗ, ರಘುವಂಶದಲ್ಲಿ ಶ್ರೇಷ್ಠನೆನಿಸಿಕೊಂಡಿದ್ದ ಬೃಹದ್ಬಲರಾಜನು ಬಂದು, ಭಕ್ತಿಯಿಂದ ವಂದಿಸಿ ಹೀಗೆ ಪ್ರಶ್ನೆ ಮಾಡಿದನು.

೨. ಪೂಜ್ಯಮಹರ್ಷಿಯೇ, ಯಾವ ಪರಬ್ರಹ್ಮವಿಷಯಕವಾದ ಜ್ಞಾನ ಸಂಪತ್ತನ್ನು ಪಡೆದು ವಿದ್ವಾಂಸರು ಪುನರ್ಜನ್ಮವಿಲ್ಲದ ಶಾಶ್ವತ ಮುಕ್ತಿಯನ್ನು ಸಂಪಾದಿಸುವರೋ, ಅಂತಹ ಸನಾತನವಾದ ಬ್ರಹ್ಮ ತತ್ತ್ವವನ್ನು ತಿಳಿಯ ಬಯಸುವೆನು.

ಗೃಹಸ್ಥೋ ಬ್ರಹ್ಮಚಾರೀ ವಾ ವಾನಪ್ರಸ್ಥೋऽಥ ಭಿಕ್ಷುಕಃ ।
ಯ ಇಚ್ಛೇನ್ಮೋಕ್ಷಮಾಸ್ಥಾತುಂ ದೇವತಾಂ ಕಾಂ ಯಜೇತ್ತ್ವಸೌ ॥ ೩ ॥

ಕುತೋಹ್ಯಸ್ಯ ಧ್ರುವಃ ಸ್ವರ್ಗಃ ಕುತೋ ನಿಶ್ಶ್ರೇಯಸಂ ಪರಂ ।
ಸ್ವರ್ಗತಶ್ಚೈವ ಕಿಂ ಕುರ್ಯಾತ್ ಯೇನ ನ ಚ್ಯವತೇ ಪುನಃ ॥ ೪ ॥

ದೇವತಾನಾಂ ಹಿ ಕೋ ದೇವಃ ಪಿತ್ರೂಣಾಮಪಿ ಕಃ ಪಿತಾ ।
ಯಸ್ಮಾತ್ಪರತರಂ ನಾಸ್ತಿ ತನ್ಮೇ ಬ್ರೂಹಿ ಮಹಾಮುನೇ ॥ ೫ ॥

ಕುತಃ ಸೃಷ್ಟಮಿದಂ ಬ್ರಹ್ಮನ್ ವಿಶ್ವಂ ಸ್ಥಾವರಜಂಗಮಂ ।
ಪ್ರಲಯಂ ಚ ಕಮಭ್ಯೇತಿ ತದ್ಭವಾನ್ ವಕ್ತುಮರ್ಹಸಿ ॥ ೬ ॥

॥ ವಸಿಷ್ಠ ಉವಾಚ ॥

ಉದ್ಯನ್ ಪಶ್ಯನ್ ಹಿ ಕುರುತೇ ಜಗದ್ವಿತಿಮಿರಂ ಕರೈಃ ।
ನಾತಃ ಪರತರೋ ದೇವಃ ಕಶ್ಚಿದನ್ಯೋ ನರಾಧಿಪ ॥ ೭ ॥

---

೩. ಗೃಹಸ್ಥನಾಗಲಿ, ಬ್ರಹ್ಮಚಾರಿಯಾಗಲಿ, ವಾನಪ್ರಸ್ಥಾಶ್ರಮಿಯೇ ಆಗಲಿ, ಸಂನ್ಯಾಸಿಯಾಗಲಿ ಮೋಕ್ಷವನ್ನು ಸಂಪಾದಿಸಲು ಯಾವ ದೇವರನ್ನು ಆರಾಧಿಸ ಬೇಕು ?

೪. ಸ್ಥಿರವಲ್ಲದ ಸ್ವರ್ಗಸುಖಕ್ಕೂ, ಶಾಶ್ವತವಾದ ಮೋಕ್ಷಕ್ಕೂ ಬಹಳ ವ್ಯತ್ಯಾಸವಿರುವುದಲ್ಲವೇ ? ಪುಣ್ಯವಶದಿಂದ ಸ್ವರ್ಗವನ್ನು ಪಡೆದವನು ಪುನಃ ಭೂಲೋಕಕ್ಕೆ ಬರದಿರಬೇಕಾದರೆ ಅವನು ಅಲ್ಲಿ ಮಾಡಬೇಕಾದದ್ದೇನು ?

೫. ದೇವತೆಗಳಿಗೆ ದೇವನೆನಿಸಿ, ಪಿತೃಗಳಿಗೆ ಪಿತೃವೆನಿಸಿ, ಸರ್ವಶ್ರೇಷ್ಠ ನಾಗಿರುವ ದೇವರು ಯಾರು ? ಮಹರ್ಷಿಯೇ, ಅದನ್ನು ನನಗೆ ಈಗ ವಿವರಿಸಬೇಕು.

೬. ಬ್ರಹ್ಮರ್ಷಿಯೇ, ಈ ಜಗತ್ತು ಏತಕ್ಕಾಗಿ, ಎಲ್ಲಿಂದ ಸೃಷ್ಟವಾಯಿತು ? ಸ್ಥಾವರ ಜಂಗಮಾತ್ಮಕವಾದ ಜಗತ್ತು ಕೊನೆಯಲ್ಲಿ ಎಲ್ಲಿ ಲೀನವಾಗುವುದು ? ಅದನ್ನು ನನಗೆ ತಿಳಿಸಬೇಕು, ಎಂದು ರಾಜನು ಕೇಳಿಕೊಂಡನು.

೭. ಆಗ ವಸಿಷ್ಠಮಹರ್ಷಿಯು ರಾಜನಿಗೆ ಹೇಳಿದ್ದೇನೆಂದರೆ :— ಮಹಾ ರಾಜನೇ, ಪ್ರಪಂಚದ ಅಂಧಕಾರವನ್ನೆಲ್ಲಾ ಯಾವ ದೇವನು ತನ್ನ ಕಿರಣಜಾಲ ಗಳಿಂದ ನಿವಾರಣೆಮಾಡುತ್ತಾ, ಲೋಕಗಳನ್ನು ಬೆಳಗಿಸುತ್ತಿರುವನೋ, ಅಂತಹ ಸೂರ್ಯಭಗವಂತನಿಗಿಂತ ಶ್ರೇಷ್ಠರಾದ ದೇವರು ಮತ್ತಾರಿರುವರು ?

ಅನಾದಿನಿಧನೋಽಹ್ಯೇಷ ಪುರುಷಃ ಶಾಶ್ವತೋಽವ್ಯಯಃ ।
ತಾಪಯತ್ಯೇಷ ಲೋಕಾಂಸ್ತ್ರೀನ್ ಭ್ರಮನ್ ರಶ್ಮಿಭಿರುಲ್ಬಣೈಃ ॥ ೮ ॥

ಸರ್ವದೇವಾತ್ಮಕೋ ಹ್ಯೇಷ ತಪಸಾಂ ಚಾನುಭಾವನಃ ।
ಸರ್ವಸ್ಯ ಜಗತೋ ನಾಥಃ ಕರ್ಮಸಾಕ್ಷೀ ವಿಭಾವಸುಃ ॥ ೯ ॥

ಸಂಕ್ಷಿಪತ್ಯೇವ ಭೂತಾನಿ ತಥಾ ವಿಸೃಜತೇ ಪುನಃ ।
ಏಕೋ ಭಾತಿ ತಪತ್ಯೇಷ ವರ್ಷತೇ ಚ ಗಭಸ್ತಿಭಿಃ ॥ ೧೦ ॥

ಏಷ ಧಾತಾ ವಿಧಾತಾ ಚ ಭೂತಾದಿರ್ಭೂತಭಾವನಃ ।
ನ ಹ್ಯೇಷ ಕ್ಷಯಮಾಯಾತಿ ನಿತ್ಯನುಕ್ಷಯಮಂಡಲಃ ॥ ೧೧ ॥

೮. ಪರಮಾತ್ಮನಿಗೆ ಆದ್ಯಂತಗಳಿಲ್ಲ. ಆತನು ಶಾಶ್ವತಪುರುಷನು. ನಾಶ ರಹಿತನು. ತನ್ನ ಕಿರಣಗಳಿಂದ ಮೂರು ಲೋಕಗಳನ್ನು ಒಂದೇ ಕಾಲದಲ್ಲಿ ದಹಿಸುವ ಶಕ್ತಿಯು ಆತನಿಗಿದೆ.

೯. ಸೂರ್ಯನಾರಾಯಣನು ಸರ್ವದೇವತಾತ್ಮಕನು, ತಪಸ್ವಿಗಳಿಗೆ ಭಾವ್ಯನಾದವನು. ಜಗತ್ಪತಿಯು. ಸಕಲ ಕರ್ಮಗಳನ್ನೂ ನೋಡುತ್ತಿರುವವನು ಮತ್ತು ಪ್ರಭಾಶಾಲಿಯು.

೧೦. ಈತನು ಸಮಸ್ತ ಲೋಕಗಳನ್ನು ತನ್ನಲ್ಲಿ ಅಡಗಿಸುವನು. ಹಾಗೆಯೇ ವಿಕಾಸಗೊಳಿಸುವನು. ಸೂರ್ಯದೇವನು ಒಬ್ಬನೇ ಆದರೂ ತನ್ನ ಸಹಸ್ರಾರು ಕಿರಣಗಳಿಂದ ಲೋಕವನ್ನೆಲ್ಲಾ ಸುಡುವನು. ಮತ್ತು ಎಳೆದು ಹಿಡಿದಿರುವನು.

೧೧. ಈ ಸೂರ್ಯದೇವನೇ, ಸೃಷ್ಟಿಕರ್ತನು, ಲೋಕರಕ್ಷಕನು. ಪಂಚ ಭೂತಗಳಿಗೂ ಆದಿಯಾದವನು. ಪಂಚಭೂತಮಯವಾಗಿ ಕಾಣುತ್ತಿರುವನೂ ಈ ದೇವನೇ. ಶಾಶ್ವತವಾದ ಮಂಡಲಾಕಾರನಾಗಿ ನಾಶರಹಿತವಾಗಿರುವನೆಂದರೆ ಈ ಸೂರ್ಯದೇವನಲ್ಲವೇ ?

ಪಿತ್ರೂಣಾಂ ಹಿ ಪಿತಾಹ್ಯೇಷ ದೇವಾನಾಮೇಷ ದೇವತಾ ।
ಧ್ರುವಂ ಸ್ಥಾನಂ ಭಜನ್ತ್ಯೇಷ ಯಸ್ಮಾನ್ನಚ್ಯವತೇ ಪುನಃ ॥ ೧೨ ॥

ಸರ್ಗಕಾಲೇ ಜಗತ್ಕೃತ್ಸ್ನಂ ಆದಿತ್ಯಾತ್ಸಂಪ್ರಸೂಯತೇ ।
ಪ್ರಲಯೇ ಚ ತಮಭ್ಯೇತಿ ಆದಿತ್ಯಂ ದೀಪ್ತತೇಜಸಂ ॥ ೧೩ ॥

ಯೋಗಿನಶ್ಚಾಂತೇ ಸಾಂಖ್ಯಾಶ್ಚ ದೇಹಂ ತ್ಯಕ್ತ್ವಾ ಪುರಾತನಂ ।
ಸಂಶುದ್ಧಾಸ್ತು ವಿಶಂತ್ಯಸ್ಮಿನ್ ತೇಜೋ ರಾಶೌ ದಿವಾಕರೇ ॥ ೧೪ ॥

ಅಸ್ಯ ರಶ್ಮಿಸಹಸ್ರಾಣಿ ಶಾಖಾ ಇವ ವಿಹಂಗಮಾಃ ।
ವಸಂತ್ಯಾಶ್ರಿತ್ಯ ಮುನಯಃ ಸಂಸಿದ್ಧಾ ದೈವತೈಸ್ಸಹ ॥ ೧೫ ॥

---

೧೨. ಪಿತೃಗಳಿಗೆ ಪಿತನೆನಿಸಿ, ದೇವತೆಗಳಿಗೆ ದೇವದೇವನಾಗಿರುವ ಶ್ರೀಸೂರ್ಯ ನಾರಾಯಣನೇ ಮುಕ್ತಿಸ್ಥಾನವು. ಈತನನ್ನು ಆರಾಧಿಸಿದವನಿಗೆ ಬೇರೆ ಜನ್ಮವೊಂದು ಸಿಕ್ಕಲಾರದು.

೧೩. ಸಮಸ್ತ ಜಗತ್ತೂ ಸೂರ್ಯನಿಂದಲೇ ಹುಟ್ಟಿರುವುದು. ಅದನ್ನೇ ಸೃಷ್ಟಿ ಯೆನ್ನುವರು. ಕೊನೆಗೆ ಸೃಷ್ಟವಾದ ಜಗತ್ತೆಲ್ಲಾ ಅಂತಹ ತೇಜೋಮಯನಾದ ಸೂರ್ಯನಲ್ಲಿ ಅಡಗುವುದೇ ಲಯವು. ಸೂರ್ಯಬಿಂಬವು ಮಾತ್ರ ಕೇವಲ ತೇಜೋ ಮಯವಾಗಿ ಕಾಣುತ್ತಿದೆ.

೧೪. ಯೋಗ ಶಾಸ್ತ್ರಾಭ್ಯಾಸಿಗಳೂ, ಸಾಂಖ್ಯ ತತ್ತ್ವಾನುಯಾಯಿಗಳೂ, ಮೋಕ್ಷಕಾಲದಲ್ಲಿ ತಮ್ಮ ಪಂಚಭೌತಿಕವಾದ ದೇಹವನ್ನು ತ್ಯಾಗಮಾಡಿ, ಶುದ್ಧರಾಗಿ ಸೂರ್ಯಮಂಡಲವನ್ನು ಪ್ರವೇಶಿಸುವರು.

೧೫. ಸಕಲ ಮುನಿಗಳೂ, ಸಿದ್ಧರಾದ ದೇವತೆಗಳೂ ಸಹ, ಈ ಸೂರ್ಯ ಕಿರಣಗಳನ್ನೇ, ಪಕ್ಷಿಗಳು ಕೊಂಬೆಗಳನ್ನು ಆಶ್ರಯಿಸಿಕೊಂಡಿರುವಂತೆ ಅನುಸರಿಸಿ ಕೊಂಡಿರುವರು.

ಗೃಹಸ್ಥಾ ಜನಕಾದ್ಯಾಶ್ಚ ರಾಜಾನೋ ಯೋಗಧಾರ್ಮಿಕಾಃ ।
ವಾಲಖಿಲ್ಯಾದಯಶ್ಚೈವ ಋಷಯೋ ಬ್ರಹ್ಮಚಾರಿಣಃ ॥ ೧೬ ॥

ವಾನಪ್ರಸ್ಥಾಶ್ಚ ವರ್ಣ್ಯಾದ್ಯಾ ಭಿಕ್ಷುಃ ಪಂಚಶಿಖಸ್ತಥಾ ।
ಯೋಗಮಾಸ್ಥಾಯ ತೇ ಸರ್ವೇ ಪ್ರವಿಷ್ಟಾಸ್ಸೂರ್ಯಮಂಡಲೇ ॥ ೧೭ ॥

ಶುಕೋ ವ್ಯಾಸಾತ್ಮಜಃ ಶ್ರೀಮಾನ್ ಯೋಗಧರ್ಮಮವಾಪ್ಯ ಸಃ ।
ಆದಿತ್ಯಕಿರಣಾನ್ ಪೀತ್ವಾ ಹ್ಯಪುನರ್ಭವಮಾಶ್ರಿತಃ ॥ ೧೮ ॥

ಶಬ್ದಮಾತ್ರಶ್ರುತಿಮುಖಾ ಬ್ರಹ್ಮವಿಷ್ಣುಶಿವಾದಯಃ ।
ಪ್ರತ್ಯಕ್ಷೋಽಯಂ ಪರೋ ದೇವಃ ಸೂರ್ಯಸ್ತಿಮಿರನಾಶನಃ ॥ ೧೯ ॥

ತಸ್ಮಾದನ್ಯತ್ರ ಭಕ್ತಿರ್ಹಿ ನ ಮಾ ಕಾರ್ಯಾ ಶುಭಮಿಚ್ಛತಾ ।
ದೃಷ್ಟೇನ ಬಾಧ್ಯತೇ ಯಸ್ಮಾದದೃಷ್ಟಂ ನಿತ್ಯಮೇವ ಹಿ ॥ ೨೦ ॥

---

೧೬-೧೭. ಜನಕರಾಜನೇ ಮೊದಲಾದ ಗೃಹಸ್ಥರಾಜರೂ, ವಾಲಖಿಲ್ಯರೇ ಮುಂತಾದ ಋಷಿಗಳೂ, ಬ್ರಹ್ಮಚಾರಿಗಳೂ, ವಾನಪ್ರಸ್ಥರೂ, ಇನ್ನೂ ಅನೇಕ ಯೋಗಿಗಳೂ ಯೋಗಾಭ್ಯಾಸಮಹಿಮೆಯಿಂದ ಸೂರ್ಯಮಂಡಲವನ್ನೇ ಹೊಂದಿರುವರು.

೧೮-೧೯. ವ್ಯಾಸಪುತ್ರನೂ, ಯೋಗಿವರ್ಯನೂ ಆದ ಶುಕಮಹರ್ಷಿಯು ತನ್ನ ಯೋಗಮಹಿಮೆಯಿಂದ ಸೂರ್ಯ ಕಿರಣಗಳನ್ನು ಪಾನಮಾಡಿ ಮುಕ್ತನಾದನು. ಬ್ರಹ್ಮ, ವಿಷ್ಣು, ಶಿವ ಮುಂತಾದ ದೇವತೆಗಳು ಶ್ರುತಿಗಳಲ್ಲಿ ಪ್ರತಿಪಾದ್ಯರಾಗಿ ಶಬ್ದಮಾತ್ರದಿಂದ ನಮಗೆ ಕೇಳಿಬರುತ್ತಿರುವರು. ಪ್ರತ್ಯಕ್ಷನಾಗಿ ಅಂಧಕಾರವನ್ನು ತೊಲಗಿಸುತ್ತಾ ದೇವದೇವನಾಗಿರುವ ಈ ಸೂರ್ಯನೇ ಪ್ರತ್ಯಕ್ಷದೈವ.

೨೦-೨೧. ಆದ್ದರಿಂದ ಎಲ್ಲಿ ಬೃಹಸ್ಪತಿಯೇ, ನಿಜವಾಗಿ ನೀನು ಸುಖವನ್ನು ಅಪೇಕ್ಷಿಸುವುದಾದರೆ ಬೇರೆ ದೇವರಲ್ಲಿ ಅಷ್ಟಾಗಿ ಭಕ್ತಿ ಬೆಳೆಸಬೇಕಾಗಿಲ್ಲ. ಏಕೆಂದರೆ ಎಲ್ಲಾ ಪ್ರಮಾಣಗಳಿಗಿಂತಲೂ ಪ್ರತ್ಯಕ್ಷಪ್ರಮಾಣವು ಬಲವತ್ತರವಾದುದು. ಅನುಮಾನಾದಿಗಳು ಪ್ರಮಾಣಗಳಾದರೂ ಪ್ರತ್ಯಕ್ಷವು ಸಾಕ್ಷಾತ್ತಾಗಿ ವಿಶ್ವಾಸವನ್ನು

**ತ್ವಯಾತಃ ಸಂತತಂ ರಾಜನ್ ಅಭ್ಯರ್ಚ್ಯೋ ಭಗವಾನ್ ರವಿಃ ।**
**ಸ ಹಿ ಮಾತಾ ಪಿತಾ ಚೈವ ಕೃತ್ಸ್ನಸ್ಯ ಜಗತೋ ಗುರುಃ ॥ ೨೧ ॥**

**ಇತಿ ಶ್ರೀ ಸಾಂಬಪುರಾಣೇ ದ್ವಿತೀಯೋಽಧ್ಯಾಯಃ.**

---

ಹುಟ್ಟಿಸುವುದು. ಆದ್ದರಿಂದ ಮಹಾರಾಜನೇ, ಲೋಕಕ್ಕೆಲ್ಲಾ ಗುರುವೆನಿಸಿಕೊಂಡಿರುವ ಆ ಸೂರ್ಯದೇವನನ್ನೇ ತಾಯಿಯೆಂದೂ, ತಂದೆಯೆಂದೂ, ಸಕಲ ಬಂಧುಗಳೆಂದೂ ನಂಬಿ ಅವನಲ್ಲಿ ಭಕ್ತಿಯಿಡು. ನಿನಗೆ ಮಂಗಳವುಂಟಾಗುವುದು ಎಂದು ವಸಿಷ್ಠಮಹರ್ಷಿಯು ಬೃಹದ್ಬಲನಿಗೆ ಹೇಳಿದನು.

ಇಲ್ಲಿಗೆ ಸಾಂಬಪುರಾಣದ ಎರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತೃತೀಯೋಽಧ್ಯಾಯಃ

---

॥ ಬೃಹದ್ಬಲ ಉವಾಚ ॥

ಆದ್ಯಂ ಸ್ಥಾನಂ ರವೇಃ ಕುತ್ರ ಕಸ್ಮಿನ್ದ್ವೀಪೇ ಮಹಾಮುನೇ ।
ಯತ್ರ ಪೂಜಾಂ ವಿಧಾನೋಕ್ತಾಂ ಪ್ರತಿಗೃಹ್ಣಾತ್ಯಸೌ ಸ್ವಯಂ ॥ ೧ ॥

॥ ವಸಿಷ್ಠ ಉವಾಚ ॥

ಚಂದ್ರಭಾಗಾತಟೇ ರಮ್ಯೇ ಪುರಂ ಯತ್ಸಾಂಬಸಂಜ್ಞಿತಂ ।
ಭೂಲೋಕೇ ಶಾಶ್ವತಂ ಸ್ಥಾನಂ ತತ್ರ ಸೂರ್ಯಸ್ಯ ನಿತ್ಯಶಾ ॥ ೨ ॥

---

## ಮೂರನೆಯ ಅಧ್ಯಾಯ

೧. ಬೃಹದ್ಬಲರಾಜನು ವಸಿಷ್ಠಮಹರ್ಷಿಯನ್ನು ಕುರಿತು "ಮಹರ್ಷಿಯೇ, ಸೂರ್ಯನ ಮೂಲಸ್ಥಾನವಾವುದು ? ಅದು ಯಾವ ದ್ವೀಪದಲ್ಲಿದೆ ? ಎಲ್ಲಿ ಸೂರ್ಯಾರಾಧನೆಯನ್ನು ಮಾಡಿದರೆ ಸ್ವಾಮಿಯು ತೃಪ್ತಿಕೊಳ್ಳುವನು ?" ಎಂದು ಪ್ರಶ್ನೆ ಮಾಡಿದನು.

೨. ಆಗ ವಸಿಷ್ಠಮಹರ್ಷಿಯು ರಾಜನ ಪ್ರಶ್ನೆಗಳಿಗೆ ಉತ್ತರ ಹೇಳುತ್ತಾ ರಾಜನೇ, ಚಂದ್ರಭಾಗಾ ನದೀ ತೀರದಲ್ಲಿ ಸಾಂಬ ಸಂಜ್ಞಕವಾದ ನಗರವೊಂದಿದೆ. ಅದು ಭೂಲೋಕಕ್ಕೆ ಸೇರಿದುದು. ಅದಕ್ಕೆ ಎಂದೂ ನಾಶವಿಲ್ಲ. ಅಲ್ಲಿ ಸೂರ್ಯದೇವನು ಸರ್ವದಾ ನೆಲಸಿರುವನು.

ಪ್ರೀತ್ಯಾ ಸಾಂಬಸ್ಯ ತತ್ರಾರ್ಕೋ ಜಗತೋಽನುಗ್ರಹಾಯ ಚ ।
ಸ್ಥಿತೋ ದ್ವಾದಶಭಾಗೇನ ಮಿತ್ರೋ ನ್ಯೃತ್ರೇಣ ಚಕ್ಷುಷಾ ॥ ೩ ॥

ತತ್ರ ಭಕ್ತಿಮತಸ್ಸರ್ವಾನ್ ಅನುಗೃಹ್ಣಾತಿ ಭಾಸ್ಕರಃ ।
ವಿಧಿಪ್ರಯುಕ್ತಾಂ ಪೂಜಾಂ ಚ ಗೃಹ್ಣಾತಿ ಭಗವಾನ್ ಸ್ವಯಂ ॥ ೪ ॥

॥ ಬೃಹದ್ಬಲ ಉವಾಚ ॥

ಕೋಽಯಂ ಸಾಂಬಃ ಕುತಃ ಕಸ್ಯ ಪುತ್ರೋ ನಾಮ್ನಾ ರವೇಃ ಪ್ರಿಯಃ ।
ಯಸ್ಯ ಚಾಯಂ ಸಹಸ್ರಾಂಶುರ್ವರದಃ ಪುಣ್ಯಕರ್ಮಣಃ ॥ ೫ ॥

॥ ವಸಿಷ್ಠ ಉವಾಚ ॥

ಅದಿತೇರ್ದ್ವಾದಶಃ ಪುತ್ರೋ ವಿಷ್ಣುರ್ಯಸ್ಸ ಪುನಸ್ತ್ವಿಹ ।
ವಾಸುದೇವತ್ವಮಾಪನ್ನ ಸ್ತಸ್ಯಸಾಂಬೋಽಭವತ್ಸುತಃ ॥ ೬ ॥

---

೩. ಅಲ್ಲಿ ಲೋಕಾನುಗ್ರಹ ದೃಷ್ಟಿಯಿಂದ ಸೂರ್ಯದೇವನು ತನ್ನ ದ್ವಾದಶಾಂಶಗಳಿಂದಲೂ ಕೂಡಿ, ಸಾಂಬನ ಪ್ರೀತ್ಯರ್ಥವಾಗಿ ನೆಲಸಿರುವನು. ತನ್ನ ಕೃಪಾಕಟಾಕ್ಷದಿಂದ ಸಾಂಬನನ್ನು ಸಂತೋಷಗೊಳಿಸಿದ್ದುದು ಅಲ್ಲಿಯೇ.

೪. ಆ ಸ್ಥಳದಲ್ಲಿ ಭಕ್ತಿಯಿಂದ ತನ್ನನ್ನು ಆರಾಧಿಸಿದವರಿಗೆಲ್ಲಾ ಇಷ್ಟಾರ್ಥಗಳನ್ನು ಒದಗಿಸುವನು. ಅಲ್ಲದೆ ಅಲ್ಲಿ ಮಾಡಿದ ಪೂಜೆಯಿಂದ ಸೂರ್ಯದೇವನು ನಿಜವಾಗಿಯೂ ತೃಪ್ತಿಗೊಳ್ಳುವನು ಎಂದನು.

೫. ಹೀಗೆ ಹೇಳಿದ ವಸಿಷ್ಠರ ಮಾತನ್ನು ಕೇಳಿ ಮತ್ತೆ ಬೃಹದ್ಬಲನು, "ಋಷಿವರ್ಯರೇ, ಆ ಸಾಂಬನು ಯಾರು? ಆತನ ತಂದೆಯ ಹೆಸರೇನು? ಆತನು ಸಹಸ್ರಕಿರಣನಾದ ಸೂರ್ಯನಿಗೆ ಭಕ್ತನಾಗಿ. ಆ ದೇವದೇವನಿಂದ ವರಪಡೆದುದು ಹೇಗೆ?" ಇವುಗಳನ್ನು ತಿಳಿಸಬೇಕೆಂದು ಮತ್ತೆ ಕೇಳಿಕೊಂಡನು.

೬. ಆಗ ವಸಿಷ್ಠಋಷಿಯು ತಿಳಿಸುವುದೇನೆಂದರೆ :— "ರಾಜನೇ, ಅದಿತೀದೇವಿಯ ಹನ್ನೆರಡನೆಯ ಮಗನೇ ವಿಷ್ಣುವಲ್ಲವೇ? ಆತನು ಪ್ರಜಾಪಾಲನೆಗಾಗಿಯೂ, ದುಷ್ಟಶಿಕ್ಷಣಕ್ಕಾಗಿಯೂ, ವಸುದೇವನ ಮಗನಾಗಿ ಭೂಲೋಕದಲ್ಲಿ ಅವತರಿಸಿದನು. ಆತನ ಪ್ರಿಯಪುತ್ರನೇ ಸಾಂಬನು.

ಸ ತು ಪಿತ್ರಾ ಭೃಶಂ ಶಪ್ತಃ ಕುಷ್ಠರೋಗಮವಾಪ್ತವಾನ್ ।
ತೇನಾಯಂ ಸ್ಥಾಪಿತಸ್ಸೂರ್ಯಃ ಸ್ವನಾಮ್ನಾ ಚ ಪುರಸ್ಕೃತಃ ॥ ೭ ॥

॥ ಬೃಹದ್ಬಲ ಉವಾಚ ॥

ಶಪ್ತಃ ಕಸ್ಮಿನ್ನಿಮಿತ್ತೋಽಸೌ ಪಿತ್ರಾ ಪುತ್ರಃ ಸ್ವಸಂಭವಃ ।
ಭಾವ್ಯಂ ಹಿ ಕಾರಣೇನಾತ್ರ ಯೇನಾಸೌ ಶಪ್ತವಾನ್ ಸುತಂ ॥ ೮ ॥

॥ ವಸಿಷ್ಠ ಉವಾಚ ॥

ಶೃಣುಷ್ವಾವಹಿತೋ ರಾಜನ್ ತಸ್ಯ ತಚ್ಛಾಪಕಾರಣಂ ।
ಬ್ರಹ್ಮಣೋ ಮಾನಸಃ ಪುತ್ರೋ ನಾರದೋ ನಾಮ ಯೋ ಮುನಿಃ ॥ ೯ ॥

ಬ್ರಹ್ಮಲೋಕೇ ಮುನೇಸ್ತಸ್ಯ ವಿಷ್ಣುಲೋಕೇ ತಥೈವ ಚ ।
ಸೂರ್ಯಲೋಕೇ ಚ ಸತತಂ ರುದ್ರಲೋಕೇ ತಥೈವ ಚ ॥ ೧೦ ॥

ಪಿತೃರಾಕ್ಷಸನಾಗಾನಾಂ ಯಮಸ್ಯ ವರುಣಸ್ಯ ಚ ।
ಇಂದ್ರಸ್ಯ ಚಾಮರಾವತ್ಯಾಂ ಪುರ್ಯಾಂ ತು ಧನದಸ್ಯ ಚ ॥ ೧೧ ॥

---

೭. ಒಂದು ಸಾರಿ ಸಾಂಬನು ತಂದೆಯ ಕೋಪಕ್ಕೆ ಪಾತ್ರನಾಗಿ ಕುಷ್ಠರೋಗಿಯಾಗುವಂತಹ ಶಾಪವನ್ನು ತಂದೆಯಿಂದಲೇ ಪಡೆದನು. ಆ ರೋಗ ನಿವಾರಣೆಗಾಗಿ ಸಾಂಬನು ತನ್ನ ಹೆಸರಿನಿಂದ ಅಲ್ಲಿ ಆ ಸೂರ್ಯದೇವನನ್ನು ಪ್ರತಿಷ್ಠೆಮಾಡಿ, ಅರ್ಚನೆ ಮಾಡಿದನು.

೮. ಹೀಗೆಂದೊಡನೆ ಬೃಹದ್ಬಲನು ಮತ್ತೆ "ಮುನಿವರ್ಯನೇ, ತನ್ನ ಮಗನಿಗೇ ಕೃಷ್ಣನು ಈರೀತಿ ಶಾಪಕೊಡಲು ಕಾರಣವೇನು? ಆ ಸಂದರ್ಭದಲ್ಲಿ ಏನೋ ದೊಡ್ಡ ಕಾರಣವಿರಬೇಕು. ಅದನ್ನು ತಿಳಿಸಬೇಕು" ಎಂದು ಕೇಳಿಕೊಳ್ಳಲು,

೯. ವಸಿಷ್ಠಋಷಿಯು "ಎಲೈ ರಾಜನೇ, ಆ ಶಾಪಕ್ಕೆ ಕಾರಣವನ್ನು ನಾನು ಈಗ ತಿಳಿಸುವೆನು, ಕೇಳು. ಒಂದು ಸಾರಿ ಬ್ರಹ್ಮನ ಮಾನಸಪುತ್ರನಾದ ನಾರದ ಮಹರ್ಷಿಯು,

೧೦-೧೧. ಬ್ರಹ್ಮಲೋಕ, ವಿಷ್ಣುಲೋಕ, ಸೂರ್ಯಲೋಕ, ರುದ್ರಲೋಕ ಇವುಗಳನ್ನೆಲ್ಲಾ ನೋಡಿಕೊಂಡು, ಪಿತೃಗಳು, ರಾಕ್ಷಸರು, ಯಮ, ವರುಣ, ಇಂದ್ರ,

ಪೃಥಿವ್ಯಾಂ ಪಾರ್ಥಿವಾದ್ಯಾ ಯೇ ಯೇ ಪಾತಾಲಸಮುದ್ಭವಾಃ ।
ಸದಾ ವೇಶ್ಮಸು ತೇಷಾಂ ಚ ತಸ್ಯಾಪ್ರತಿಹತಾ ಗತಿಃ ॥ ೧೨ ॥

ವಾಸುದೇವಂ ಸ ವೈ ದ್ರಷ್ಟುಂ ನೀತ್ವಾ ದ್ವಾರವತೀಂ ಪುರೀಂ ।
ಆಯಾತೋ ಋಷಿಭಿಸ್ಸಾರ್ಧಂ ಕ್ರೋಧನೋ ಮುನಿಸತ್ತಮಃ ॥ ೧೩ ॥

ಅಥಾತ್ರಾಗಚ್ಛತಸ್ತಸ್ಯ ಸರ್ವೇ ಯದುಕುಮಾರಕಾಃ ।
ಪ್ರದ್ಯುಮ್ನಪ್ರಮುಖಾ ಯೇ ತೇ ಪ್ರಹ್ವೇಣಾವನತಾಃ ಸ್ಥಿತಾಃ ॥ ೧೪ ॥

ಅಭಿವಾದ್ಯಾರ್ಘ್ಯಪಾದ್ಯೈಶ್ಚ ಪೂಜಾಂ ಕುರ್ವಂತಿ ಯತ್ನತಃ ।
ಸಾಂಬಸ್ತ್ವವಶ್ಯಂ ಭಾವಿತ್ವಾತ್ತಸ್ಯ ಶಾಪಸ್ಯ ನೋಹಿತಃ ॥ ೧೫ ॥

ಅವಜ್ಞಾಂ ಕುರುತೇ ನಿತ್ಯಂ ನಾರದಸ್ಯ ಮಹಾತ್ಮನಃ ।
ತತಃ ಕ್ರೀಡಾಸು ಸತತಂ ರೂಪಯೌವನಗರ್ವಿತಃ ॥ ೧೬ ॥

---

ಕುಬೇರ ಇವರುಗಳನ್ನೆಲ್ಲ ಅವರವರ ಪಟ್ಟಣಗಳಲ್ಲಿಯೇ ವಿಚಾರಿಸಿ ಭೂಲೋಕಕ್ಕೆ ಬಂದನು. ಇಲ್ಲಿಯೂ ಸಮಸ್ತರಾಜರುಗಳ ಅರಮನೆಗಳಿಗೆಲ್ಲ ಸ್ವೇಚ್ಛೆಯಾಗಿ ಹೋಗಿ ಅಲ್ಲಿಂದ ಪಾತಾಳಲೋಕಕ್ಕೂ ಹೋಗಿ ಅಲ್ಲಿಯೂ ಸಂಚಾರ ಮಾಡಿದನು.

೧೩. ಅಲ್ಲಿಂದ ದ್ವಾರಕಾವತಿಯಲ್ಲಿದ್ದ ಶ್ರೀ ಕೃಷ್ಣನನ್ನು ನೋಡಲುಬಂದನು. ಅವನಜೊತೆಯಲ್ಲಿ ಅನೇಕಋುಷಿಗಳೂ ಬಂದು ಸೇರಿದರು.

೧೪. ಹೀಗೆ ಬಂದ ಮಹರ್ಷಿಗಳನ್ನು ನೋಡಿ ಪ್ರದ್ಯುಮ್ನನೇ ಮೊದಲಾದ ಯದುಕುಮಾರರು ಋಷಿಗೆ ವಿನಯದಿಂದ ನಮಸ್ಕರಿಸಿ ನಿಂತರು.

೧೫. ಅಲ್ಲದೆ ಎಲ್ಲರೂ ಋಷಿಯನ್ನು ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿದರು. ಆದರೆ ಸಾಂಬನುಮಾತ್ರ ಅವರಲ್ಲಿ ಸೇರಲಿಲ್ಲ. ಅದಕ್ಕೆ ಕಾರಣವೇನೆಂದರೆ, ಶಾಪವು ಅವನಿಗೆ ಬರಲೇಬೇಕಾದ ಸಂಭವವಿತ್ತು.

೧೬. ಆತನು ಆ ಮಹಾತ್ಮನಾದ ನಾರದನನ್ನು ತಿರಸ್ಕರಿಸಿದನು. ಅಲ್ಲದೆ ರೂಪು ಯೌವನ ಇವುಗಳಿಂದ ಗರ್ವಿತನಾಗಿ ಆಟದಲ್ಲಿ ತೊಡಗಿ ಋಷಿಯನ್ನು ನೋಡಲೂ ಇಲ್ಲ.

ಅವಿನೀತಂ ಸುತಂ ಜ್ಞಾತ್ವಾ ಚಿಂತಯಾಮಾಸ ನಾರದಃ ।
ಅಸ್ಯಾಹಮವಿನೀತಸ್ಯ ಕರಿಷ್ಯೇ ವಿನಯಂ ಭೃಶಂ ॥ ೧೭ ॥

ಏವಂ ಸಂಚಿಂತಯಿತ್ವಾ ತು ವಾಸುದೇವಂ ತತೋಽಬ್ರವೀತ್ ।
ಇಮಾಃ ಷೋಡಶಸಾಹಸ್ರ್ಯಃ ಪತ್ನ್ಯೋ ದೇವಸ್ಯ ಯಾಸ್ತವ ॥ ೧೮ ॥

ಸರ್ವಾಸಾಂ ಚ ಮನಾಂಸ್ಯಾಸಾಂ ಸಾಂಬೇನ ಕಿಲ ಕೇಶವ ।
ಹೃತಾನಿ ಪುಂಡರೀಕಾಕ್ಷ ರೂಪಯೌವನಶಾಲಿನಾ ।
ರೂಪೇಣಾಪ್ರತಿಮಸ್ಸಾಂಬೋ ಲೋಕೇಽಸ್ಮಿನ್ಸಚರಾಚರೇ ।
ಅತೋ ಹೀಚ್ಛಂತಿ ತಾಸ್ತಸ್ಯ ದರ್ಶನಂ ಹ್ಯಪಿ ತೇ ಸ್ತ್ರಿಯಃ ॥ ೧೯ ॥

॥ ವಸಿಷ್ಠ ಉವಾಚ ॥

ಶ್ರುತ್ವೈತನ್ನಾರದಾದ್ವಾಕ್ಯಂ ಭಾವಿನಾರ್ಥೇನ ಮೋಹಿತಃ ।
ಅವಿಚಾರ್ಯೈವ ತತ್ಸರ್ವಂ ದೇವಃ ಪ್ರೋವಾಚ ನಾರದಂ ॥ ೨೦ ॥

---

೧೭. ನಾರದನು ಅವಿಧೇಯನಾಗಿರುವ ಈ ಕೃಷ್ಣಸುತನನ್ನು ನೋಡಿ, ಇವನ ಅವಿಧೇಯತೆಗೆ ಸರಿಯಾದ ಶಿಕ್ಷೆಯನ್ನು ಮಾಡುತ್ತೇನೆಂದು ನಿಶ್ಚಯಿಸಿದನು.

೧೮–೧೯. ಹಾಗೆಯೇ ಸ್ವಲ್ಪ ಆಲೋಚಿಸಿ ಮುಂದೆಬಂದು ಕೃಷ್ಣನನ್ನು ನೋಡಿ "ವಾಸುದೇವನೇ, ಈಗ ಒಂದು ಹೊಸ ವಿಷಯವನ್ನು ಹೇಳುವೆನು. ನಿನ್ನ ಮಗನು ಅತ್ಯಂತ ಸುಂದರನೂ, ಯುವಕನೂ ಆಗಿರುವನು. ಸೌಂದರ್ಯದಲ್ಲಿ ಅವನಿಗೆ ಸಮಾನನಾಗಿರುವವರು ಮೂರುಲೋಕಗಳಲ್ಲಿ ಯಾರೂಇಲ್ಲ. ಆದ್ದರಿಂದಲೇ ನಿನ್ನ ಪತ್ನಿಯರಾಗಿರುವ ಹದಿನಾರುಸಾವಿರ ಗೋಪಿಕಾ ಸ್ತ್ರೀಯರೆಲ್ಲರೂ, ನಿನ್ನ ಮಗನ ಸೌಂದರ್ಯಕ್ಕೆ ಮೋಹಿತರಾಗಿ ನಿನಗಿಂತಲೂ ಹೆಚ್ಚಾಗಿ ಆ ಸಾಂಬನನ್ನೇ ಪ್ರೀತಿಸುತ್ತ ಅವನ ದರ್ಶನಕ್ಕಾಗಿ ತವಕಪಡುತ್ತಿರುವರು." ಎಂದು ನಾರದನು ಹೇಳಿದನು.

೨೦. ನಾರದನಿಂದ ಈ ಮಾತನ್ನು ಕೇಳಿದೊಡನೆಯೇ ಅದನ್ನು ನಿಜವೆಂದೇ ಭ್ರಮಿಸಿ, ಶ್ರೀ ಕೃಷ್ಣನು ಯಾವುದನ್ನೂ ವಿಚಾರಮಾಡದೆ ನಾರದನೊಡನೆ ಹೀಗೆಂದನು.

॥ ವಾಸುದೇವ ಉವಾಚ ॥

ನ ಹ್ಯಹಂ ಶ್ರದ್ದಧಾಮ್ಯೇವಂ ಯದೇತದ್ವ್ಯಾಹೃತಂ ತ್ವಯಾ ।
ಬ್ರುವಾಣಮೇವಂ ದೇವಂ ತು ನಾರದಃ ಪ್ರತ್ಯುವಾಚ ಹ ॥ ೨೦ ॥

ತಥಾಹಂ ತತ್ಕರಿಷ್ಯಾಮಿ ಯಥಾ ಶ್ರದ್ಧಾಸ್ಯತೇ ಭವಾನ್ ॥ ೨೨ ॥

॥ ವಸಿಷ್ಠ ಉವಾಚ ॥

ಏವಮುಕ್ತ್ವಾ ಯಯೌ ಭೂಯೋ ನಾರದಸ್ತು ಯಥಾಗತಃ ।
ತತಃ ಕತಿಪಯೇಷ್ವಾಹ್ನಿ ದ್ವಾರಕಾಂ ಪುನರಭ್ಯಗಾತ್ ॥ ೨೩ ॥

ತಸ್ಮಿನ್ನಹನಿ ದೇವೋಽಪಿ ಸಹಾಂತಃಪುರಿಕಾಜನೈಃ ।
ಅನುಭೂಯ ಜಲಕ್ರೀಡಾಂ ಯಾನಮಾಸೇವತೇ ರಹಃ ॥ ೨೪ ॥

ರಮ್ಯೇ ರೈವತಕೋದ್ಯಾನೇ ಹರ್ಮ್ಯಮಾಲೋಪಶೋಭಿತೇ ।
ಸರ್ವರ್ತುಕುಸುಮೈರ್ನಿತ್ಯಂ ವಾಸಿತೇ ಚಿತ್ರಕಾನನೇ ॥ ೨೫ ॥

೨೦-೨೨. ನೀನು ಈ ರೀತಿಯಾಗಿ ಹೇಳಿದುದನ್ನು ನಾನು ನಂಬಲಾರೆನೆಂದು ಹೇಳುತ್ತಿರುವ ವಾಸುದೇವನನ್ನು ನೋಡಿ ನಾರದನು ಪುನಃ ನಾನು ನಿನಗೆ ನಂಬಿಕೆಯುಂಟಾಗುವಂತೆ ಮಾಡುವೆನೆಂದು ಪ್ರತಿಜ್ಞೆಕೊಟ್ಟನು.

೨೩. ಹೀಗೆ ನಾರದನು ವಾಸುದೇವನಿಗೆ ಹೇಳಿ ಅಲ್ಲಿಂದ ಹೊರಟುಹೋಗಿ ಪುನಃ ಕೆಲವು ದಿವಸಗಳು ಕಳೆದಮೇಲೆ ದ್ವಾರಕಾ ಪಟ್ಟಣಕ್ಕೆ ಬಂದನು.

೨೪. ಆ ದಿವಸ ವಾಸುದೇವನೂ ಸಹ ತನ್ನ ಅಂತಃಪುರದ ಸ್ತ್ರೀಯರೊಡನೆ ಜಲಕ್ರೀಡೆಯನ್ನು ಆಡಿ ಬಳಲಿ ರಹಸ್ಯವಾಗಿ ಶಾಂತಿಯನ್ನನುಭವಿಸುತ್ತಿದ್ದನು.

೨೫-೨೮. ವಾಸುದೇವನು ವಿಹರಿಸುತ್ತಿದ್ದ ರೈವತಕೋದ್ಯಾನವು ಈರೀತಿ ರಂಜಿಸುತ್ತಿದ್ದಿತು — ಎಲ್ಲಾ ಋತುಗಳಲ್ಲಿಯೂ, ಆಯಾಯಾ ಋತು ಧರ್ಮವನ್ನನುಸರಿಸಿ ಅರಳುವ ಸಕಲ ಪುಷ್ಪಗಳೂ, ಋತುಭೇದವಿಲ್ಲದೆ ಯಾವಾಗಲೂ

ನೃತ್ಯದ್ಭಿರ್ಬರ್ಹಿಭಿರ್ನಿತ್ಯಂ ಕೇಕಾಶತನಿನಾದಿತೇ ।
ಕೋಕಿಲಾರಾವಸಂಘುಷ್ಟೇ ಚಕ್ರವಾಕೋಪಶೋಭಿತೇ ॥ ೨೬ ॥

ಕೋಕಿಲಾಮಧುರಾಲಾಪೇ ಜಲಕುಕ್ಕುಟನಾದಿತೇ ।
ಷಟ್ಪದೋದ್ಗೀತಮಧುರೇ ಶುಕಚಾತಕನಾದಿತೇ ॥ ೨೭ ॥

ನಾನಾಜಲಜಪುಷ್ಪಾಭಿರ್ದೀರ್ಘಿಕಾಭಿರಲಂಕೃತೇ ।
ಹಂಸಾರಾವಸುಸಂಘುಷ್ಟೇ ಸಾರಸೈಸ್ಸಮಲಂಕೃತೇ ॥ ೨೮ ॥

ಶ್ರೂಯತೇ ಚಾಪ್ಯಯಂ ಶ್ಲೋಕಃ ಪುರಾಣೇ ಪಠ್ಯತೇ ಯಥಾ ।
ತಸ್ಮಿನ್ಸ ರಮತೇ ದೇವಃ ಸ್ತ್ರೀಭಿಃ ಪರಿವೃತಸ್ತದಾ ।
ಹಾರನೂಪುರಕೇಯೂರರಶನಾದ್ಯೈರ್ವಿಭೂಷಣೈಃ ॥ ೨೯ ॥

ಭೂಷಿತಾನಾಂ ವರಸ್ತ್ರೀಣಾಂ ಚಾರ್ವಂಗೀಣಾಂ ವಿಶೇಷತಃ ।
ಕ್ರೀಡಾರ್ಥಂ ಪದ್ಮಪತ್ರೇಷು ನಿಯುಕ್ತಾನಾಂ ಯಥಾರ್ಹತಃ ॥ ೩೦ ॥

ಉದ್ಯಾನದಲ್ಲಿ ಅರಳಿ ಘಮಘಮಿಸುತ್ತಿದ್ದುವು ಉಪ್ಪರಿಗೆಮನೆಗಳು ಸಾಲುಸಾಲಾಗಿ ಇದ್ದುದರಿಂದ ಸುಂದರವಾಗಿ ಕಾಣುತ್ತಿದ್ದುವು ಈ ಉದ್ಯಾನದಲ್ಲಿ ನೂರಾರು ನವಿಲುಗಳು ನರ್ತನ ಮಾಡುತ್ತ ಕೇಕಾಧ್ವನಿಗೈಯುತ್ತಿದ್ದುವು. ಕೋಗಿಲೆಗಳು ತಮ್ಮ ಮಧುರವಾದ ಸ್ವರದಿಂದ ಹಾಡುತ್ತಿದ್ದವು; ನೀರುಕೋಳಿ, ಭ್ರಮರ, ಗಿಳಿ, ಮತ್ತು ಚಾತಕ ಪಕ್ಷಿಗಳು ತಮ್ಮ ಧ್ವನಿಗಳಿಂದ ಮೊರೆಯುತ್ತಿದ್ದುವು. ಈ ಉದ್ಯಾನದಲ್ಲಿ ಅನೇಕ ಕಮಲವೇ ಮೊದಲಾದವುಗಳಿಂದ ಬೆಳಗುತ್ತಿರುವ ಸಣ್ಣ ಸರೋವರಗಳಿದ್ದವು. ಅವುಗಳಲ್ಲಿ ಯಾವಾಗಲೂ ಹಂಸ ಪಕ್ಷಿಗಳೂ, ಸಾರಸ ಹಕ್ಕಿಗಳೂ, ಧ್ವನಿಗೈಯುತ್ತಿದ್ದವು.

೨೯-೩೧. ಈ ರೈವತಕೋದ್ಯಾನದಲ್ಲಿ ನಾನಾಲಂಕಾರ ಭೂಷಿತರಾದ ತನ್ನ ಹದಿನಾರು ಸಹಸ್ರ ಸ್ತ್ರೀಯರಿಂದ ಪರಿವೃತನಾಗಿ ವಾಸುದೇವನು ವಿಹರಿಸುತ್ತಿದ್ದನು. ಸುಂದರಿಯರಾದ ಪತ್ನಿಯರು ವಿಹಾರಕ್ಕೋಸ್ಕರ ಕಮಲದೆಲೆಗಳನ್ನು ತರಲು ಹೋಗಿದ್ದರು. ಅನಂತರ ವಾಸುದೇವನು ಅವರವರ ಯೋಗ್ಯತಾನುಸಾರ ಅನೇಕ ಪುಷ್ಪ

ತತ್ರಸ್ಮಿನ್ನಿೀಯತೇ ತಾಸಾಂ ಮಿಷ್ಟಂ ಪಾನಂ ಸುರಾಸವಂ ।
ಮಣಿಕಾಂಚನಪಾತ್ರೇಷು ನಾನಾಪುಷ್ಪಾಭಿವಾಸಿತಂ ॥ ೩೧ ॥

ವೃಂತೈಶ್ಚ ಸಹಕಾರಾಣಾಂ ಭಗ್ನೈರ್ನೀಲೋತ್ಪಲೈರಪಿ ।
ಏತಸ್ಮಿನ್ನಂತರೇ ಬುದ್ಧ್ವಾ ಮದ್ಯಮತ್ತಾ ಇತಿ ಸ್ತ್ರಿಯಃ ॥ ೩೨ ॥

ಉವಾಚ ನಾರದಸ್ಸಾಂಬಂ ಸುಬೋಧ್ಯ ತ್ವರಯನ್ನಿದಂ ।
ಗಚ್ಛ ರೈವತಕಂ ಸಾಂಬಮಾ ತಿಷ್ಠಸ್ವ ಕುಮಾರಕ ॥ ೩೩ ॥

ತ್ವಾಂ ಸಮಾಹೂಯ ತೇ ದೇವೋ ನ ಯುಕ್ತಂ ಸ್ಥಾತುಮತ್ರ ತೇ ।
ತದ್ವಾಕ್ಯಾರ್ಥಮಬುಧ್ವೈವ ಭಾವಿನಾರ್ಥೇನ ಚೋದಿತಃ ॥ ೩೪ ॥

ಗತ್ವಾ ತು ಸತ್ವರಂ ಸಾಂಬಃ ಪ್ರಣಾಮಮಕರೋತ್ಪಿತುಃ ।
ಏತಸ್ಮಿನ್ನಂತರೇ ತತ್ರ ಯಾಃ ಕಾಶ್ಚಿತ್ತುಲ್ಯಸಾತ್ವಿಕಾಃ ॥ ೩೫ ॥

---

ಗಳಿಂದಲೂ, ಮಾವಿನ ಚಿಗುರುಗಳಿಂದಲೂ, ಅರಳಿದ ಕನ್ನೈದಿಲೆ ಹೂವುಗಳಿಂದಲೂ ಸುವಾಸಿತವಾಗಿರುವ ಸುಧೆಯನ್ನು ಮಿತವಾಗಿ ರತ್ನಮಯವಾದ ಚಿನ್ನದ ಪಾತ್ರೆಗಳಲ್ಲಿ ಹಾಕುತ್ತಿದ್ದನು.

೩೨-೩೩. ಸಮಯವನ್ನು ಕಾಯುತ್ತಿದ್ದ ನಾರದನು ಸಾಂಬನನ್ನು ಶಿಕ್ಷಿಸಲು ಇದೇ ಸರಿಯಾದ ಸಮಯವೆಂದರಿತು, ಗೋಪಿಕಾಸ್ತ್ರೀಯರೆಲ್ಲರೂ ಮದ್ಯಪಾನದಿಂದ ಮತ್ತರಾಗಿರುವುದನ್ನು ನೋಡಿ, ಸಾಂಬನ ಸಮೀಪಕ್ಕೆ ಹೋಗಿ ಅವನನ್ನು ಎಚ್ಚರಿಸಿ "ಎಲೈ ಸಾಂಬನೇ; ಜಾಗ್ರತೆಯಾಗಿ ನೀನು ರೈವತೋದ್ಯಾನಕ್ಕೆ ಹೋಗಿ ನಿನ್ನ ತಂದೆಯನ್ನು ನೋಡು, ಒಂದುಕ್ಷಣವೂ ಇಲ್ಲಿ ನಿಲ್ಲಬೇಡ, ನಿನ್ನ ತಂದೆಯು ನಿನ್ನನ್ನರಸುತ್ತಿರುವನು. ಆದುದರಿಂದ ನೀನಿಲ್ಲಿರುವುದು ಸರಿಯಲ್ಲ" ಎಂದು ಹೇಳಿದನು.

೩೪. ಸಾಂಬನು ತನ್ನನ್ನು ವಂಚಿಸಲು ಮಾಡಿರುವನೆಂದು ಸ್ವಲ್ಪವೂ, ನಾರದನ ಯೋಚನೆಯನ್ನರಿಯದೆ ದೈವಪ್ರೇರಿತನಾಗಿ ಕೂಡಲೇ ರೈವತಕೋದ್ಯಾನಕ್ಕೆ ಹೋಗಿ ಅಲ್ಲಿ ತಂದೆಯನ್ನು ಕಂಡು ವಂದಿಸಿದನು.

೩೫-೩೬. ಆ ಸಂದರ್ಭದಲ್ಲಿ ಮದ್ಯಪಾನಮತ್ತರಾಗಿ ಸಾತ್ವಿಕರಾಗಿದ್ದ ಆ ಗೋಪಿಕಾ ಸ್ತ್ರೀಯರೆಲ್ಲರೂ ಹಿಂದೆ ಯಾವಾಗಲೂ ತಾವು ನೋಡದೆ, ಈಗ ಅನಿರೀಕ್ಷಿ

ದೃಷ್ಟ್ವಾ ತಾಃ ಸಹಸಾ ಸಾಂಬಂ ಸರ್ವಾಶ್ಚುಕ್ಷುಭಿರೇ ಸ್ತ್ರಿಯಃ ।
ನ ಚ ದೃಷ್ಟಃ ಪುರಾ ಯಾಭಿಃ ಪುಷ್ಪಕೇ ತು ಸಮೋ ಯುವಾ ॥ ೩೬ ॥

ಮದ್ಯದೋಷಾತ್ತತಸ್ತಾಸಾಂ ಸ್ವಭಾವದೋಷಾತ್ತಥೈವ ಚ ।
ಯೋಷಿತಾಮಲ್ಪಸತ್ವಾನಾಂ ಯೋನ್ಯಃ ಶೀಘ್ರಂ ಪ್ರಸುಸ್ರುವುಃ ॥ ೩೭ ॥

ಶ್ರೂಯತೇ ಚಾಪ್ಯಯಂ ಶ್ಲೋಕಃ ಪುರಾಣೇ ಪಠ್ಯತೇ ಯಥಾ ।
ಬ್ರಹ್ಮಚರ್ಯೇಽಪಿ ವರ್ತಂತ್ಯಾಃ ಸಾಧ್ವ್ಯಾ ಅಪಿ ತಥಾ ಶೃಣು ॥ ೩೮ ॥

ದೃಶ್ಯಂತು ಪುರುಷಂ ದೃಷ್ಟ್ವಾ ಯೋನಿಃ ಪ್ರಕ್ಲಿದ್ಯತೇ ಸ್ತ್ರಿಯಃ ।
ಲೋಕೇ ಚ ಶ್ರೂಯತೇ ಹ್ಯೇತನ್ಮದ್ಯಸ್ಯಾತಿಪ್ರಸೇವನಾತ್ ॥ ೩೯ ॥

---

ತವಾಗಿ ಕಣ್ಣೆದುರಿಗೆ ಬಂದು ನಿಂತಿರುವ ಮನ್ಮಥನಿಗೆ ಸಮನಾದ ಸೌಂದರ್ಯವುಳ್ಳ ಯುವಕನಾದ ಸಾಂಬನನ್ನು ನೋಡಿದರು. ಆಗ ಅವರೆಲ್ಲರ ಮನಸ್ಸೂ ಕಲಕಿ ಅವನಲ್ಲಿಯೇ ನೆಟ್ಟಿತು.

೩೭. ಮದ್ಯಪಾನ ಮಾಡಿ ಬುದ್ಧಿ ಹೀನವಾಗಿದ್ದುದರ ದೆಸೆಯಿಂದ, ಬಹು ಬೇಗ ಬದಲಾಯಿಸುವ ಸ್ವಭಾವವುಳ್ಳ ಆ ಗೋಪಿಕಾ ಸ್ತ್ರೀಯರುಗಳ ಯೋನಿಗಳು ಕೂಡಲೆ ಆರ್ದ್ರವಾದವು.

೩೮-೪೦. ಅನವರತವೂ ಬ್ರಹ್ಮಚರ್ಯೆಯಲ್ಲಿಯೇ ಇರುವವರಿಗೂ, ಪತಿವ್ರತಾ ಶಿರೋಮಣಿ ಎನಿಸಿದ ಸತಿಗೂ ಸಹ, ಸುಂದರನಾದ ಪುರುಷನ ದರ್ಶನವು ಯೋನಿಯಲ್ಲಿ ಆರ್ದ್ರತೆಯನ್ನುಂಟುಮಾಡುವುದೆಂದು ಉಕ್ತವಾಗಿದೆ. ಆದರಲ್ಲಿಯೂ ಹೆಚ್ಚಾಗಿ ಲೋಕದಲ್ಲಿ ಅತಿಯಾದ ಮದ್ಯಸೇವನೆಯಿಂದ ಈ ರೀತಿಯಾಗುವುದು ನಿಶ್ಚಯ. ಸತ್ಕುಲ ಪ್ರಸೂತರಾದ ಮತ್ತು ಲಜ್ಜಾವತಿಯರಾದ ನಾರಿಯರೂ ಸಹ ನಾಚಿಕೆಯನ್ನು ತೊರೆಯುವುದು ಸಹಜ. ಮಾಂಸ ವಿಶಿಷ್ಟವಾದ ಭೋಜನವೂ ಜಿಡ್ಡಿನ

ಲಜ್ಜಾಂ ಮುಂಚಂತಿ ಹ್ರೀಮತ್ಯಃ ನಾರ್ಯಸ್ಸತ್ಕುಲಜಾ ಅಪಿ ।
ಸಮಾಂಸೈರ್ಭೋಜನೈಃ ಸ್ನಿಗ್ಧೈಸ್ತಥಾ ಮಧುರಸಾಸವೈಃ ॥ ೪೦ ॥

ಗಂಧೈರ್ಮನೋಜ್ಞೈರ್ವಸ್ತ್ರೈಶ್ಚ ಕಾಮಃ ಸ್ತ್ರೀಷು ವಿಜೃಂಭತೇ ।
ಏತದ್ಬುದ್ಧ್ವಾ ಕುಲಸ್ತ್ರೀಣಾಂ ಶ್ರೇಯಃ ಪರಮಮಿಚ್ಛತಾ ।
ಮದ್ಯಂ ನ ದೇಯಮಲ್ಪಂ ವಾ ಪುರುಷೇಣ ವಿಪಶ್ಚಿತಾ ॥ ೪೧ ॥

॥ ವಸಿಷ್ಠ ಉವಾಚ ॥

ನಾರದೋಽಪ್ಯಥ ತಂ ಸಾಂಬಂ ಪ್ರೇಷಯಿತ್ವಾ ತ್ವರಾನ್ವಿತಃ ।
ಆಜಗಾಮಾಥ ತತ್ರೈವ ಸಾಂಬಸ್ಯಾನುಪದೇನ ತು ॥ ೪೨ ॥

ಆಯಾಂತಂ ತಮಭಿಪ್ರೇಕ್ಷ್ಯ ಗುರುಂ ದೇವರ್ಷಿಸತ್ತಮಮ್ ।
ಸಹಸೈವೋತ್ಥಿತಾಸ್ಸರ್ವಾಃ ಸ್ತ್ರಿಯಸ್ತಾ ಮದವಿಹ್ವಲಾಃ ॥ ೪೩ ॥

---

ಪದಾರ್ಥಗಳೂ, ಮಧು ಮತ್ತು ಸುರಾಪಾನಗಳೂ, ಮನೋಹರವಾದ ಗ್ರಂಥಗಳೂ ಮತ್ತು ವಸ್ತ್ರಗಳೂ ಸಹ ಸ್ತ್ರೀಯರಲ್ಲಿ ಕಾಮೋದ್ರೇಕವನ್ನುಂಟುಮಾಡುವುವು. ಎಂದು ಜನಗಳ ಅನುಭವವೂ ಪ್ರಸಿದ್ಧಿಯಾಗಿದೆ.

೪೧. ಕುಲಸ್ತ್ರೀಯರುಗಳಿಗೆ ಉತ್ತಮವಾದ ಶ್ರೇಯಸ್ಸನ್ನಪೇಕ್ಷಿಸುವ ಪುರುಷನು, ಇವುಗಳನ್ನೆಲ್ಲ ಸರಿಯಾಗಿ ಪರ್ಯಾಲೋಚಿಸಿ, ಸ್ತ್ರೀಯರಿಗೆ ಸ್ವಲ್ಪಮದ್ಯವನ್ನೂ ಸಹ ಕೊಡಬಾರದು.

೪೨. ನಾರದನೂ ಸಹ ಮೊದಲು ಆ ಸಾಂಬನನ್ನು ಕಳುಹಿಸಿ, ಜಾಗ್ರತೆಯಾಗಿ ಸಾಂಬನನ್ನು ಹಿಂಬಾಲಿಸಿ ತಾನೂ ಅಲ್ಲಿಗೆ ಬಂದನು.

೪೩. ಆತುರಾತುರವಾಗಿ ಬರುತ್ತಿದ್ದ ದೇವರ್ಷಿ ಶ್ರೇಷ್ಠನೂ, ಗುರುವೂ ಆದ ನಾರದನನ್ನು ನೋಡಿ ಆ ಗೋಪಿಕಾ ಸ್ತ್ರೀಯರೆಲ್ಲರೂ ಮದದಿಂದ ಕಾತುರರಾಗಿ ಎದ್ದು ನಿಂತುಕೊಂಡರು.

ತಾಸಾಮುಥೋತ್ಥಿತಾನಾಂ ತು ವಾಸುದೇವಸ್ತ್ವಪಶ್ಯತ ।
ಭಿತ್ವಾ ವಾಸಾಂಸಿ ಶುಕ್ಲಾನಿ ಪತ್ರೇಷು ಪತಿತಂ ಮದಂ ॥ ೪೪ ॥

ತಂ ದೃಷ್ಟ್ವಾ ತು ಹರಿಃ ಕ್ರುದ್ಧಃ ಶಾಶ್ಯಶಾಪ ತದಾ ಸ್ತ್ರಿಯಃ ।
ಯಸ್ಮಾದ್ಧೃತಾನಿ ಚೇತಾಂಸಿ ಮಾಂ ಮುಕ್ತ್ವಾನ್ಯತ್ರ ವಃ ಸ್ತ್ರಿಯಃ ॥ ೪೪ ॥

ತಸ್ಮಾತ್ಪತಿಕೃತಾನ್ಲೋಕಾನಾಯುಷೋಂತೇ ನ ಯಾಸ್ಯಥ ।
ಪತಿಲೋಕಾತ್ಪರಿಭ್ರಷ್ಟಾಃ ಸ್ವರ್ಗಂ ಚಾಪಿ ಗತೇ ಮಯಿ ।
ಭೂತ್ವಾಹ್ಯಶರಣಾ ಯೂಯಂ ದಸ್ಯುಹಸ್ತಂ ಗಮಿಷ್ಯಥ ॥ ೪೬ ॥

॥ ವಸಿಷ್ಠ ಉವಾಚ ॥

ಶಾಪದೋಷಾತ್ತತಸ್ತಸ್ಮಾತ್ ಸ್ತ್ರಿಯಃ ಸ್ವರ್ಗಂಗತೇ ಹರೌ ।
ಹೃತಾಃ ಪಾಂಚನದ್ಯೈರ್ಮ್ಲೇಚ್ಛೈರರ್ಜುನಸ್ಯ ತು ಪಶ್ಯತಃ ॥ ೪೭ ॥

೪೪-೪೬. ಹಾಗೆ ಗೋಪಿಕಾ ಸ್ತ್ರೀಯರು ಎದ್ದು ನಿಂತುಕೊಳ್ಳಲು ಅವರ ಶುಭ್ರವಾದ ವಸ್ತ್ರಗಳಿಂದ ಜಾರಿ ಅವರ ಮದ ಶೋಣಿತವು ಕಮಲ ಪತ್ರಗಳಲ್ಲಿ ಬಿದ್ದಿತು. ಇದನ್ನು ವಾಸುದೇವನು ನೋಡಿ ಕೋಪಗೊಂಡು, "ಆಹಾ! ನಿಮ್ಮ ಮನಸ್ಸು ನನ್ನನ್ನು ಬಿಟ್ಟು ಬೇರೆ ಕಡೆ ಆಸಕ್ತವಾಯಿತು. ನೀವು ನಿಮ್ಮ ಆಯುರ್ದಾಯವು ಮುಗಿದಮೇಲೆ, ಪತಿವ್ರತೆಯರ ಲೋಕವನ್ನು ಹೊಂದಲಾರಿರಿ. ಮತ್ತು ನಾನು ಸ್ವರ್ಗಕ್ಕೆ ಹೋದನಂತರ ಇಲ್ಲಿಂದ ಭ್ರಷ್ಟರಾಗಿ ರಕ್ಷಕರಿಲ್ಲದೆ ಕಳ್ಳರ ಪಾಲಾಗುವಿರಿ" ಎಂದು ಗೋಪಿಕಾ ಸ್ತ್ರೀಯರನ್ನು ಶಪಿಸಿದನು.

೪೭. ಹರಿಯು ಶಾಪವಿತ್ತನಂತರ, ಸ್ವಲ್ಪ ದಿನಗಳಲ್ಲಿ ಸ್ವರ್ಗಕ್ಕೆ ತೆರಳಲು ಅವನ ಪತ್ನಿಯರಾದ ಆ ಗೋಪಿಕಾ ಸ್ತ್ರೀಯರು, ಆ ಶಾಪದೋಷದ ಮಹಿಮೆಯಿಂದ ಪಂಚನದ ದೇಶದ ಕಳ್ಳರುಗಳಿಂದ ಅರ್ಜುನನು ನೋಡುತ್ತಿರುವಂತೆಯೇ ಅಪಹರಿಸಲ್ಪಟ್ಟು ಒಯ್ಯಲ್ಪಟ್ಟರು.

ತತಸ್ತಾಸ್ತುಲ್ಯಶಾಪತ್ವಾದೇವಂ ಸಂದೂಷಿತಾಃ ಸ್ತ್ರಿಯಃ ।
ಪ್ರಾಪ್ತವತ್ಯೋ ಮಹಚ್ಛಾಪಂ ಮುಕ್ತ್ವಾ ತಿಸ್ರಃ ಪತಿವ್ರತಾಃ ॥ ೪೮ ॥

ರುಕ್ಮಿಣೀಂ ಸತ್ಯಭಾಮಾಂ ಚ ತಥಾ ಜಾಂಬವತೀಮಪಿ ।
ಶಪ್ತ್ವೈವಂ ತಾಃ ಸ್ತ್ರಿಯಃ ಕೃಷ್ಣಃ ಸಾಂಬಮಪ್ಯಶಪತ್ತತಃ ॥ ೪೯ ॥

॥ ವಾಸುದೇವ ಉವಾಚ ॥

ಯಸ್ಮಾದತೀವ ಕಾಂತಂ ತೇ ದೃಷ್ಟ್ವಾ ರೂಪಮಿಮಾಃ ಸ್ತ್ರಿಯಃ ।
ಕ್ಷುಬ್ಧಾಃ ಸರ್ವಾಸ್ತು ತೇಸ್ಮಾತ್ತ್ವಂ ಕುಷ್ಠರೋಗಮವಾಪ್ಸ್ಯಸಿ ॥ ೫೦ ॥

॥ ವಸಿಷ್ಠ ಉವಾಚ ॥

ಯಸ್ಮಿನ್ನಪ್ತಃ ಕ್ಷಣೇಚಾಸೌ ಪಿತ್ರಾ ಪುತ್ರಃ ಸ್ವಯಂಭುವಃ ।
ಪ್ರಾಪ್ತವಾನ್ಕುಷ್ಠರೋಗಿತ್ವಂ ವಿರೂಪತ್ವಂ ಚ ದುಃಸಹಂ ॥ ೫೧ ॥

---

೪೮-೪೯. ಈ ರೀತಿ ಪರಮಾತ್ಮನಿಂದಲೂ ದೂಷಿತರಾದ ಸ್ತ್ರೀಯರುಗಳಲ್ಲಿ ಪತಿವ್ರತೆಯರಾದ ರುಕ್ಮಿಣೀ, ಸತ್ಯಭಾಮಾ ಮತ್ತು ಜಾಂಬವತೀ ಈ ಮೂವರನ್ನು ಬಿಟ್ಟು, ಉಳಿದ ಹದಿನಾರು ಸಹಸ್ರ ಗೋಪಿಕಾಸ್ತ್ರೀಯರೆಲ್ಲರೂ ಸಮಾನವಾದ ಪಾಪದ ದೆಸೆಯಿಂದ ಮಹಾ ಶಾಪಕ್ಕೆ ಗುರಿಯಾದರು. ಇವರುಗಳಿಗೆ ಶಾಪವಿತ್ತ ನಂತರ ಶ್ರೀಕೃಷ್ಣನು ಸಾಂಬನನ್ನು ನೋಡಿ ಮುಂದೆ ಹೇಳುವ ರೀತಿ ಅವನಿಗೂ ಶಾಪವಿತ್ತನು.

೫೦ "ಸುಂದರವಾಗಿ ಹೊಳೆಯುತ್ತಿರುವ ಈ ರೂಪನ್ನು ನೋಡಿ ಈ ಗೋಪಿಕಾ ಸ್ತ್ರೀಯರೆಲ್ಲರೂ ಮೋಹಗೊಂಡರಾದ ಕಾರಣ ನಿನಗೆ ಈ ರೂಪವು ಹೋಗಿ ಕುಷ್ಠ ರೋಗವು ಪ್ರಾಪ್ತವಾಗಲಿ."

೫೧. ತಂದೆಯಾದ ವಾಸುದೇವನು ಶಾಪವಿತ್ತ ಮರುಕ್ಷಣದಲ್ಲಿಯೇ,, ಅಯೋನಿಜನಾದ ಸಾಂಬನು ಕುಷ್ಠರೋಗವನ್ನು ಹೊಂದಿ ವಿಕಾರವಾದ ರೂಪವನ್ನು ಧರಿಸಿದನು.

ಸಾಂಬೇನ ಪುನರಪ್ಯೇವಂ ದುರ್ವಾಸಾಃ ಕೋಪಿತೋ ಮುನಿಃ ।
ಭಾವ್ಯೇನಾರ್ಥೇನ ಚಾತ್ಮಾರ್ಥಂ ಪೂರ್ವಾನುಸ್ಮರಣೇನ ವೈ ॥ ೫೨ ॥

ಪ್ರಾಪ್ತವಾನ್ಸುಮಹಚ್ಛಾಪಂ ಸಾಂಬೋ ವೈ ಮನುಜೋತ್ತಮಃ ।
ತಚ್ಛಾಪಾನ್ಮುಸಲಂ ಜಾತಂ ಕುಲಂ ಯೇನಾಸ್ಯ ಪಾತಿತಮ್ ॥ ೫೩ ॥

ಶ್ರುತ್ವಾ ದುರ್ವಿನಯಾದ್ದೋಷಾನೇವಮಾದಿನ್ವಿಪಶ್ಚಿತಾ ।
ನಿತ್ಯಂ ಭಾವ್ಯಂ ವಿನೀತೇನ ಗುರುದೇವದ್ವಿಜಾತಿಷು ॥ ೫೪ ॥

ತತಃ ಶಾಪಾಭಿಭೂತೇನ ಸಾಂಬೇನಾರಾಧ್ಯ ಭಾಸ್ಕರಂ ।
ಪುನಃ ಸಂಪ್ರಾಪ್ಯ ತದ್ರೂಪಂ ಸ್ವನಾಮ್ನಾರ್ಕೋ ನಿವೇಶಿತಃ ॥ ೫೫ ॥

---

೫೨-೫೩. ಸಾಂಬನು ಇನ್ನೊಂದು ಬಾರಿ ಮಹಾ ಕೋಪಸ್ವಭಾವವುಳ್ಳ ದೂರ್ವಾಸಮಹರ್ಷಿಗಳ ಕೋಪಕ್ಕೆ ಗುರಿಯಾಗಿ, ಭವಿಷ್ಯದರ್ಥದ ಅನುಸಾರವಾಗಿಯೂ ಪೂರ್ವಜನ್ಮಪ್ರಾರಬ್ಧಸ್ಮರಣೆಯಿಂದಲೂ ಸಹ ಅವರಿಂದ ಘೋರವಾದ ಶಾಪವನ್ನು ಪಡೆದನು. ಆ ಶಾಪವು ಒನಕೆಯ ರೂಪವನ್ನು ಹೊಂದಿ ಮನುಜಶ್ರೇಷ್ಠನಾದ ಸಾಂಬನ ವಂಶದ ನಿರ್ಮೂಲಕ್ಕೆ ಕಾರಣವಾಯಿತು.

೫೪. ಪುರುಷನು ತನ್ನ ಕೆಟ್ಟ ನಡತೆಗಳಿಂದ ಈ ತೆರನಾದ ದೋಷಗಳನ್ನು ಹೊಂದಿದನೆಂಬುದನ್ನು ಚೆನ್ನಾಗಿ ಗಮನಿಸಿ. ಮನುಷ್ಯರು, ತಮ್ಮ ಗುರುಗಳು, ದೇವತೆಗಳು ಮತ್ತು ಬ್ರಾಹ್ಮಣರು ಇವರೇ ಮೊದಲಾದ ಪೂಜ್ಯರಲ್ಲಿ ವಿನಯದಿಂದ ನಡೆದುಕೊಳ್ಳಬಹುದು.

೫೫. ಶಾಪವನ್ನು ಹೊಂದಿದಮೇಲೆ ಕೃಷ್ಣಪುತ್ರನಾದ ಸಾಂಬನು ಭಗವಂತನಾದ ಸೂರ್ಯದೇವನನ್ನು ಪೂಜಿಸಿ ಪುನಃ ಅವನ ಅನುಗ್ರಹದಿಂದ ಹಿಂದಿನ ತನ್ನ ಸುಂದರವಾದ ರೂಪವನ್ನು ಹೊಂದಿ, ತನ್ನ ಹೆಸರಿನಿಂದ ಆ ಸೂರ್ಯಭಗವಂತನನ್ನು ಪ್ರತಿಷ್ಠೆಮಾಡಿದನು.

**ನಾರದೋ ದರ್ಶಯಿತ್ವಾ ತು ಸ್ತ್ರೀಣಾಂ ಭಾವವಿಪರ್ಯಯಂ ।**
**ಸಾಂಬಂ ಶಾಪೇನ ಸಂಯೋಜ್ಯ ತತ್ರೈವಾಂತರಧೀಯತ ॥ ೫೬ ॥**

**ಇತಿ ಶ್ರೀ ಸಾಂಬಪುರಾಣೇ ಸಾಂಬಶಾಪೋನಾಮ ತೃತೀಯೋಽಧ್ಯಾಯಃ**

---

೫೬. ನಾರದನಾದರೋ ಸ್ತ್ರೀಯರ ಮನಶ್ಚಾಂಚಲ್ಯವನ್ನು ಕೃಷ್ಣನಿಗೆ ತೋರಿಸಿಕೊಟ್ಟು ಆದರಿಂದ ಸಾಂಬನನ್ನು ಶಾಪಕ್ಕೆ ಗುರಿಪಡಿಸಿದನು.

ಇಲ್ಲಿಗೆ ಸಾಂಬಪುರಾಣದಲ್ಲಿನ ಶಾಪವೃತ್ತಾಂತನಿರೂಪಣರೂಪವಾದ
ಮೂರನೆಯ ಅಧ್ಯಾಯವು ಮುಗಿದುದು.

—o—

ಶ್ರೀಃ

# ಅಥ ಶ್ರೀ ಸಾಂಬಪುರಾಣೇ ಚತುರ್ಥೋಽಧ್ಯಾಯಃ

॥ ಶ್ರೀ ಸೂರ್ಯಾಯ ನಮಃ ॥

---

॥ ಬೃಹದ್ಬಲ ಉವಾಚ ॥

**ಸ್ಥಾಪಿತೋ ಯದಿ ಸಾಂಬೇನ ಸೂರ್ಯಶ್ಚಂದ್ರಸರಿತ್ತಟೇ ।**
**ತಸ್ಮಾನ್ನಾದ್ಯಮಿದಂ ಸ್ಥಾನಂ ಯತ್ಥೈತದ್ಭಾಷಿತಂ ತ್ವಯಾ ॥ ೧ ॥**

॥ ವಸಿಷ್ಠ ಉವಾಚ ॥

**ಆದ್ಯಂ ಸ್ಥಾನಮಿದಂ ಭಾನೋಃ ಪಶ್ಚಾತ್ಸಾಂಬೇನ ನಿರ್ಮಿತಂ ।**
**ವಿಸ್ತರೇಣಾಸ್ಯ ಚಾದ್ಯತ್ವಂ ಕಥ್ಯಮಾನಂ ನಿಬೋಧ ಮೇ ॥ ೨ ॥**

## ನಾಲ್ಕನೆಯ ಅಧ್ಯಾಯ

೧. ಸಾಂಬನು ಚಂದ್ರಸರಿತ್ತೀರದಲ್ಲಿ ಸೂರ್ಯನನ್ನು ಸ್ಥಾಪನೆಮಾಡಿದನೆಂದು ಹೇಳಿದುದರಿಂದ ಇದು ಸೂರ್ಯನ ಮೊದಲನೆಯ ಆವಾಸಸ್ಥಳವೆನಿಸಲಾರದಲ್ಲವೇ ? ಎಂದು ಬೃಹದ್ಬಲನು ವಸಿಷ್ಠರನ್ನು ಕುರಿತು ಕೇಳಿದನು.

೨. ವಸಿಷ್ಠಮಹರ್ಷಿಯು ಬೃಹದ್ಬಲನಾಡಿದುದನ್ನು ಕೇಳಿ, " ಎಲೈ ಬೃಹದ್ಬಲನೇ, ಸೂರ್ಯನ ಮೊದಲಿನಸ್ಥಾನವೇ ಇದಾಗಿತ್ತು. ಆದುದರಿಂದಲೇ ಸಾಂಬನು ತನ್ನ ಕುಷ್ಠರೋಗ ನಿವಾರಣೆಯಾದ ನಂತರ ಇಲ್ಲಿ ಭಗವಂತನಾದ ಸೂರ್ಯನನ್ನು ಲೋಕೋಪಕಾರಾರ್ಥವಾಗಿ ಪೂಜಿಸಿದನು. ಆದುದರಿಂದ ಇದೇ ಮೊದಲನೆಯ ಸ್ಥಾನವೆಂಬುದನ್ನು ತಿಳಿ. ಇದೇ ಮೊದಲನೆ ಸ್ಥಾನವು ಎಂದು ಹೇಳಲು ಕಾರಣ ವೇನೆಂಬುದನ್ನು ವಿಸ್ತಾರವಾಗಿ ಹೇಳುವೆನು ಕೇಳು " ಎಂದು ಹೇಳಿದರು

ಅನಾದ್ಯೋ ಲೋಕನಾಥಃ ಸ ವಿಶ್ವಮಾಲೀ ಜಗತ್ಪತಿಃ ।
ಮಿತ್ರತ್ವೇಽವಸ್ಥಿತೋ ದೇವಃ ತಪಸ್ತೇಪೇ ನರಾಧಿಪಃ ॥ ೩ ॥

ಅನಾದಿನಿಧನೋ ಬ್ರಹ್ಮಾ ನಿತ್ಯಶ್ಚಾಕ್ಷರ ಏವ ಚ ।
ಸೃಷ್ಟ್ವಾ ಪ್ರಜಾಪತೀನ್ಸರ್ವಾನ್ ಸೃಷ್ಟ್ವಾ ಚ ವಿವಿಧಾಃ ಪ್ರಜಾಃ ॥ ೪ ॥

ತತಃ ಸ ಚ ಸಹಸ್ರಾಂಶುರವ್ಯಕ್ತಃಪುರುಷಸ್ಸ್ವಯಂ ।
ಕೃತ್ವಾ ದ್ವಾದಶಧಾತ್ಮಾನಮದಿತ್ಯಾಮುದಪದ್ಯತ ॥ ೫ ॥

ಇಂದ್ರೋ ಧಾತಾಽಥ ಪರ್ಜನ್ಯಃ ಪೂಷಾ ತ್ವಷ್ಟಾರ್ಯಮಾ ಭಗಃ ।
ವಿವಸ್ವಾನ್ವಿಷ್ಣುರಂಶುಶ್ಚ ವರುಣೋ ಮಿತ್ರ ಏವ ಚ ॥ ೬ ॥

ಆಭಿರ್ದ್ವಾದಶಭಿಸ್ತೇನ ಸೂರ್ಯೇಣ ಪರಮಾತ್ಮನಾ ।
ಸರ್ವಂ ಜಗದಿದಂ ವ್ಯಾಪ್ತಂ ಮೂರ್ತಿಭಿಸ್ತು ನರಾಧಿಪ ॥ ೭ ॥

---

೩. ಆದಿರಹಿತನೂ, ಲೋಕನಾಥನೂ, ಪ್ರಪಂಚವನ್ನೇ ಮಾಲೆಯಂತೆ ಧರಿಸಿರುವವನೂ, ಸಕಲ ಜಗತ್ತುಗಳಿಗೂ ಒಡೆಯನಾದವನು ಪರಮಾತ್ಮನು. ಸಕಲ ಚರಾಚರಪ್ರಾಣಿಗಳಲ್ಲಿಯು ಮೈತ್ರಿಯನ್ನು ಹೊಂದಿದ ಆ ದೇವನು ಒಂದು ಸಲ ತಾನೇ ತಪಸ್ಸುಮಾಡಿದನು.

೪-೭. ಆದ್ಯಂತರಹಿತನೂ, ನಿತ್ಯನೂ, ಚ್ಯುತಿಯಿಲ್ಲದವನೂ ಆದ ಪರಬ್ರಹ್ಮನು ಕೆಲವು ಕಾಲ ತಪಸ್ಸನ್ನಾಚರಿಸಿದ ನಂತರ ಅನೇಕ ಬ್ರಹ್ಮರುಗಳನ್ನೂ, ಪ್ರಜೆಗಳನ್ನೂ ಸೃಷ್ಟಿಮಾಡಿ ಕೊನೆಗೆ ಇತರರಿಗೆ ಗೋಚರವಾಗದ ಸ್ವರೂಪವುಳ್ಳ ತಾನೂ ಸಹಸ್ರ ಕಿರಣನೆನಿಸಿ, ಇಂದ್ರ, ಧಾತಾ, ಪರ್ಜನ್ಯ, ಪೂಷಾ, ತ್ವಷ್ಟಾ, ಅರ್ಯಮಾ, ಭಗ ವಿವಸ್ವಾನ್, ವಿಷ್ಣು, ಅಂಶುಮಾನ್, ವರುಣ, ಮಿತ್ರ ಈ ಹನ್ನೆರಡು ಹೆಸರುಳ್ಳವನಾಗಿ ಅದಿತಿದೇವಿಯ ಗರ್ಭದಲ್ಲಿ ಜನಿಸಿ, ತನ್ನ ಈ ಮೂರ್ತಿಗಳಿಂದ ಪ್ರಪಂಚವನ್ನೆಲ್ಲಾ ವ್ಯಾಪಿಸಿರುವನು.

ತಸ್ಯ ಯಾ ಪ್ರಥಮಾಮೂರ್ತಿರಾದಿತ್ಯಸ್ಯೇಂದ್ರಸಂಜ್ಞಿತಾ ।
ಸ್ಥಿತಾ ಸಾ ದೇವರಾಜತ್ವೇ ದೇವಾನಾಮನುಶಾಸನೀ ॥ ೮ ॥

ದ್ವಿತೀಯಾರ್ಕಸ್ಯ ಯಾ ಮೂರ್ತಿರ್ನಾಮ್ನಾ ಧಾತೇತಿ ಕೀರ್ತಿತಾ ।
ಸ್ಥಿತಾ ಪ್ರಜಾಪತಿತ್ವೇ ಸಾ ವಿವಿಧಾಃ ಸೃಜತೇ ಪ್ರಜಾಃ ॥ ೯ ॥

ತೃತೀಯಾರ್ಕಸ್ಯ ಯಾ ಮೂರ್ತಿಃ ಪರ್ಜನ್ಯ ಇತಿ ವಿಶ್ರುತಾ ।
ಮಾಘೇ ವ್ಯವಸ್ಥಿತಾ ಸಾ ತು ವರ್ಷತೇ ಚ ಗಭಸ್ತಿಭಿಃ ॥ ೧೦ ॥

ಚತುರ್ಥೀ ತಸ್ಯ ಯಾ ಮೂರ್ತಿಃ ನಾಮ್ನಾ ಪೂಷೇತಿ ವಿಶ್ರುತಾ ।
ಅನ್ನೇ ವ್ಯವಸ್ಥಿತಾ ಸಾ ತು ಪ್ರಜಾಃ ಪುಷ್ಣಾತಿ ನಿತ್ಯಶಃ ॥ ೧೧ ॥

ಪಂಚಮೀ ತಸ್ಯ ಯಾ ಮೂರ್ತಿಃ ನಾಮ್ನಾ ತ್ವಷ್ಟೇತಿ ವಿಶ್ರುತಾ ।
ಸ್ಥಿತಾ ವನಸ್ಪತೌ ಸಾ ತು ಓಷಧೀಷು ಚ ಸರ್ವಶಃ ॥ ೧೨ ॥

---

೮. ಎಲೈ ಬೃಹದ್ಬಲರಾಜನೇ, ಸೂರ್ಯನ ಮೊದಲನೇ ಮೂರ್ತಿಯು ಇಂದ್ರನೆಂಬ ಹೆಸರುಳ್ಳದ್ದು. ಇದು ದೇವತೆಗಳ ಒಡೆತನವನ್ನು ಹೊಂದಿ ಅವರನ್ನು ಕಾಪಾಡುತ್ತಿರುವುದು.

೯. ಸೂರ್ಯನ ಧಾತೃನಾಮಾಂಕಿತವಾದ ಎರಡನೆಯ ಮೂರ್ತಿಯು ಪ್ರಜಾಪತಿತ್ವ ಧರ್ಮವನ್ನು ಹೊಂದಿ ವಿಧವಿಧವಾದ ಪ್ರಜಾನಿರ್ಮಾಣ ಕಾರ್ಯದಲ್ಲಾಸಕ್ತವಾಗಿರುವುದು.

೧೦. ಸೂರ್ಯನ ತೃತೀಯ ಮೂರ್ತಿಯಾದ ಪರ್ಜನ್ಯವು ಮೇಘಮಂಡಲದಲ್ಲಿ ನೆಲಸಿ ತನ್ನ ಕಿರಣಗಳಿಂದ ಪ್ರಪಂಚಕ್ಕೆ ಮಳೆಯನ್ನು ಸುರಿಸುವುದು.

೧೧. ನಾಲ್ಕನೆಯದಾದ ಸೂರ್ಯನ ಮೂರ್ತಿಯು ಪೂಷಾ ಎಂದು ಪ್ರಸಿದ್ಧಿ ಹೊಂದಿ, ಅನ್ನದಲ್ಲಿ ವಾಸಿಸುತ್ತಾ ಪ್ರಜೆಗಳಿಗೆ ಯಾವಾಗಲೂ ಪುಷ್ಟಿಯುಂಟಾಗುವಂತೆ ಮಾಡುತ್ತದೆ.

೧೨. ತ್ವಷ್ಟನೆನಿಸಿದ ಸೂರ್ಯನ ಐದನೆಯ ಮೂರ್ತಿಯು ವನಸ್ಪತಿಗಳಲ್ಲಿಯೂ ಸಕಲ ಔಷಧಿಗಳಲ್ಲಿಯೂ ವ್ಯಾಪಿಸಿದೆ.

ಮೂರ್ತಿಃ ಷಷ್ಠೀ ರವೇರ್ಯಾ ತು ಅರ್ಯಮಾ ಇತಿ ವಿಶ್ರುತಾ ।
ವಾಯೋಸ್ಸಂಚರಣಾರ್ಥಂ ಸಾ ದೇಹೇಷ್ವೇವ ಸಮಾಶ್ರಿತಾ ॥ ೧೩ ॥

ಭಾನೋ ರ್ಯಾ ಸಪ್ತಮೀ ಮೂರ್ತಿಃ ನಾಮ್ನಾ ಭಗ ಇತಿ ಶ್ರುತಾ ।
ಭೂಮೌ ವ್ಯವಸ್ಥಿತಾ ಸಾ ತು ಶರೀರೇಷು ಚ ದೇಹಿನಾಂ ॥ ೧೪ ॥

ಮೂರ್ತಿ ರ್ಯಾ ಚಾಷ್ಟಮೀ ವಾಸ್ಯ ವಿವಸ್ವಾನಿತಿ ವಿಶ್ರುತಾ ।
ಅಗ್ನೌ ವ್ಯವಸ್ಥಿತಾ ಸಾ ತು ಪಚತ್ಯನ್ನಂ ಶರೀರಿಣಾಂ ॥ ೧೫ ॥

ನವಮೀ ಮಿತ್ರಭಾನೋರ್ಯಾ ಮೂರ್ತಿರ್ವಿಷ್ಣುಶ್ಚ ವಾಮತಃ ।
ಪ್ರಾದುರ್ಭವತಿ ಸಾ ನಿತ್ಯಂ ದೇವಾನಾಮರಿಸೂದನೀ ॥ ೧೬ ॥

ದಶಮೀ ತಸ್ಯ ಯಾ ಮೂರ್ತಿ ರಂಶುಮಾನಿತಿ ವಿಶ್ರುತಾ ।
ವಾಯೌ ಪ್ರತಿಷ್ಠಿತಾ ಸಾ ತು ಪ್ರಹ್ಲಾದಯತಿ ಸಾ ಪ್ರಜಾಃ ॥ ೧೭ ॥

---

೧೩. ಅರ್ಯಮಾ ಎಂದು ಪ್ರಸಿದ್ಧಿಹೊಂದಿದ ಸೂರ್ಯನ ಆರನೆಯ ಮೂರ್ತಿಯು ವಾಯುವು ಸಂಚರಿಸುವುದಕ್ಕೆ ಅನುಕೂಲವಾಗುವಂತೆ ಶರೀರಗಳಲ್ಲೇ ನೆಲಸಿ ಉಪಕಾರ ಮಾಡುತ್ತದೆ

೧೪. ಭಗಾಖ್ಯವಾದ ಸೂರ್ಯನ ಏಳನೆಯ ಮೂರ್ತಿಯು ಭೂಮಿಯಲ್ಲಿ ನೆಲಸಿ ಸಕಲ ಪ್ರಾಣಿಗಳ ಶರೀರಗಳಲ್ಲಿಯೂ ಅಡಕವಾಗಿದೆ.

೧೫. ವಿವಸ್ವಾನೆಂದು ಹೆಸರುಳ್ಳ ಸೂರ್ಯನ ಎಂಟನೆಯ ಮೂರ್ತಿಯು ಅಗ್ನಿಯಲ್ಲಿ ಪ್ರಾಣಿಗಳ ಶರೀರದಲ್ಲಿರುವ ಅನ್ನವನ್ನು ಜೀರ್ಣವಾಗುವಂತೆ ಮಾಡುತ್ತದೆ.

೧೬. ಸೂರ್ಯನ ಒಂಭತ್ತನೆಯ ಮೂರ್ತಿಯು ವಿಷ್ಣುವೆಂಬ ಹೆಸರುಳ್ಳದ್ದಾಗಿ ಯಾವಾಗಲೂ ದೇವತೆಗಳಿಗೆ ಶತ್ರುಗಳಾದ ರಾಕ್ಷಸಾದಿಗಳನ್ನು ಧ್ವಂಸಮಾಡುತ್ತಾ ಬೆಳಗುತ್ತಿರುವುದು.

೧೭. ಅಂಶುಮಾನೆಂದು ಪ್ರಸಿದ್ಧಿಪಡೆದಿರುವ ಸೂರ್ಯನ ಹತ್ತನೆಯ ಮೂರ್ತಿಯು,ವಾಯುವಿನಲ್ಲಿ ನೆಲಸಿ, ಎಲ್ಲಾ ಪ್ರಜೆಗಳನ್ನೂ ಸಂತೋಷಗೊಳಿಸುವುದು

ಮೂರ್ತಿಸ್ತ್ವೇಕಾದಶೀ ಯಾ ತು ಭಾನೋರ್ವರುಣಸಂಜ್ಞಿತಾ ।
ಸಾ ಜೀವಯತಿ ವೈ ಕೃತ್ಸ್ನಂ ಜಗದಪ್ಸು ಪ್ರತಿಷ್ಠಿತಂ ॥ ೧೮ ॥

ಅಪಾಂ ಸ್ಥಾನಂ ಸಮುದ್ರಸ್ತು ವರುಣೋಽಪ್ಸು ಪ್ರತಿಷ್ಠಿತಃ ।
ತಸ್ಮಾದ್ವೈ ಪ್ರೋಚ್ಯತೇ ನಾಮ್ನಾ ಸಾಗರೋ ವರುಣಾಲಯಃ ॥ ೧೯ ॥

ಮೂರ್ತಿರ್ಯಾ ದ್ವಾದಶೀ ಭಾನೋರ್ನಾಮತೋ ಮಿತ್ರಸಂಜ್ಞಿತಾ ।
ಲೋಕಾನಾಂ ಸಾ ಹಿತಾರ್ಥಾಯ ಸ್ಥಿತಾ ಚಂದ್ರಸರಿತ್ತಟೇ ॥ ೨೦ ॥

ವಾಯುಭಕ್ಷಸ್ತಪಸ್ತೇಪೇ ಸ್ಥಿತೋ ಮೈತ್ರೇಣ ಚಕ್ಷುಷಾ ॥ ೨೧ ॥

ಅನುಗೃಹ್ಣನ್ ಸದಾ ಭಕ್ತಾನ್ ವರೈರ್ನಾನಾವಿಧೈಸ್ತು ಸಃ ।
ಏವಮಾದ್ಯಮಿದಂ ಸ್ಥಾನಂ ಪಶ್ಚಾತ್ಸಾಂಬೇನ ನಿರ್ಮಿತಂ ॥ ೨೨ ॥

---

೧೮. ಸೂರ್ಯನ ಹನ್ನೊಂದನೆಯ ಮೂರ್ತಿಯಾದ ವರುಣನು ನೀರಿನಲ್ಲಿ ವಾಸಿಸುತ್ತಾ ಸಕಲ ಪ್ರಪಂಚವನ್ನೂ ಜಲಪಾನದಿಂದ ರಕ್ಷಿಸುವನು.

೧೯. ನೀರುಗಳಿಗೆ ಆಶ್ರಯಭೂತವಾದದ್ದು ಸಮುದ್ರವು. ವರುಣನು ನೀರಿನಲ್ಲಿ ನೆಲಸಿರುವನು. ಆದುದರಿಂದ ಸಾಗರಕ್ಕೆ ವರುಣಾಲಯವೆಂದು ಹೆಸರಾಯಿತು.

೨೦. ಮಿತ್ರಸಂಜ್ಞಕವಾದ ಸೂರ್ಯನ ಹನ್ನೆರಡನೆಯಮೂರ್ತಿಯು ಸಕಲ ಲೋಕಗಳ ಹಿತಾಚರಣೆಗಾಗಿ ಚಂದ್ರಸರೋವರದ ತೀರದಲ್ಲಿ ನೆಲಸಿರುವುದು.

೨೧. ಸೂರ್ಯನು ಆ ಚಂದ್ರಸರಿತ್ತಟದಲ್ಲೇ ವಾಯುಭಕ್ಷಕನಾಗಿ ಕೆಲವು ಕಾಲ ಪರ್ಯಂತ ಸ್ನೇಹದೃಷ್ಟಿಯುಳ್ಳವನಾಗಿ ತಪಸ್ಸನ್ನಾಚರಿಸಿದನು.

೨೨. ಈ ರೀತಿಯಾಗಿ ತಪಸ್ಸನ್ನಾಚರಿಸುತ್ತಾ, ತನ್ನನ್ನು ಆರಾಧಿಸುವ ಭಕ್ತರುಗಳನ್ನು ಅನೇಕ ವಿಧವಾದ ವರಪ್ರದಾನದಿಂದ ಅನುಗ್ರಹಿಸುತ್ತಾ ಸೂರ್ಯ ಭಗವಂತನು ಮೊದಲೇ ಚಂದ್ರಸರಿತ್ತಿನ ತಟದಲ್ಲಿ ನೆಲಸಿದ್ದನು. ಕೆಲವು ದಿನ ಕಳೆದ ನಂತರ ಸಾಂಬನೂ ಅದೇ ಸ್ಥಳದಲ್ಲಿಯೇ ಸೂರ್ಯನನ್ನು ಪ್ರತಿಷ್ಠೆಮಾಡಿದನು.

ತತ್ರ ಮಿತ್ರಃ ಸ್ಥಿತೋ ಯಸ್ಮಾತ್ತಸ್ಮಾನ್ಮಿತ್ರವನಂ ಸ್ಮೃತಂ ।
ಏವಂ ದ್ವಾದಶಭಿಸ್ತೇನ ಸವಿತ್ರಾ ಪರಮಾತ್ಮನಾ ॥ ೨೩ ॥

ಇತ್ಯೇವಂ ದ್ವಾದಶಾದಿತ್ಯಂ ಜಗದ್ವ್ಯಾಪ್ತಂ ತ್ವಾ ತು ಮಾನವಃ ।
ನಿತ್ಯಂ ಶ್ರುತ್ವಾ ಪಠಿತ್ವಾ ಚ ಸೂರ್ಯಲೋಕೇ ಮಹೀಯತೇ ॥ ೨೪ ॥

ಇತಿ ಶ್ರೀ ಸಾಂಬಪುರಾಣೇ ದ್ವಾದಶಮೂರ್ತ್ಯುಪಾಖ್ಯಾನಂ
ನಾಮ ಚತುರ್ಥೋಽಧ್ಯಾಯಃ.

---

೨೩-೨೪. ಆ ಚಂದ್ರಸರಿತ್ತೀರದಲ್ಲಿ ನೆಲಸಿರುವ ಸೂರ್ಯನ ಮೂರ್ತಿಯು ಮಿತ್ರಸಂಜ್ಞಕನಾದುದರಿಂದ ಅದರ ಸಮೀಪದಲ್ಲಿರುವ ವನಕ್ಕೆ ಮಿತ್ರವನವೆಂದು ಹೆಸರು ಬಂದಿತು. ಈ ರೀತಿಯಾಗಿ ಸೂರ್ಯನು ತನ್ನ ಇಂದ್ರಾದಿ ಹನ್ನೆರಡು ಮೂರ್ತಿಗಳಿಂದ ಪ್ರಪಂಚವನ್ನೆಲ್ಲಾ ವ್ಯಾಪಿಸಿ ಕಾಪಾಡುತ್ತಿರುವನೆಂದು ತಿಳಿದು ಮನುಷ್ಯನು, ಆ ಸೂರ್ಯಭಗವಂತನ ಚರಿತ್ರೆಯನ್ನು ಇನ್ನೊಬ್ಬರಿಂದ ಕೇಳಿಯೂ ಅಥವಾ ತಾನೇ ಸ್ವತಃ ಓದಿಯೂ ತಿಳಿದುದಾದರೆ ಕೊನೆಗೆ ಅವನಿಗೆ ಸೂರ್ಯಲೋಕ ಪ್ರಾಪ್ತಿಯಾಗುವುದು.

ಇಲ್ಲಿಗೆ ಸಾಂಬಪುರಾಣದಲ್ಲಿನ ನಾಲ್ಕನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚಮೋಽಧ್ಯಾಯಃ



॥ ಬೃಹದ್ಬಲ ಉವಾಚ ॥

ಯದಿ ತಾವದಸೌ ಸೂರ್ಯಶ್ಚಾದಿದೇವಸ್ಸನಾತನಃ ।
ತತ್ಕಿಮರ್ಥಂ ತಪಸ್ತೇಪೇ ವರ್ಷೈಸ್ತು ಪ್ರಾಕೃತೋ ಯಥಾ ॥ ೧ ॥

॥ ವಸಿಷ್ಠ ಉವಾಚ ॥

ಏತತ್ತೇಽಹಂ ಪ್ರವಕ್ಷ್ಯಾಮಿ ಪರಂ ಗುಹ್ಯಂ ವಿಭಾವಸೋಃ ।
ಪುರಾ ಮಿತ್ರೇಣ ಯತ್ಪ್ರೋಕ್ತಂ ನಾರದಾಯ ಮಹಾತ್ಮನೇ ॥ ೨ ॥

---

## ಐದನೆಯ ಅಧ್ಯಾಯ.

೧ ಈ ರೀತಿ ಸೂರ್ಯನ ವಿಷಯವನ್ನು ಕೇಳಿದ ಅನಂತರ, ಬೃಹದ್ಬಲನು ವಸಿಷ್ಠರನ್ನು ಕುರಿತು, ‘ ಗುರುಗಳೇ ; ನೀವು ಹೇಳಿದಂತೆ ಈ ಸೂರ್ಯನೇ, ಆದಿಯೂ, ಪುರಾತನನೂ ಆದ ದೇವನೆನಿಸಿದಮೇಲೆ, ಅವನೇ ಯಾವ ಉದ್ದೇಶದಿಂದ ಯಾರನ್ನು ಕುರಿತು, ಲೋಕದಲ್ಲಿ ಪ್ರಾಕೃತನಾದ ಸಾಮಾನ್ಯ ಮನುಷ್ಯನು ವರಾಪೇಕ್ಷೆಯಿಂದ ತಪಸ್ಸುಮಾಡುವಂತೆ, ಯಾವ ವರವನ್ನು ಹೊಂದಲೋಸುಗ, ತಪಸ್ಸುಮಾಡಿದನು ? ಇವೆಲ್ಲವನ್ನೂ ತಾವು ವಿವರವಾಗಿ ತಿಳಿಸಬೇಕು, ಎಂದು ಪ್ರಶ್ನಿಸಿದನು.

೨. ಈ ರೀತಿ ಪ್ರಶ್ನೆಮಾಡಿದ ಬೃಹದ್ಬಲನಿಗೆ ವಸಿಷ್ಠಮಹರ್ಷಿಯು, ಎಲೈ ರಾಜನೇ, ಹಿಂದೆ ಸೂರ್ಯನ ಹನ್ನೆರಡನೆಯ ಮೂರ್ತಿಯಾದ ಮಿತ್ರನು, ತಾನೇ ಸ್ವತಃ ನಾರದಮಹರ್ಷಿಗೆ ತಿಳಿಸಿರುವ ಸೂರ್ಯನ ರಹಸ್ಯವೂ, ಪರಮಶ್ರೇಷ್ಠವೂ ಆದ ಚರಿತ್ರೆಯನ್ನು ನಿನಗೆ ಹೇಳುವೆನು ಲಾಲಿಸೆಂದು, ವಿಷಯವನ್ನು ಮುಂದುವರಿಸಿದನು.

ಪ್ರಾಜ್ಞಯೋಃಕ್ತಾಶ್ಚ ಯೂಸ್ತುಭ್ಯಂ ರವೇರ್ದ್ವಾದಶಮೂರ್ತಯಃ ।
ಮಿತ್ರಶ್ಚವರುಣಶ್ಚೋಭೌ ತಾಸಾಂತು ತಪಸಿ ಸ್ಥಿತಾ ॥ ೩ ॥

ಅಬ್ಭಕ್ಷೋ ವರುಣಸ್ತಾಭ್ಯಾಂ ತಸ್ಥೌ ಪಶ್ಚಿಮಸಾಗರೇ ।
ಮಿತ್ರೋ ಮಿತ್ರವನೇಚಾಸ್ಮಿನ್ ವಾಯುಭಕ್ಷೋಽಚರತ್ತಪಃ ॥ ೪ ॥

ಅಥ ಮೇರೋರ್ಗಿರೇಶ್ಶೃಂಗಾತ್ಪ್ರಚ್ಯುತೋ ಗಂಧಮಾದನಾತ್ ।
ನಾರದಸ್ಸುಮಹೋದ್ಭಾಯಃ ಸರ್ವಲೋಕಾನಚೀಚರತ್ ॥ ೫ ॥

ಆಜಗಾಮಾಥ ತತ್ರೈವ ಯತ್ರ ಮಿತ್ರೋಽಚರತ್ತಪಃ ।
ತಂ ದೃಷ್ಟ್ವಾ ತು ತಪಸ್ಯಂತಂ ತಸ್ಯ ಕೌತೂಹಲಂ ಹ್ಯಭೂತ್ ॥ ೬ ॥

ಯೋಽಕ್ಷಯಶ್ಚಾವ್ಯಯಶ್ಚೈವ ವ್ಯಕ್ತಾಽವ್ಯಕ್ತಃ ಸನಾತನಃ ।
ಧೃತಂ ಚೈಕಾತ್ಮನಾ ಯೇನ ತ್ರೈಲೋಕ್ಯಮಿದಮಾತ್ಮನಾ ॥ ೭ ॥

---

೩-೪. ಎಲೈ ಬೃಹದ್ಬಲನೆ ; ನಾನು ನಿನಗೆ ಮೊದಲು ಹೇಳಿದ ಸೂರ್ಯನ ಹನ್ನೆರಡು ಮೂರ್ತಿಗಳಲ್ಲಿ ಮಿತ್ರ ಮತ್ತು ವರುಣ ಈ ಎರಡು ಮೂರ್ತಿಗಳು ಮಾತ್ರ ತಪಸ್ಸನ್ನಾಚರಿಸಿದುವು. ಅವರಲ್ಲಿ ವರುಣನು ಪಶ್ಚಿಮ ಸಮುದ್ರದಲ್ಲಿಯೂ, ಮಿತ್ರನು ವಾಯುವನ್ನೇ ಆಹಾರವುಳ್ಳವನಾಗಿ ಮಿತ್ರವನದಲ್ಲಿಯೂ ಸಹ ತಪಸ್ಸುಮಾಡಿದರು.

೫. ಅನಂತರ, ಮೇರುಪರ್ವತದ ಶಿಖರವಾದ ಗಂಧಮಾದನವೆಂದು ಪ್ರಸಿದ್ಧವಾಗಿರುವ ಪರ್ವತದಿಂದ ನಾರದಮಹರ್ಷಿಯು ಹೊರಟು ಎಲ್ಲಾ ಲೋಕಗಳಲ್ಲಿಯೂ ಸಂಚಾರಮಾಡಿದನು.

೬-೭. ಆ ರೀತಿ ನಾರದನು ಲೋಕಸಂಚಾರ ಮಾಡುತ್ತಾ ಮಿತ್ರನು ತಪಸ್ಸು ಮಾಡುತ್ತಿದ್ದ ಚಂದಸರಿತ್ತೀರದ ಹತ್ತಿರಕ್ಕೆ ಬಂದನು. ಅಲ್ಲಿ ತಪಸ್ಸುಮಾಡುತ್ತಿದ್ದ ಮಿತ್ರನನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅನಂತರ ನಾರದನು, " ಯಾವ

ಯಃ ಪಿತಾ ಸರ್ವದೇವಾನಾಂ ದೈವತಂ ಚಾಪಿ ಯಃ ಪರಂ ।
ಯಜತೇ ದೇವತಾಂ ಕಾಂ ತು ಪಿತ್ರ್ಯಾನ್ಯಾನ್ಯಜತೇ ಚ ಸಃ ॥ ೮ ॥
ಇತಿ ಸಂಚಿಂತ್ಯ ಮನಸಾ ತಂ ದೇವಂ ನಾರದೋಽಬ್ರವೀತ್ ।

॥ ನಾರದ ಉವಾಚ ॥

ವೇದೇಷು ಚ ಪುರಾಣೇಷು ಸಾಂಗೋಪಾಂಗೇಷು ಗೀಯತೇ ॥ ೯ ॥

ತ್ವಮಜಶ್ಶಾಶ್ವತೋ ಧಾತಾ ಮಹಾಭೂತಮನುತ್ತಮಃ ।
ಭೂತಂ ಭವ್ಯಂ ಭವಿಷ್ಯಂ ಚ ತ್ವಯಿ ಸರ್ವಂ ಪ್ರತಿಷ್ಠಿತಂ ॥ ೧೦ ॥

ಚತ್ವಾರೋಹ್ಯಾಶ್ರಮಾ ದೇವ ಗೃಹಸ್ಥಾದ್ಯಾಸ್ತಥೈವಚ ।
ಯಜಂತೇ ತ್ವಾಮಹರಹರ್ನಾನಾಮೂರ್ತಿಸಮಾಶ್ರಿತಂ ॥ ೧೧ ॥

---

ಪರಮಾತ್ಮನು, ನಿತ್ಯನೂ, ನಾಶರಹಿತನೂ, ವ್ಯಕ್ತಾಽವ್ಯಕ್ತಸ್ವರೂಪನೂ (ಅಂದರೆ ಮೂರ್ತಿಭೇದದಿಂದ ಗೋಚರನಾಗುವವನೂ, ಕೆಲವು ಸಲ, ಶುದ್ಧಬ್ರಹ್ಮನೆನಿಸಿ ಜನರಿಗೆ ಗೋಚರನಾಗದೇ ಇರುವವನು) ಪುರಾತನನೂ ಎನಿಸಿ, ಮೂರು ಲೋಕಗಳನ್ನೂ ತಾನೊಬ್ಬನೇ ಧರಿಸಿರುವವನೋ, ಮತ್ತು ಸಮಸ್ತ ದೇವತೆಗಳಿಗೂ ತಂದೆಯೂ, ಶ್ರೇಷ್ಠವಾದ ಆರಾಧ್ಯದೇವನೂ ಆಗಿರುವನೋ, ಆ ಈ ಪರಾತ್ಪರ ಮೂರ್ತಿಯು, ತನಗಿಂತಲೂ ಶ್ರೇಷ್ಠವೂ; ಪೂಜ್ಯವೂ ಆದ ಮತ್ತಾವ ಮೂರ್ತಿಯನ್ನು ಕುರಿತು ತಪಸ್ಸುಮಾಡುತ್ತಿರುವನು?" ಎಂದು ಆಲೋಚಿಸಿ ಕೊನೆಗೆ ಆ ಮಿತ್ರನನ್ನು ಕುರಿತು ಇಂತೆಂದನು.

೯-೧೨. ಎಲೈ ಪರಮಾತ್ಮನೆ ಷಡಂಗಸಹಿತವಾದ ನಾಲ್ಕು ವೇದಗಳಲ್ಲಿಯೂ, ಅಷ್ಟಾದಶಪುರಾಣಗಳಲ್ಲಿಯೂ ಸಹ ನೀನು, ಉತ್ಪತ್ತಿರಹಿತನು, ಮಹಾಭೂತಸ್ವರೂಪನು ಮತ್ತು ಸರ್ವಶ್ರೇಷ್ಠನು ಎಂದು ಯಾವಾಗಲೂ ಹೊಗಳಲ್ಪಡುತ್ತಿರುವೆ. ಭೂತಭವಿಷ್ಯದ್ವರ್ತಮಾನಗಳೆಲ್ಲವೂ ನಿನ್ನಲ್ಲಿಯೇ ಲೀನವಾಗಿರುವುವು. ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ, ಮತ್ತು ಬ್ರಹ್ಮಚರ್ಯಗಳೆಂಬ ನಾಲ್ಕು ವರ್ಣಾಶ್ರಮಗಳೂ ಅನೇಕ ಮೂರ್ತಿಗಳನ್ನುಳ್ಳ ನಿನ್ನನ್ನೇ ಯಾವಾಗಲೂ ಪೂಜಿಸುತ್ತಿರುವುವು. ಸಕಲ

ಪಿತಾ ಮಾತಾ ಚ ಸರ್ವಸ್ಯ ದೈವತಂ ತ್ವಂ ಹಿ ಶಾಶ್ವತಂ ।
ಯಜಸೇ ಪಿತರಂ ಕಂ ತ್ವಂ ದೇವಂ ಚಾಪಿ ನ ವೇದ್ಮ್ಯಹಂ ॥ ೧೨ ॥

॥ ಮಿತ್ರ ಉವಾಚ ॥

ಅವಾಚ್ಯಮೇತದ್ವಕ್ತವ್ಯಂ ಪರಂ ಗುಹ್ಯಂ ಸನಾತನಂ ।
ತ್ವಯಿ ಭಕ್ತಿಮತಿಬ್ರಹ್ಮನ್ ಪ್ರವಕ್ಷ್ಯಾಮಿ ಯಥಾತಥಂ ॥ ೧೩ ॥

ಯತ್ತತ್ಸೂಕ್ಷ್ಮಂ ನ ವಿಜ್ಞೇಯ ಮವ್ಯಕ್ತಮಚಲಂ ಧ್ರುವಂ ।
ಇಂದ್ರಿಯೈರಿಂದ್ರಿಯಾರ್ಥೈಶ್ಚ ಸರ್ವಭೂತೈಶ್ಚ ವರ್ಜಿತಂ ॥ ೧೪ ॥

ಸೋಽಹ್ಯಂತರಾತ್ಮಾ ಭೂತಾನಾಂ ಕ್ಷೇತ್ರಜ್ಞಶ್ಚೈವ ಕಥ್ಯತೇ ।
ತ್ರಿಗುಣವ್ಯತಿರಿಕ್ತೋಽಸೌ ಪುರುಷಶ್ಚೇತಿ ವಿಶ್ರುತಃ ॥ ೧೫ ॥

---

ಪ್ರಪಂಚಕ್ಕೂ ಮಾತಾಪಿತೃಸ್ವರೂಪನೂ, ಶಾಶ್ವತವಾದ ದೈವವೂ ನೀನೇ ಆಗಿರುವಾಗ ಈಗ ನಿನಗಿಂತಲೂ ಪೂಜ್ಯವಾದ ಯಾವ ದೈವವನ್ನುದ್ದೇಶಿಸಿ ನೀನು ತಪಸ್ಸು ಮಾಡುತ್ತಿರುವೆ ? ಅದನ್ನು ನೀನೆನಗೆ ತಿಳಿಸಬೇಕೆನ್ನಲು ಮಿತ್ರನು ನಾರದನನ್ನು ಕುರಿತು ಇಂತೆಂದನು.

೧೩-೨೪. ಎಲೈ ನಾರದನೇ ; ಪರಮರಹಸ್ಯವೂ, ಪುರಾತನವೂ ಆದ ನೀನು ಕೇಳಿದ ವಿಷಯವನ್ನು ಯಾರಿಗೂ ಸಾಮಾನ್ಯವಾಗಿ ತಿಳಿಸಬಾರದು. ಆದರೂ ನೀನು ನನ್ನ ಭಕ್ತನೂ, ಬ್ರಹ್ಮಜ್ಞಾನಿಯೂ ಆಗಿರುವುದರಿಂದ ನಿನಗೆ ಇರುವುದೆಲ್ಲವನ್ನೂ ತಿಳಿಸುವೆನು ಲಾಲಿಸು. ಯಾವುದು ಅತ್ಯಂತ ಸೂಕ್ಷ್ಮಸ್ವರೂಪವೂ, ತಿಳಿಯುವುದಕ್ಕೆ ಸಾಧ್ಯವಿಲ್ಲದುದೂ, ನಿಶ್ಚಲವೂ ನಿತ್ಯವೂ ಎನಿಸಿ ಸಕಲ ಇಂದ್ರಿಯಗಳಿಂದಲೂ, ಗೋಚರವಾಗದೆ ಇಂದ್ರಿಯಗಳಿಗೆ ವಿಷಯಗಳಾಗಿರುವ ಸಕಲ ಭೂತಗಳಿಂದಲೂ ಬಿಡಲ್ಪಟ್ಟಿರುವುದೋ, ಆದೇಸಕಲ ಭೂತಗಳಿಗೂ ಅಂತರಾತ್ಮನೆನಿಸಿಕೊಂಡು ಕ್ಷೇತ್ರಜ್ಞನೆಂಬ ಹೆಸರಿನಿಂದ ಕೂಡಿರುವುದು. ಸತ್ತ್ವರಜಸ್ತಮೋಗುಣಗಳಿಗಿಂತಲೂ ಬೇರೆಯವನಾದ ಪುರುಷನೂ ಇವನೇ. ಭಗವಂತನಾದ ಹಿರಣ್ಯಗರ್ಭನೂ, ಬುದ್ಧಿಸ್ವರೂಪನೂ ಇವನೇ. ಇವನೇ ಮೂರು ಲೋಕಗಳನ್ನೂ ಧರಿಸಿರುವನು. ತಾನು ಈ ರೀತಿ

ಹಿರಣ್ಯಗರ್ಭೋ ಭಗವಾನ್ಸ ವೈ ಬುದ್ಧಿರಿತಿ ಸ್ಮೃತಃ ।
ಧೃತೇನೈಕಾತ್ಮನಾ ಯೇನ ತ್ರೈಲೋಕ್ಯಮಿದಮಾತ್ಮನಾ ॥ ೧೬ ॥

ಅಶರೀರಃ ಶರೀರೇಷು ಸರ್ವೇಷು ನಿವಸತ್ಯಸೌ ।
ವಸನ್ನಪಿ ಶರೀರೇಷು ನ ಸ ಲಿಪ್ಯತಿ ಕರ್ಮಭಿಃ ॥ ೧೭ ॥

ಮಮಾಂತರಾತ್ಮಾ ತವ ಚ ಯೇ ಚಾನ್ಯೇ ದೇಹಸಂಜ್ಞಿತಾಃ ।
ಸರ್ವೇಷಾಂ ಸಾಕ್ಷಿಭೂತೋಽಸೌ ನ ಗ್ರಾಹ್ಯಃ ಕೇನಚಿತ್ಕ್ವಚಿತ್ ॥ ೧೮ ॥

ಸಗುಣೋ ನಿರ್ಗುಣೋ ವಿಶ್ವೋ ಜ್ಞಾನಗಮ್ಯೋ ಹ್ಯಸೌ ಸ್ಮೃತಃ ॥ ೧೯ ॥

ಸರ್ವತಃ ಪಾಣಿಪಾದೋಽಸೌ ಸರ್ವತೋಕ್ಷಿಶಿರೋ ಮುಖಃ ।
ಸರ್ವತಶ್ಶೃತಿಮಾನ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೨೦ ॥

ಗುಣರಹಿತನಾದರೂ ಸಕಲ ಪ್ರಾಣಿ ಶರೀರಗಳಲ್ಲಿಯೂ ನೆಲಸಿರುವನು. ಆ ರೀತಿ ವಾಸಿಸುತ್ತಿದ್ದರೂ ಆ ಪ್ರಾಣಿದೇಹ ಸಂಬಂಧವಾದ ಪುಣ್ಯಪಾಪರೂಪವಾದ ಕರ್ಮಗಳು ಇವನನ್ನು ಸೋಂಕಲಾರವು. ನನ್ನ, ನಿನ್ನ ಮತ್ತು ಸಕಲ ಪ್ರಾಣಿಗಳಲ್ಲಿಯೂ ಇವನು ಪ್ರತ್ಯಕ್ಷನಾಗಿದ್ದರೂ ಯಾರಿಗೂ ಯಾವಾಗಲೂ ಇವನನ್ನು ಹಿಡಿಯಲು ಸಾಧ್ಯವಿಲ್ಲ. ಇವನು, ಗುಣವಿಶಿಷ್ಟನು, ನಿರ್ಗುಣನು, ಪ್ರಪಂಚಸ್ವರೂಪನೂ ಎನಿಸಿ ಶುದ್ಧವಾದ ಜ್ಞಾನದಿಂದ ಮಾತ್ರ ತಿಳಯಲು ಸಾಧ್ಯನಾಗುವನು. ಇವನು ಸಕಲ ಪ್ರಾಣಿಗಳಅವಯವಗಳಲ್ಲಿ ವಾಸಿಸುವನು. ಸರ್ವ ಇಂದ್ರಿಯಗುಣಗಳಾದ ರೂಪರಸಗಂಧಾದಿಗಳಲ್ಲಿ ನೆಲಸಿ ಸರ್ವೇಂದ್ರಿಯಸ್ವರೂಪನೆನಿಸುವನು. ಒಂದೇ ದೀಪಜ್ವಾಲೆಯು ಅನೇಕ ಸಣ್ಣ ಸಣ್ಣ ಬುಟ್ಟಿ, ಲ್ಯಾಂಪು, ಹಣತೆ ಮುಂತಾದುವುಗಳಲ್ಲಿ ನೆಲಸಿರುವಂತೆ ಇವನು ಒಬ್ಬನೇ ಆದರೂ ತನ್ನ ಅಂಶದಿಂದ ಎಲ್ಲುದರಲ್ಲಿಯೂ ವಾಸಿಸುವನು ಯಾವಾಗ ಇವನು ತನ್ನನ್ನು ತಿಳಿಯುವನೋ ಆಗ ತಾನು ಕೇವಲಬ್ರಹ್ಮನೆನಿಸುವನು. ಮಹಾಪ್ರಳಯದಲ್ಲಿಯೂ ಸಹ ಇವನಿಗೆ ನಾಶವಿಲ್ಲ. ಇವನು ತನ್ನನ್ನು ಅನೇಕ ರೂಪಗಳಿಂದ ತೋರಿಸಿಕೊಳ್ಳುವನು. ಈ ಪರಬ್ರಹ್ಮಸ್ವರೂಪವೊಂದು ಹೊರತು ಬಾಕಿ ಸ್ಥಾವರ ಜಂಗಮಾತ್ಮಕವಾದ ಭೂತಗಳೆಲ್ಲವೂ ನಾಶಹೊಂದುವುವು. ಇವನ , ನಾಶರಹಿತನೂ,

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।**
**ಯಥಾ ದೀಪಸಹಸ್ರಾಣಿ ಸ ಚ ಏಕಃ ಪ್ರಸೂಯತೇ ॥ ೨೧ ॥**

**ಬುಧ್ಯತೇ ಸ ಯದಾತ್ಮಾನಂ ತದಾ ಭವತಿ ಕೇವಲಃ ।**
**ಏಕತ್ವಂ ಪ್ರಲಯೇಚಾಸ್ಯ ಬಹುತ್ವಂ ಚ ಪ್ರವರ್ತನಾತ್ ॥ ೨೨ ॥**

**ನಿತ್ಯಂ ಹಿ ನಾಸ್ತಿ ಜಗತಿ ಭೂತಂ ಸ್ಥಾವರಜಂಗಮಂ ।**
**ಋತೇ ತಮೇಕಮೀಶಾನಂ ಭೂತಂ ಸ್ಥಾವರಜಂಗಮಂ ॥ ೨೩ ॥**

**ಅಕ್ಷಯಶ್ಚಾಪ್ರಮೇಯಶ್ಚ ಸರ್ವಗಶ್ಚ ಸ ಉಚ್ಯತೇ ।**
**ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ ॥ ೨೪ ॥**

**ಅವ್ಯಕ್ತವ್ಯಕ್ತಭಾವಸ್ಥಾ ಯಾ ಸಾ ಪ್ರಕೃತಿರುಚ್ಯತೇ ।**
**ತಾಂ ಯೋನಿಂ ಬ್ರಹ್ಮಣೋ ವಿದ್ಧಿ ನಿತ್ಯಂ ಯೋಽಸೌ ಮದಾತ್ಮಕಃ ॥ ೨೫॥**

---

ಪ್ರಮಾಣವಿಲ್ಲದವನೂ, ಸರ್ವವ್ಯಾಪಿಯೂ ಆಗಿರುವನು; ಇವನಿಂದ ಸತ್ತ್ವ ರಜಸ್ತಮೋರೂಪವಾದ ಅವ್ಯಕ್ತಸ್ವರೂಪವು ಉತ್ಪನ್ನವಾಯಿತು.

೨೫-೨೮. ವ್ಯಕ್ತಾವ್ಯಕ್ತಭಾವಸ್ವರೂಪವಾದ ಪ್ರಕೃತಿಯೇ ಬ್ರಹ್ಮನ ಸ್ಥಾನವು. ಅದೇ ನನ್ನ ಸ್ವರೂಪವು. ಅದೇ ಬ್ರಹ್ಮನು ದೈವಕರ್ಮ, ಪಿತೃಕರ್ಮಗಳಲ್ಲಿಯೂ ಸಹ ಪೂಜಿಸಲ್ಪಡುವನು. ಇವನಿಗಿಂತಲೂ ಸಾತ್ವಿಕನಾದ ಪಿತೃವಾಗಲೀ ದೇವತೆಯಾಗಲೀ ಪ್ರಪಂಚದಲ್ಲಿಲ್ಲ. ಇವನೇ ನಮಗೆ ಆತ್ಮನೆನಿಸುವನು. ಆದುದರಿಂದ ನಾನು ಪರಬ್ರಹ್ಮಸ್ವರೂಪನಾದ ಆ ಆತ್ಮನನ್ನೇ ಪೂಜಿಸುತ್ತಿರುವೆನು. ಸ್ವರ್ಗವನ್ನು ಹೊಂದಿರುವ ಅನೇಕ ಪ್ರಾಣಿಗಳೂ ಸಹ ಇವನನ್ನು ನಮಸ್ಕರಿಸುವರು. ಆ ಸ್ವರ್ಗ ನಿವಾಸಿಗಳಾದವರು, ಪರಮಾತ್ಮನ ಅನುಗ್ರಹದಿಂದ ತಮಗೆ ಬೇಕಾದ ಫಲಗಳನ್ನು ಹೊಂದಿ ಕೊನೆಗೆ ಉತ್ತಮವಾದ ಗತಿಯನ್ನು ಪಡೆಯುವರು. ಅನೇಕ ಮೂರ್ತಿಗಳ ಸ್ವರೂಪದಿಂದ ಆಶ್ರಮವಾಸಿಗಳಾದ ದೇವತೆಗಳೂ ಭಕ್ತಿಯಿಂದ ಇವನನ್ನಾರಾಧಿಸಿ ಉತ್ತಮವಾದ ಗತಿಗಳನ್ನು ಹೊಂದುವರು. ಅವನು ಎಲ್ಲರಲ್ಲಿ ನೆಲಸಿದ್ದರೂ ನಿರ್ಗುಣ

ಲೋಕೇ ಚ ಪೂಜ್ಯತೇ ಯೋऽಸೌ ದೈವೇ ಪಿತ್ರ್ಯೇ ಚ ಕರ್ಮಣಿ ।
ನಾಸ್ತಿ ತಸ್ಮಾತ್ಪರೋ ಹ್ಯನ್ಯಃ ಪಿತಾ ದೇವೋऽಪಿ ಸಾತ್ವಿಕಃ ॥ ೨೬ ॥

ಆತ್ಮಾ ಹಿ ನಃ ಸ ವಿಜ್ಞೇಯಃ ತತಸ್ತಂ ಪೂಜಯಾಮ್ಯಹಂ ।
ಸ್ವರ್ಗಸ್ಥಾ ಅಪಿ ಯೇ ಕೇಚಿತ್ತಂ ನಮಸ್ಯಂತಿ ದೇಹಿನಃ ॥ ೨೭ ॥

ತೇ ತತ್ಪ್ರಸಾದಾದ್ಗಚ್ಛಂತಿ ತೇನೋದ್ದಿಷ್ಟಫಲಾದ್ಗತಿಂ ।
ತಂ ದೇವಾಶ್ಚಾಶ್ರಮಸ್ಥಾಶ್ಚ ನಾನಾಮೂರ್ತಿಸಮಾಶ್ರಿತಾಃ ॥ ೨೮ ॥

ಭಕ್ತ್ಯಾ ಸಂಪೂಜಯಂತ್ಯದ್ಯ ಗತಿಂ ಚೈಷಾಂ ದದಾತಿ ಸಃ ।
ಸ ಹಿ ಸರ್ವಗತಶ್ಚೈವ ನಿರ್ಗುಣಶ್ಚೈವ ಕಥ್ಯತೇ ॥ ೨೯ ॥

ಏವಂ ಜ್ಞಾತ್ವಾ ತಮಾತ್ಮಾನಂ ಪೂಜಯಾಮಿ ಸನಾತನಂ।
ಯೇ ತು ತದ್ಭಾವಿತಾ ಲೋಕಾ ಏಕತ್ವಂ ಚ ಸಮಾಶ್ರಿತಾಃ ॥ ೩೦ ॥

ತಮೇವ ಚೈವ ತೇ ಸರ್ವೇ ವಿಶಂತ್ಯಕ್ಷಯಮವ್ಯಯಂ ।
ಏತದಭ್ಯಧಿಕಂ ತೇಷಾಂ ಯದ್ದೈನಂ ಪ್ರವಿಶಂತ್ಯುತ ॥ ೩೧ ॥

ಇತಿ ಗುಹ್ಯಸಮುದ್ದೇಶಸ್ತವ ನಾರದ ಕೀರ್ತಿತಃ ।
ಅಸ್ಮದ್ಭಕ್ತ್ಯಾ ತು ದೇವರ್ಷೇ ತ್ವಯಾಪಿ ಪರಮಂ ಶ್ರುತಂ ॥ ೩೨ ॥

---

ನೆನಿಸಿ ಪ್ರಕಾಶಿಸುವನು. ನಾನೂ ಸಹ ಈರೀತಿಯಾಗಿರುವ ಪರಮಾತ್ಮಸ್ವರೂಪವನ್ನು ತಿಳಿದು ಅವನನ್ನೇ ಪೂಜಿಸುತ್ತಿರುವೆನು.

೩೦-೩೧. ಯಾರು ಆ ಪರಬ್ರಹ್ಮನನ್ನೇ ಸರ್ವದಾ ಧ್ಯಾನಮಾಡಿ ಪರಮಾತ್ಮಸ್ವರೂಪವನ್ನೇ ಅನುಸಂಧಾನಮಾಡುವರೋ ಅವರು ನಿತ್ಯರಾಗಿ ಆ ಶಾಶ್ವತನಾದ ಪರಬ್ರಹ್ಮನನ್ನೇ ಪ್ರವೇಶಿಸುವರು. ಅಂದರೆ ಕೊನೆಗೆ ಅವನಲ್ಲಿ ಐಕ್ಯವನ್ನು ಹೊಂದುವರು. ಈರೀತಿ ಆಗುವುದೇ ಅವರಿಗೆ ಉತ್ತಮವಾದ ಸದ್ಗತಿಯೆನಿಸುವುದು.

೩೨-೩೩. ಎಲೈ ನಾರದನೇ; ಈ ರೀತಿಯಾದ (ಸೂರ್ಯನ) ರಹಸ್ಯ ವೃತ್ತಾಂತವನ್ನು ನೀನು ನನ್ನ ಭಕ್ತನಾದುದರಿಂದ ನಿನಗೆ ನಾನು ತಿಳಿಸಿರುವೆನು.

ಸುರೈರ್ವಾ ಮುನಿಭಿರ್ವಾಪಿ ಪುರಾಣಂ ಯೈರಿದಂ ಸ್ಮೃತಂ ।
ತೇ ಸರ್ವೇ ಪರಮಾತ್ಮಾನಂ ಪೂಜಯಂತಿ ದಿವಾಕರಮ್ ॥ ೩೩ ॥

ಇದಮಾಖ್ಯಾನಮಾರ್ಷೇಯಂ ಯನ್ಮಯಾ ಕೀರ್ತಿತಂ ತವ ।
ನ ಹ್ಯನಾದಿತ್ಯಭಕ್ತಾಯ ತ್ವಯಾ ದೇಯಂ ಕಥಂಚನ ॥ ೩೪ ॥

ಯಶ್ಚೈತಚ್ಛ್ರಾವಯೇನ್ನಿತ್ಯಂ ಯಶ್ಚೈತಚ್ಛೃಣುಯಾನ್ನರಃ ।
ಸ ಸಹಸ್ರಾರ್ಚಿಷಂ ದೇವಂ ಪ್ರವಿಶೇನ್ನಾತ್ರ ಸಂಶಯಃ ॥ ೩೫ ॥

ಮುಚ್ಯೇತಾರ್ತಸ್ತಥಾ ರೋಗಾನ್ಮನೇ ಶ್ರುತ್ವಾ ಕಥಾಮಿಮಾಂ ।
ಜಿಜ್ಞಾಸುರ್ಲಭತೇ ಜ್ಞಾನಂ ಗತಿಮಿಷ್ಟಾಂ ತಥೈವ ಚ ॥ ೩೬ ॥

---

ನೀನೂ ಶ್ರೇಷ್ಠವಾದ ವೃತ್ತಾಂತವನ್ನು ನನ್ನಿಂದ ತಿಳಿದಹಾಗಾಯಿತು. ಯಾವ ದೇವತೆಗಳೂ ಅಥವಾ ಮುನಿಗಳೂ ಸಹ ಈ ಪುರಾಣವನ್ನು ಸ್ಮರಣೆಮಾಡುತ್ತಾರೋ ಅವರೆಲ್ಲರೂ ಪರಮಾತ್ಮಸ್ವರೂಪನಾದ ಸೂರ್ಯನನ್ನು ಪೂಜಿಸುವರು.

೩೪. ನಾನು ತಿಳಿಸಿದ ಪುರಾತನವಾದ ಪರಬ್ರಹ್ಮಸ್ವರೂಪನಿರೂಪಣವನ್ನು ಸೂರ್ಯನ ಭಕ್ತನಲ್ಲದವನಿಗೆ ಖಂಡಿತವಾಗಿಯೂ ತಿಳಿಸಬಾರದು.

೩೫. ಯಾವ ಮನುಷ್ಯನು ಸೂರ್ಯೋಪಾಖ್ಯಾನವನ್ನು ಮತ್ತೊಬ್ಬರಿಗೆ ತಿಳಿಸುವನೋ, ಮತ್ತು ಯಾರು ತಾವೇ ಸ್ವತಃ ಕೇಳಿ ತಿಳಿದುಕೊಳ್ಳುವರೋ ಅವರು ಸಹಸ್ರಕಿರಣನಾದ ಸೂರ್ಯದೇವನಲ್ಲಿ ಐಕ್ಯರಾಗುವರು. ಇದರಲ್ಲಿ ಲೇಶವೂ ಸಂದೇಹವಿಲ್ಲ.

೩೬. ರೋಗಿಯು ಈ ಕಥೆಯನ್ನು ಕೇಳಿದ ಮಾತ್ರದಿಂದಲೇ ರೋಗದಿಂದ ಬಿಡಲ್ಪಟ್ಟು, ಆರೋಗ್ಯಹೊಂದುವನು. ಈ ಕಥೆಯನ್ನು ತಿಳಿಯಲಪೇಕ್ಷಿಸಿದ ಪುರುಷನು ಒಳ್ಳೆಯ ಜ್ಞಾನವನ್ನು ಪಡೆದು, ಉತ್ತಮವಾದ ಮತ್ತು ತನ್ನ ಅಪೇಕ್ಷಾನುಸಾರವಾದ ಗತಿಯನ್ನು ಹೊಂದುವನು.

**ಕ್ಷೇಮೇಣ ವ್ರಜತೇಽಧ್ವಾನಮಿದಂ ಯಃ ಪಠತೇ ಪಥಿ ।**
**ಯೋಯಂ ಕಾಮಯತೇ ಕಾಮಂ ಸ ತಂ ಪ್ರಾಪ್ನೋತ್ಯಸಂಶಯಃ ॥೩೭॥**

**॥ ವಸಿಷ್ಠ ಉವಾಚ ॥**

**ಏವಮೇತನ್ಮಯಾಖ್ಯಾತಂ ನಾರದೇನ ಮಹಾತ್ಮನಾ ।**
**ಮಯಾಪಿ ಚ ತವಾಖ್ಯಾತಂ ಭಕ್ತ್ಯಾ ಭಾನೋರಿದಂ ನೃಪ ॥ ೩೮ ॥**

**ತ್ವಯಾ ತತ್ಸತತಂ ರಾಜನ್ನಭ್ಯರ್ಚ್ಯೋ ಭಗವಾನ್ರವಿಃ ।**
**ಸ ಹಿ ಧಾತಾ ವಿಧಾತಾ ಚ ಸರ್ವಸ್ಯ ಜಗತೋ ಗುರುಃ ॥ ೩೯ ॥**

**ಇತಿ ಶ್ರೀ ಸಾಂಬಪುರಾಣೇ ಪಂಚಮೋಽಧ್ಯಾಯಃ.**

---

೩೭. ದಾರಿಯಲ್ಲಿ ಹೋಗುತ್ತಿರುವ ಸಮಯದಲ್ಲಿ ಈ ಕಥೆಯನ್ನು ಪಠನ ಮಾಡಿದರೆ ಸುಖವಾಗಿ ಆಯಾಸವಿಲ್ಲದೇ ದಾರಿಸಾಗುವುದು. ಯಾವನು ಯಾವ ಇಷ್ಟಾರ್ಥವನ್ನಪೇಕ್ಷಿಸುವನೋ, ಅವೆಲ್ಲವೂ ಈ ಕಥೆಯು ಶ್ರವಣಪಠನಾದಿಗಳಿಂದ ತಪ್ಪದೆ ನಡೆಯುವುವು.

೩೮-೩೯. ಎಲೈ ಬೃಹದ್ಬಲರಾಜನೇ, ಮಹಾತ್ಮನಾದ ನಾರದನು ನನಗೆ ಹೇಳಿದ್ದ ಈ ಕಥೆಯನ್ನು ಸೂರ್ಯಭಕ್ತನಾದ ನಿನಗೆ ಉಪದೇಶಿಸಿರುವೆನು. ಆದುದರಿಂದ ನೀನು ಯಾವಾಗಲೂ ಸೂರ್ಯಭಗವಂತನನ್ನು ಪೂಜೆಮಾಡು. ಅವನೇ ಸೃಷ್ಟಿ. ಸ್ಥಿತಿ, ಸಂಹಾರಕರ್ತನೆನಿಸಿ ಜಗದ್ಗುರುವೆನಿಸಿರುವನು" ಎಂದು ವಸಿಷ್ಠರು ಬೃಹದ್ಬಲರಾಜನನ್ನು ಕುರಿತು ಹೇಳಿದರು

ಇಲ್ಲಿಗೆ ಸಾಂಬಪುರಾಣದಲ್ಲಿ ಐದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷಷ್ಠೋಽಧ್ಯಾಯಃ

---

॥ ಬೃಹದ್ಬಲ ಉವಾಚ ॥

**ಕಥಂ ಸಾಂಬಃ ಪ್ರಪನ್ನೋಽರ್ಕಂ ಕೇನ ವಾ ಪ್ರತಿಪಾದಿತಃ ।**
**ಉಗ್ರಂ ಶಾಪಂ ಚ ಸಂಪ್ರಾಪ್ಯ ಪಿತರಂ ನ ಕಿಮುಕ್ತವಾನ್ ॥ ೧ ॥**

॥ ವಸಿಷ್ಠ ಉವಾಚ ॥

**ತತಃ ಶಾಪಾಭಿಭೂತಸ್ತು ಸಾಂಬಃ ಪಿತರಮಬ್ರವೀತ್ ।**
**ಕಿಂ ಮಯಾಽಪಕೃತಂ ದೇವ ಯೇನ ಶಪ್ತೋಽಸ್ಮ್ಯಹಂ ತ್ವಯಾ ॥ ೨ ॥**

---

## ಆರನೆಯ ಅಧ್ಯಾಯ.

೧. ಬೃಹದ್ಬಲನು ವಸಿಷ್ಠರನ್ನು ಕುರಿತು, "ಗುರುಗಳೇ, ಸಾಂಬನು ಸೂರ್ಯನನ್ನು ಹೊಂದಿದ ಬಗೆ ಹೇಗೆ? ಯಾರಿಂದ ಸೂರ್ಯದೇವನ ಅನುಗ್ರಹವುಂಟಾಯಿತು. ತಂದೆಯಾದ ವಾಸುದೇವನಿಂದ ಉಗ್ರವಾದ ಶಾಪವನ್ನು ಪಡೆದಮೇಲೆ ತನ್ನ ತಂದೆಯನ್ನು ಕುರಿತು ಸಾಂಬನು ಏನು ನುಡಿದನು? ಇದೆಲ್ಲವನ್ನೂ ನನಗೆ ನೀವು ತಿಳಿಸಬೇಕೆನ್ನಲು ವಸಿಷ್ಠಮಹರ್ಷಿಯಿಂತೆಂದನು.

೨-೪ ವಾಸುದೇವನ ಶಾಪಕ್ಕೆ ತುತ್ತಾದ ಸಾಂಬನು ತಂದೆಯಾದ ಶ್ರೀಕೃಷ್ಣನನ್ನು ಕುರಿತು, ತಂದೆಯೇ, ನಿನ್ನ ಶಾಪಕ್ಕೆ ಗುರಿಯಾಗುವಂತಹ ಅಪರಾಧವನ್ನೇನು ನಾನು ಮಾಡಿರುವೆನು? ನಿನ್ನಪ್ಪಣೆಯಂತೆಯೇ ನಾನು ಭಯದಿಂದ ಇಲ್ಲಿಗೆ ಓಡಿ ಬಂದೆನು. ಇಂತಹ ನಿರಪರಾಧಿಯಾದ ನನ್ನನ್ನು ನೀನು ಶಪಿಸಲು ಕಾರಣವೇನು? ನಾನು ಎಂದಿಗೂ ನಿನಗೆ ಅಪಕಾರಮಾಡುವುದಿಲ್ಲ. ಎಲೈ ಜಗದೊಡೆಯನೆ, ಪ್ರಸನ್ನ

ಅಹಂ ತ್ವದಾಜ್ಞಯಾ ದೇವ ತ್ವರಮಾಣ ಇಹಾಗತಃ ।
ಕಥಂ ನಿಪಾತಿತಃ ಶಾಪೋ ಮಯಿ ತೇಽನಪಕಾರಿಣಿ ॥ ೩ ॥

ನ ತೇಽಪಕುರ್ಮಹೇ ಕಿಂಚಿತ್ಪ್ರಸೀದ ಜಗತಃ ಪತೇ ।
ಶಾಪಂ ನಿಯಚ್ಛ ದೇವೇಶ ಪ್ರಾಸಾದಂ ಕುರು ಮೇ ಪ್ರಭೋ ॥ ೪ ॥

ತಮುವಾಚ ತತಃ ಕೃಷ್ಣಃ ಸಾಂಬಂ ಬುದ್ಧ್ವಾಹ್ಯನಾಗಸಂ ॥ ೫ ॥

ತಸ್ಮಾತ್ತ್ವಮೇವ ಪೃಚ್ಛಸ್ವ ಪ್ರಸಾದ್ಯ ಋಷಿಸತ್ತಮಮ್ ।
ಆಖ್ಯಾಸ್ಯತಿ ಸ ತೇ ದೇವಃ ಶಾಪಂ ಯಸ್ತೇ ವಿನೇಶ್ಯತಿ ॥ ೬ ॥

ಅಥೈತತ್ಸ ಪಿತುರ್ವಾಕ್ಯಂ ಶ್ರುತ್ವಾ ಜಾಂಬವತೀಸುತಃ ।
ದೀನಶ್ಶಾಪಪರೀತಾಂಗಸ್ತತಸ್ಸಂಚಿತ್ಯ ನೈ ಪುನಃ ॥ ೭ ॥

ದ್ವಾರವತ್ಯಾಂ ಸ್ಥಿತಂ ವಿಷ್ಣುಂ ಕದಾಚಿದ್ದ್ರಷ್ಟುಮಾಗತಂ ।
ವಿನಯಾದುಪಸಂಗಮ್ಯ ಸಾಂಬಃ ಪಪ್ರಚ್ಛ ನಾರದಂ ॥ ೮ ॥

---

ನಾಗಿ, ಕೂಡಲೇ ಸರ್ವ ಸಮರ್ಥನಾದ ನೀನು, ನನ್ನ ಶಾಪವನ್ನು ನಿವಾರಿಸಿ ನನ್ನನ್ನನುಗ್ರಹಿಸು ಎಂದು ಸಾಂಬನು ತಂದೆಯನ್ನು ಕೇಳಿದನು.

೫-೬. ಈ ರೀತಿ ಪ್ರಶ್ನೆಮಾಡಿದ ತನ್ನ ಮಗನಾದ ಸಾಂಬನು ನಿರಪರಾಧಿಯೆಂದು ತಿಳಿದು ಅವನನ್ನು ಕುರಿತು, ಎಲೈ ಸಾಂಬನೇ, ನೀನು ಋಷಿಶ್ರೇಷ್ಠನಾದ ನಾರದನನ್ನೇ ಸಮಾಧಾನಪಡಿಸಿ ಕೇಳು. 'ಅವನೇ ನಿನ್ನ ಶಾಪವು ಯಾರಿಂದ ಹೇಗೆ ನಿವಾರಣೆಯಾಗುವುದೆಂಬುದನ್ನರುಹುವನು ಎಂದು ಹೇಳಿದನು.

೭-೮. ಅನಂತರ ಜಾಂಬವತೀ ಮಗನಾದ ಸಾಂಬನು, ಈ ರೀತಿ ನುಡಿದ ತಂದೆಯಮಾತನ್ನಾಲಿಸಿ ಖಿನ್ನನೂ, ಶಾಪದದೆಸೆಯಿಂದ ವಿಕೃತವಾದ ಅಂಗವುಳ್ಳವನೂ ಆಗಿ ಪುನಃ ಹಾಗೆಯೇ ಆಲೋಚಿಸಿ ಒಂದು ಸಲ ದ್ವಾರಕಾವತಿಯಲ್ಲಿ ವಾಸಿಸುತ್ತಿದ್ದ ಮಹಾವಿಷ್ಣುವನ್ನು ನೋಡಲು ಬಂದಿರುವ ನಾರದರನ್ನು ಕಂಡು ಅವರನ್ನು ವಿನಯದಿಂದ ಸತ್ಕರಿಸಿ ಮುಂದೆ ಹೇಳುವಂತೆ ಕೇಳಿಕೊಂಡನು.

॥ ಸಾಂಬ ಉವಾಚ ॥

ಭಗವನ್ ಬ್ರಹ್ಮಣಃ ಪುತ್ರ ಸರ್ವಜ್ಞಃ ಸರ್ವಲೋಕಗಃ ।
ದಯಾಂ ಹಿ ಕುರು ವಿಪ್ರೇಂದ್ರ ಪ್ರಣತಸ್ಯ ಮಮಾನಘ ॥ ೯ ॥

ತ್ವತ್ತೋಽಹಂ ಶ್ರೋತುಮಿಚ್ಛಾಮಿ ನಿಶ್ಚಯಂ ಬ್ರೂಹಿ ತನ್ಮಮ ।
ಕಃ ಸ್ತುತ್ಯಃ ಸರ್ವದೇವಾನಾಂ ಕಃ ಪರಃ ಪುರುಷೋಽವ್ಯಯಃ ॥ ೧೦ ॥

ದೀನಸ್ಯಾರ್ತಿಹರಃ ಕಶ್ಚ ಶರಣಂ ಕಂ ವ್ರಜಾಮ್ಯಹಂ ।
ಪಿತೃಶಾಪಸಮುತ್ಥೇನ ಕಶ್ಮಲೇನ ಮಹಾಮುನೇ ॥ ೧೧ ॥

ಅಭಿಭೂತಸ್ಯ ಮೋಕ್ಷೋ ಮೇ ಕಿಂ ಪ್ರಪನ್ನಸ್ಯ ವೈ ಭವೇತ್ ।

ವಸಿಷ್ಠ ಉವಾಚ

ಏವಂ ಸ ಪೃಚ್ಛತೇ ತಸ್ಮೈ ಸಾಂಬಾಯೋವಾಚ ನಾರದಃ ॥ ೧೨ ॥

---

೯-೧೨. ಭಗವಂತನೂ, ಬ್ರಹ್ಮಮಾನಸಪುತ್ರನೂ, ಸರ್ವಜ್ಞನೂ, ಸಕಲ ಲೋಕಸಂಚಾರಿಯೂ, ಸೂರ್ಯ ಶ್ರೇಷ್ಠನೂ ಆದ ನಾರದ ಮಹರ್ಷಿಯೇ, ನಿನ್ನನ್ನು ನಮಸ್ಕರಿಸುತ್ತಿರುವ ನನ್ನಲ್ಲಿ ದಯೆಯಿಡು. ನಾನು ನಿನ್ನಿಂದ ಕೆಲವು ವಿಷಯಗಳನ್ನು ತಿಳಿಯಬಯಸುವೆನು. ಯಾರನ್ನು ಸ್ತೋತ್ರಮಾಡಬೇಕು? ಯಾರು ಸಕಲ ದೇವತೆಗಳಲ್ಲಿಯೂ ಶ್ರೇಷ್ಠರೆನಿಸಿ ಪರಮಪುರುಷನೂ, ನಾಶರಹಿತನೂ ಎನಿಸುವನು? ದೀನರಾದವರ ರೋಗಗಳನ್ನಪಹರಿಸುವನಾರು? ಈಗ ದೀನನಾಗಿರುವ ನಾನು ಯಾರನ್ನು ಮರೆಹೋಗಲಿ? ಎಲೈ ಮಹಾಮುನಿಯೇ, ಪಿತೃಶಾಪದಿಂದುಂಟಾಗಿರುವ ಈ ಕುಷ್ಠರೋಗ ರೂಪವಾದ ಕಶ್ಮಲವನ್ನು ನಿವಾರಣೆಮಾಡಿಕೊಳ್ಳಲು ಯಾರ ಮೊರೆ ಹೊಂದಿದರೆಸಾಧ್ಯವಾದೀತು? ಇವೆಲ್ಲವನ್ನೂ ದಯವಿಟ್ಟು ತಿಳಿಸೆಂದು ಪ್ರಾರ್ಥಿಸಿದನು.

೧೨. ಈ ರೀತಿ ಕೇಳುತ್ತಿರುವ ಸಾಂಬನನ್ನು ಕುರಿತು ನಾರದನಿಂತೆಂದನು.

## ॥ ನಾರದ ಉವಾಚ ॥

ಕದಾಚಿತ್ಪರ್ಯಟನ್ಲೋಕಾನ್ಸೂರ್ಯಲೋಕಮಹಂ ಗತಃ ।
ತತ್ರ ದೃಷ್ಟೋ ಮಯಾ ಸೂರ್ಯಃ ಸರ್ವದೇವಗಣೈರ್ವೃತಃ ॥ ೧೩ ॥

ಗಂಧರ್ವೈರಪ್ಸರೋಭಿಶ್ಚ ನಾಗೈರ್ಯಕ್ಷೈಸ್ಸರಾಕ್ಷಸೈಃ ।
ಗಾಯಂತಿ ತತ್ರ ಗಂಧರ್ವಾ ನೃತ್ಯಂತೇಽಪ್ಸರಸಸ್ತಥಾ ॥ ೧೪ ॥

ರಕ್ಷಂತ್ಯುದ್ಯತಶಸ್ತ್ರಾಸ್ತ್ರಾ ಯಕ್ಷರಾಕ್ಷಸಪನ್ನಗಾಃ ।
ಋಚೋ ಯಜೂಂಷಿ ಸಾಮಾನಿ ಮೂರ್ತಿಮಂತಿ ಹಿ ತತ್ರ ಚ ॥ ೧೫ ॥

ತತ್ರೈತೈರ್ವಿವಿಧೈಸ್ಸ್ತೋತ್ರೈಃ ಸ್ತುವಂತಿ ಋಷಯೋ ರವಿಂ ।
ಮೂರ್ತಿಮಂತಶ್ಶುಭಾಸ್ತತ್ರ ತಿಸ್ರಸ್ಸಂಧ್ಯಾಶ್ಶುಭಾನನಾಃ ॥ ೧೬ ॥

ಗೃಹೀತ್ವೈರ್ವಜ್ರನಾರಾಚೈಃಪರಿಚರ್ಯರವಿಂಸ್ಥಿತಾಃ ।
ಆದಿತ್ಯಾ ವಸವೋ ರುದ್ರಾ ಮರುತಶ್ಚಾಶ್ವಿನೌ ತಥಾ ॥ ೧೭ ॥

೧೩-೧೮ ಒಂದು ಸಲ ನಾನು ಲೋಕಸಂಚಾರ ಮಾಡುತ್ತಾ ಸೂರ್ಯಲೋಕಕ್ಕೆ ಹೋದೆನು. ಅಲ್ಲಿ ಸೂರ್ಯದೇವನು ಸಕಲ ದೇವಗಣಗಳಿಂದಲೂ, ಗಂಧರ್ವರು, ಅಪ್ಸರಸ್ತ್ರೀಯರು, ನಾಗರು, ಯಕ್ಷರು, ರಾಕ್ಷಸರು ಇವರುಗಳಿಂದಲೂ ಸುತ್ತುವರಿಯಲ್ಪಟ್ಟಿದ್ದನು. ಅಲ್ಲಲ್ಲಿ ಗಂಧರ್ವರೂ ಸಂಗೀತ ಹಾಡುತ್ತಲೂ, ಅಪ್ಸರೆಯರು ನರ್ತನಮಾಡುತ್ತಲೂ, ಯಕ್ಷ, ರಾಕ್ಷಸ, ಪನ್ನಗಗಣಗಳು ಶಸ್ತ್ರಾಸ್ತ್ರಗಳನ್ನೂ ಹಿಡಿದು ಆಜ್ಞಾಧಾರಕರಾಗಿಯೂ ಇದ್ದರು. ಅಲ್ಲಿ ಋಗ್ಯಜುಸ್ಸಾಮವೇದಗಳು ಆಕಾರವಿಶಿಷ್ಟವಾಗಿದ್ದವು. ಅವುಗಳಲ್ಲಿ ಹೇಳಿದ ಸ್ತೋತ್ರಗಳಿಂದ ಋಷಿಗಳು ಸೂರ್ಯನನ್ನು ಹೊಗಳುತ್ತಿದ್ದರು. ಮಂಗಳಕರಗಳಾದ ಮೂರು ಸಂಧ್ಯೆಗಳೂ ಮೂರ್ತಿಗಳನ್ನು ಧರಿಸಿ, ವಜ್ರಾಯುಧ ಮತ್ತು ಬಾಣಗಳನ್ನು ಹಿಡಿದು ಸೂರ್ಯನ ಸುತ್ತಲೂ ಸಂಚರಿಸುತ್ತಿದ್ದವು. ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ, ಸಪ್ತಮರುತ್ತುಗಳೂ,

ತ್ರಿಸಂಧ್ಯಂ ಪೂಜಯಂತ್ಯರ್ಕಂ ತತ್ರಾನ್ಯೇ ಚ ದಿವೌಕಸಃ ।
ಈರಯಞ್ಜಯಶಬ್ದಂ ತು ಶಕ್ರಸ್ತತ್ರೈವ ತಿಷ್ಠತಿ ॥ ೧೮ ॥

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಪ್ರಯುಂಜಂತ್ಯಾಶಿಷಃ ಶುಭಾಃ ।
ರಥಂ ಹಿ ಮಹತೇ ತಸ್ಯ ಅರುಣೋನಾಮ ಸಾರಥಿಃ ॥ ೧೯ ॥

ಹರಿತೈಸ್ಸಪ್ತಭಿರ್ಯುಕ್ತಂ ಛಂದೋಭಿರ್ವಾಜಿರೂಪಿಭಿಃ ।
ದ್ವೇ ಭಾರ್ಯೇ ಪಾರ್ಶ್ವಯೋಸ್ತಸ್ಯ ತೇ ರಾಜ್ಞೀನಿಕ್ಷುಭೇ ಶುಭೇ ॥ ೨೦ ॥

ಅನ್ಯೈಶ್ಚನಾಮಭಿರ್ದೇವಾಃ ಪಾರಿಚರ್ಯವಿಧಿಂ ಸ್ಥಿತಾಃ ।
ಪಿಂಗಲೋ ದೇವಕಸ್ತತ್ರ ತತೋನ್ಯೋ ದಂಡನಾಯಕಃ ॥ ೨೧ ॥

ರಾಜ್ಞಃ ಸ್ತೋಷೌ ಚ ತದ್ದ್ವಾರೇ ತತಃ ಕಲ್ಮಾಷಪಕ್ಷಿಣೌ ।
ತತೋ ವ್ಯೋಮ ಚತುಃಶೃಂಗಂ ಮೇರೋಃ ಸದೃಶಲಕ್ಷಣಂ ॥ ೨೨ ॥

---

ಮತ್ತು ಅಶ್ವಿನೀದೇವತೆಗಳೂ ಅಲ್ಲದೆ ಸಕಲ ಮೂವತ್ತುಮೂರುಕೋಟಿ ದೇವತೆಗಳೂ ಸಹ ಮೂರು ಸಂಧ್ಯಾಕಾಲಗಳಲ್ಲಿಯೂ ಸೂರ್ಯನನ್ನಾರಾಧಿಸುತ್ತಿದ್ದರು. ಇಂದ್ರನು ಜಯಶಬ್ದಮಾಡುತ್ತಾ ಅಲ್ಲಿಯೇ ನಿಂತಿದ್ದನು.

೧೯-೨೨. ಅಲ್ಲಿ ಬ್ರಹ್ಮವಿಷ್ಣುಮಹೇಶ್ವರರು ಆಶೀರ್ವದಿಸುತ್ತಲೂ, ಸಾರಥಿಯಾದ ಅರುಣನು ಛಂದೋರೂಪಗಳಾದ ಏಳು ಕುದುರೆಗಳನ್ನು ಕಟ್ಟಿದ ರಥವನ್ನು ಹೊಡೆಯುತ್ತಲೂ ಇದ್ದರು. ಸೂರ್ಯನ ಪಕ್ಕಗಳಲ್ಲಿ ರಾಜ್ಞೀ ಮತ್ತು ನಿಕ್ಷುಭಾ, ಎಂಬ ಇಬ್ಬರು ಪತ್ನಿಯರಿದ್ದರು. ದೇವತೆಗಳು ಇನ್ನೂ ಅನೇಕ ಹೆಸರಿನಿಂದ ಉಪಚರಿಸುತ್ತಿದ್ದರು. ಅಲ್ಲಿ ಪಿಂಗಲಮುನಿಯೇ ದೇವರ ಪೂಜಕನು. ಬೇರೆ ಇನ್ನೊಬ್ಬ ದಂಡನಾಯಕನು ಅಲ್ಲಿದ್ದನು. ರಾಜದ್ವಾರದಲ್ಲಿ ಕಲ್ಮಾಷ ಮತ್ತು ಪಕ್ಷೀ ಎಂಬ ದ್ವಾರಪಾಲಕರಿದ್ದರು. ಅದಕ್ಕಿಂತಲೂ ಮುಂದೆ ಮೇರುಸಮಾನಲಕ್ಷಣವುಳ್ಳ ನಾಲ್ಕು ಶಿಖರಗಳಿಂದ ಕೂಡಿದ ಅಂತರಿಕ್ಷವಿದ್ದಿತು. ದಿಂಡಿ ಎಂಬುವನು ನಗ್ನನಾಗಿ ಅವನ ಎದುರು ನಿಂತಿದ್ದನು. ಇತರ ದೇವತೆಗಳೆಲ್ಲರೂ ಬೇರೆ ದಿಕ್ಕುಗಳಲ್ಲಿದ್ದರು.

ದಿಂಡಿರ್ನಗ್ನೋಽಗ್ರತಸ್ತಸ್ಯ ದಿಕ್ಷುಚಾನ್ಯೇ ಸ್ಥಿತಾಸ್ಸುರಾಃ ।
ಏವಂ ಸರ್ವಗತಂ ನಿತ್ಯಂ ಪ್ರದೀಪ್ತಂ ಜಗತಃ ಶುಭಮ್ ।
ಬ್ರಹ್ಮಾದ್ಯೈಸ್ಸಂಸ್ತುತಂ ದೇವೈರಾದಿತ್ಯಂಶರಣಂ ವ್ರಜ ॥ ೨೩ ॥

ಇತಿ ಶ್ರೀ ಸಾಂಬಪುರಾಣೇ ಭಕ್ತ್ಯುಪಸ್ಥಾನೇ ಷಷ್ಠೋಽಧ್ಯಾಯಃ

---

ಈ ರೀತಿಯಾಗಿ ಸರ್ವವ್ಯಾಪ್ತನೂ, ನಿತ್ಯನೂ, ಪ್ರಜ್ವಲಿಸುವವನೂ, ಜಗತ್ತಿಗೆ ಶುಭವನ್ನುಂಟುಮಾಡುವವನೂ, ಬ್ರಹ್ಮಾದಿಗಳ ಸ್ತೋತ್ರಕ್ಕೆ ಪಾತ್ರನಾದವನೂ, ಆದ ಸೂರ್ಯನನ್ನು ಮರೆಹೋಗು. ಅವನು ನಿನ್ನನ್ನನುಗ್ರಹಿಸುವನು ಎಂದು ನಾರದನು ಹೇಳಿದನೆಂಬಲ್ಲಿಗೆ

ಸಾಂಬಪುರಾಣದಲ್ಲಿನ ಆರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತಮೋಽಧ್ಯಾಯಃ



॥ ಸಾಂಬ ಉವಾಚ ॥

**ತತ್ತ್ವತಃ ಶ್ರೋತುಮಿಚ್ಛಾಮಿ ಕಥಂ ಸರ್ವಗತೋ ರವಿಃ ।**
**ಕತಿಧಾ ರಶ್ಮಯಸ್ತತ್ರ ಮೂರ್ತಯಶ್ಚ ಕತಿ ಸ್ಮೃತಾಃ ॥ ೧ ॥**

**ಕಾ ರಾಜ್ಞೀ ನಿಕ್ಷುಭಾ ಕಾ ಚ ಕಶ್ಚಾಯಂ ದಂಡನಾಯಕಃ ।**
**ಪಿಂಗಲಶ್ಚಾಪಿ ಕಃ ಪ್ರೋಕ್ತಃ ಕಿಂ ಚಾಸೌ ಲಿಖನೇ ಸದಾ ॥ ೨ ॥**

---

## ಏಳನೆಯ ಅಧ್ಯಾಯ.

೧-೪. ಶ್ರೀಕೃಷ್ಣ ಪುತ್ರನಾದ ಸಾಂಬನು ನಾರದನನ್ನು ಕುರಿತು, "ಎಲೈ ದೇವರ್ಷಿಯೇ, ಸೂರ್ಯನು ಸರ್ವವ್ಯಾಪಿ ಎನ್ನುವುದು ಹೇಗೆ? ಅವನ ಕಿರಣಗಳೂ, ಮೂರ್ತಿಗಳೂ ಸಹ ಎಷ್ಟೆಷ್ಟು ವಿಧವಾಗಿರುವುವು? ಸೂರ್ಯನ ಪತ್ನಿಯರೆಂದು ಹೇಳಿದ, ರಾಜ್ಞೀ ಮತ್ತು ನಿಕ್ಷುಭಾದೇವಿಯರು ಯಾರು? ನೀನು ಹೇಳಿದ ದಂಡನಾಯಕನೆಂಬುವನು ಯಾರು? ಪಿಂಗಳನೆಂಬುವನ ಕಾರ್ಯವೇನು? ಇವನು ಯಾವಾಗಲೂ ಬರೆಯುವ ಕೆಲಸದಲ್ಲಿ ನಿಯುಕ್ತನಾಗಿದ್ದಾನೆಯೆ? ರಾಜ ದ್ವಾರಪಾಲಕರಾದ ರಾಜ್ಞ ಮತ್ತು ತೋಷರೆಂಬುವರು ಯಾರು? ಕಲ್ಮಾಷ ಮತ್ತು ಪಕ್ಷಿಗಳೆಂದು ತಿಳಿಸಿದೆಯಲ್ಲಾ! ಅವುಗಳ ವೃತ್ತಾಂತವೇನು? ಮೇರುವಿಗೆ ಸಮಾನವಾದ ಲಕ್ಷಣವುಳ್ಳ ವ್ಯೋಮರೂಪ ದೈವತವು ಯಾರು? ನಗ್ನನಾಗಿರುವ ದಿಂಡಿ ಎಂಬುವನಾರು? ಎಲ್ಲಾ

ರಾಜ್ಞಸ್ತ್ರೋಃಷೌ ಚ ಕೌ ದ್ವಾರೇ ಕೌ ಚ ಕಲ್ಮಾಷಪಕ್ಷಿಣೌ ।
ಕಿಂ ದೈವತಂ ಚ ತದ್ವ್ಯೋಮ ಮೇರೋಸ್ಸದೃಶಲಕ್ಷಣಂ ॥ ೩ ॥

ಕೋ ದಿಂಡಿನ್ನಗ್ನಕೋ ಯಶ್ಚ ಕೇ ದೇವಾ ದಿಕ್ಷು ಯೇ ಸ್ಥಿತಾಃ ।
ತತ್ತ್ವತೋ ನಿಗಮಂ ಚೈವ ವಿಸ್ತರೇಣ ವದಸ್ವ ಮೇ ॥ ೪ ॥

॥ ನಾರದ ಉವಾಚ ॥

ವಿಸ್ತರೇಣಾನುಪೂರ್ವ್ಯಾ ಚ ಸೂರ್ಯಂ ನಿಗದಿತಂ ಶೃಣು ।
ತತಃ ಶೇಷಾನ್ಪ್ರವಕ್ಷ್ಯಾಮಿ ನಮಸ್ಕೃತ್ವಾ ವಿವಸ್ವತೇ ॥ ೫ ॥

ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದಸದಾತ್ಮಕಂ ।
ಪ್ರಧಾನಂ ಪ್ರಕೃತಿಂ ಚೇತಿ ತಮಾಹುಸ್ತತ್ತ್ವಚಿಂತಕಾಃ ॥ ೬ ॥

---

ದಿಕ್ಕುಗಳಲ್ಲಿಯೂ ಇರುವ ದೇವತೆಗಳ ಸಮಾಚಾರವೇನು ? ತತ್ತ್ವದಿಂದ ಅಂದರೆ ಮುಖ್ಯವಾಗಿ ತಿಳಿಯಬೇಕಾದ ವಸ್ತುವಾವುದು ? ಇವೆಲ್ಲವನ್ನೂ ನೀನು ವಿಸ್ತಾರವಾಗಿ ನನಗೆ ತಿಳಿಸಬೇಕೆಂದು " ಪ್ರಾರ್ಥಿಸಿದನು.

೫. ಈ ರೀತಿ ಪ್ರಾರ್ಥಿಸಿದ ಸಾಂಬನನ್ನು ಕುರಿತು ನಾರದನು, ಎಲೈ, ಸಾಂಬನೆ, ಮೊದಲು ವಿಸ್ತಾರವಾಗಿ ಸ್ವಲ್ಪವನ್ನೂ ಬಿಡದೇ ಸೂರ್ಯನ ವೃತ್ತಾಂತವನ್ನು ತಿಳಿಸುವೆನು ಕೇಳು. ಮೊದಲು ಸೂರ್ಯ ದೇವನನ್ನು ನಮಸ್ಕರಿಸಿ ಮುಂದಿನವರ ವಿಷಯವನ್ನೆಲ್ಲಾ ಪೇಳುವೆನು ಎಂದು ಮುಂದೆಹೇಳುವಂತೆ ತಿಳಿಸಿದನು.

೬. ತತ್ತ್ವ ವಿಮರ್ಶೆ ಮಾಡುವ ಜನರು ಅವ್ಯಕ್ತ ಸ್ವರೂಪವೂ, ಅಂದರೆ ಇತರರಿಗೆ ಗೋಚರವಾಗದಂತೆ ಇರುವುದೂ, ಸಕಲ ಪ್ರಪಂಚಗಳಿಗೆ ಕಾರಣಸ್ವರೂಪವೂ, ನಿತ್ಯವೂ, ಸದಸದ್ರೂಪವುಳ್ಳದ್ದೂ ಅಂದರೆ ಕೆಲವುವೇಳೆ ಮೂರ್ತಿ ಭೇದದಿಂದ ಇತರರಿಗೆ ಪ್ರತ್ಯಕ್ಷವಾಗಿ, ಮತ್ತೆ ಕೆಲವು ವೇಳೆ ಇಲ್ಲದಂತೆ ತೋರುವ ಸ್ವಭಾವವುಳ್ಳದ್ದೂ ಆದ ಆ ವಸ್ತುವನ್ನು ಪ್ರಧಾನ, ಅಥವಾ ಪ್ರಕೃತಿ ಎಂಬುದಾಗಿ ಕರೆಯುವರು.

ಗಂಧವರ್ಣರಸೈರ್ಹೀನಂ ಶಬ್ದಸ್ಪರ್ಶವಿವರ್ಜಿತಂ ।
ಜಗದ್ಯೋನಿಸಮುದ್ಭೂತಂ ಪರಂ ಬ್ರಹ್ಮ ಸನಾತನಮ್ ॥ ೭ ॥

ವಿಗ್ರಹಃ ಸರ್ವಭೂತಾನಾಂ ಅವ್ಯಕ್ತಮಭವತ್ಪುರಾ ।
ಅನಾದ್ಯಂ ತಮಜಂ ಸೂಕ್ಷ್ಮಂ ತ್ರಿಗುಣಂ ಪ್ರಭವಾಪ್ಯಯಂ ॥ ೮ ॥

ಅಸಾಂಪ್ರತಮತಿ ಜ್ಞೇಯಂ ತಮಾಹುಃ ಪರಮಂ ಪದಂ ।
ತೇನಾತ್ಮನಾ ಸರ್ವಮಿದಂ ಜಗದ್ವ್ಯಾಪ್ತಂ ಮಹಾತ್ಮನಾ ॥ ೯ ॥

ತಸ್ಯೇಶ್ವರಸ್ಯ ಪ್ರತಿಮಾ ಜ್ಞಾನವೈರಾಗ್ಯಲಕ್ಷಣಾ ।
ಧರ್ಮೈಶ್ವರ್ಯಕೃತಾ ಬುದ್ಧಿರ್ಬ್ರಾಹ್ಮೀ ತಸ್ಯಾಭಿಮಾನಿತಾ ॥ ೧೦ ॥

---

೭. ಬ್ರಹ್ಮ ವಸ್ತುವು ಗಂಧ, ವರ್ಣ, ರಸ, ಇವುಗಳಿಂದ ದೂರವಾಗಿ ಶಬ್ದ ಸ್ಪರ್ಶಗಳಿಂದಲೂ ಬಿಡಲ್ಪಟ್ಟಿದೆ. ಇದು ಜಗತ್ತೆಂಬ ಯೋನಿ (ಉತ್ಪತ್ತಿ ಸ್ಥಾನ) ಯಲ್ಲಿ ಜನಿಸಿದಂತೆ ತೋರಿ ಶ್ರೇಷ್ಠವೂ, ಪುರಾತನವೂ ಆದ ಬ್ರಹ್ಮಸ್ವರೂಪವೆನಿಸುವುದು.

೮-೯. ಸರ್ವಭೂತಮೂರ್ತಿಯೆನಿಸಿ ಮೊದಲು ಪರಬ್ರಹ್ಮನು ಅವ್ಯಕ್ತಸ್ವರೂಪ ವೆನಿಸಿದ್ದನು. ಅವನನ್ನೇ ಆದಿ ಇಲ್ಲದವನೂ, ಉತ್ಪತ್ತಿರಹಿತನೂ, ಸೂಕ್ಷ್ಮಸ್ವರೂಪನೂ ಸತ್ವ ರಜಸ್ತಮೋಗುಣ ರೂಪನೂ, ಸರ್ವ ಸಮರ್ಥನೂ, ಸರ್ವ ವ್ಯಾಪಿಯೂ, ಅನಾದಿವಾಸನಾ ಬಲದಿಂದ ತಿಳಿಯಲ್ಪಡತಕ್ಕವನೂ, ಎಂದು ತಿಳಿಯಬೇಕು. ಈ ಪರ ಬ್ರಹ್ಮವಸ್ತುವನ್ನೇ ಪರಮ ಪದವೆಂತಲೂ ಕರೆಯುವರು. ಈ ಪರಮಾತ್ಮನೇ ತನ್ನ ಮಹಿಮೆಯಿಂದ ಸಕಲ ಜಗತ್ತನ್ನೂ ವ್ಯಾಪಿಸಿ ಬೆಳಗುತ್ತಿರುವನು.

೧೦. ಜ್ಞಾನ ಮತ್ತು ವೈರಾಗ್ಯ ಇವುಗಳ ಸ್ವರೂಪವೇ ಆ ಪರಮೇಶ್ವರನ ಪ್ರತಿಮೆ. ಪರಬ್ರಹ್ಮ ಸಂಬಂಧಿಯಾದ ಧರ್ಮ, ಸಂಪದ್ರೂಪವಾದ ಬುದ್ಧಿ, ಜ್ಞಾನವೇ ಆ ಸರ್ವೇಶ್ವರನ ಅಹಂಕಾರವು.

ಅವ್ಯಕ್ತಾಜ್ಜಾಯತೇ ತಸ್ಯ ಮನಸಾ ಯದ್ಯದಿಚ್ಛತಿ ।
ಚತುರ್ಮುಖಸ್ಯ ಬ್ರಹ್ಮತ್ವೇ ಕಾಲತ್ವೇ ಚಾಂತಕೃದ್ಭವಃ ॥ ೧೧ ॥

ಸಹಸ್ರಮೂರ್ಧಾ ಪುರುಷಃ ತಿಸ್ರೋಽವಸ್ಥಾಃ ಸ್ವಯಂಭುವಃ ।
ಸತ್ವಂ ರಜಶ್ಚ ಬ್ರಹ್ಮತ್ವೇ ಕಾಲತ್ವೇ 'ಚ ರಜಸ್ತಮಃ ॥ ೧೨ ॥

ಸಾತ್ವಿಕಂ ಪುರುಷತ್ವೇ ಚ ಗುಣಾವೃತ್ತಂ ಸ್ವಯಂಭುವಃ ।
ಬ್ರಹ್ಮತ್ವೇ ಸೃಜತೇ ಲೋಕಾನ್ ಕಾಲತ್ವೇ ಸ ಕ್ಷಿಪತ್ಯಪಿ ॥ ೧೩ ॥

ಪುರುಷತ್ವೇಪ್ಯುಸಾಸೀನಃ ತಿಸ್ರೋಽವಸ್ಥಾಃ ಸ್ವಯಂಭುವಃ ।
ತ್ರಿಧಾ ವಿಭಜ್ಯ ಚಾತ್ಮಾನಂ ತ್ರೈಕಾಲ್ಯಂ ಸಂಪ್ರವರ್ತತೇ ॥ ೧೪ ॥

---

೧೧. ಇತರರಿಗೆ ಗೋಚರವಾಗದ ಸ್ವರೂಪವುಳ್ಳ ಪರಮಾತ್ಮನು, ಇಚ್ಛಿಸುವುದೆಲ್ಲವೂ, ಮರುಕ್ಷಣದಲ್ಲಿಯೇ ಉಂಟಾಗುವುದು. ಪರಮಾತ್ಮನಿಗೆ, ಸೃಷ್ಟಿಕರ್ತನಾದ ಬ್ರಹ್ಮ, ಲಯಕರ್ತನಾದ ಶಿವನು, ಪಾಲಕನಾದ ಸಹಸ್ರ ಶಿರಸ್ಸುಳ್ಳ ಮಹಾವಿಷ್ಣು ಹೀಗೆ ಭಿನ್ನಾಕಾರದ ಮೂರು ಅವಸ್ಥೆಗಳುಂಟು.

೧೨. ಅಯೋನಿಜನಾದ ಪರಮಾತ್ಮನು ಬ್ರಹ್ಮನೆನಿಸಿದಾಗ, ಸತ್ವರಜೋಗುಣಗಳೂ, ಕಾಲ ಅಥವ ಪರಮೇಶ್ವರನೆನಿಸಿದಾಗ ರಜೋಗುಣ, ತಮೋಗುಣಗಳೂ ಪುರುಷ ಅಥವ ಮಹಾ ವಿಷ್ಣುವೆನಿಸಿದಾಗ ಸತ್ವಗುಣ ಮಾತ್ರವೂ ಸಹ ಪರಮಾತ್ಮನನ್ನಾವರಿಸುವಂತೆ ತೋರುತ್ತವೆ.

೧೩-೧೪. ಇವನು ಬ್ರಹ್ಮನೆನಿಸಿ ಲೋಕವನ್ನು ಸೃಷ್ಟಿ ಮಾಡುವನು; ಕಾಲನೆನಿಸಿ ನಾಶಮಾಡುವನು. ಪುರುಷನೆನಿಸಿ ಪ್ರಪಂಚವನ್ನೆಲ್ಲ ರಕ್ಷಿಸಲು ಉದ್ದೇಶದಿಂದ ಪ್ರವರ್ತಿಸುವನು. ಈ ರೀತಿಯಾಗಿ ಪರಮಾತ್ಮ ಸ್ವರೂಪನಾದ ಈ ಸೂರ್ಯನಿಗೆ ಮೂರು ಅವಸ್ಥೆಗಳು. ತಾನೇ ಸತ್ವರಜಸ್ತಮೋಗುಣಗಳಿಂದ ಕ್ರಮವಾಗಿ ಸೃಷ್ಟಿ ಸ್ಥಿತಿ ಸಂಹಾರಗಳನ್ನೆಸಗುವನು. ಮೂರು ವಿಭಾಗಮಾಡಿಕೊಂಡು ತ್ರಿಕಾಲದಲ್ಲೂ ಸಂಚರಿಸುವನು. ಮುಂದೆ ಒಬ್ಬನಿಗೆ ಅನೇಕ ಹೆಸರು ಬರಲು ಕಾರಣವನ್ನು ತಿಳಿಸುವೆನು :—

ಸೃಜತೇ ಗ್ರಸತೇ ಚೈವ ವೀಕ್ಷತೇ ಚ ತ್ರಿಭಿಸ್ಸ್ವಯಂ ।
ಅಗ್ರೇ ಹಿರಣ್ಯಗರ್ಭಸ್ತು ಪ್ರಾದುರ್ಭೂತೇ ಸ್ವಯಂಭುವಿ ॥ ೧೫ ॥

ಆದಿತ್ಯಸ್ತ್ವಾದಿದೇವತ್ವಾದಜಾತತ್ವಾದಜಃ ಸ್ಮೃತಃ ।
ದೇವೇಷು ಚ ಮಹಾನ್ದೇವೋ ಮಹಾದೇವಸ್ತತಃ ಸ್ಮೃತಃ ॥ ೧೬ ॥

ಸರ್ವಸತ್ವಾಚ್ಚ ಲೋಕಸ್ಯ ಹ್ಯವಶ್ಯತ್ವಾತ್ಸಚೇಶ್ವರಃ ।
ಬೃಹತ್ವಾಚ್ಚ ಸ್ಮೃತೋ ಬ್ರಹ್ಮಾ ಭೂತತ್ವಾದ್ಭವ ಉಚ್ಯತೇ ॥ ೧೭ ॥

ಪ್ರಜಾಂತಿ ಯಸ್ಮಾತ್ಪ್ರಜಾಸ್ಸರ್ವಾಃ ಪ್ರಜಾಪತಿರಿತಿ ಸ್ಮೃತಃ ।
ಪುರ್ಯಾಂ ತು ಶೇತೆ ಯಸ್ಮಾಚ್ಚ ತಸ್ಮಾತ್ಪುರುಷ ಉಚ್ಯತೇ ॥ ೧೮ ॥

ನೋತ್ಪಾದನತ್ವಾತ್ಪೂರ್ವತ್ವಾತ್ಸ ಸ್ವಯಂಭೂರಿತಿ ಸ್ಮೃತಃ ।
ಹಿರಣ್ಯೇನ ತು ಗರ್ಭಸ್ಥೋ ಯಸ್ಮಾದೇವ ಸಮಾವೃತಃ ॥ ೧೯ ॥

---

೧೫-೧೬. ಮೊದಲು ಉತ್ಪತ್ತಿಯಾದ ಪರಮಾತ್ಮನಲ್ಲಿ ಹಿರಣ್ಯಗರ್ಭ ಬ್ರಹ್ಮನು ಹುಟ್ಟಿದನು. ಸೂರ್ಯನು ಆದಿದೇವನಾದುದರಿಂದಲೂ, (ಅಂದರೆ ಇವನಿಗಿಂತಲೂ ಹಿಂದೆ ಯಾವದೇವತೆಗಳೂ ಇರಲಿಲ್ಲವಾದ ಕಾರಣ) ಉತ್ಪತ್ತಿರಹಿತನಾದುದರಿಂದಲೂ ಸಹ ಅಜನೆನಿಸಿದನು. ದೇವತೆಗಳೆಲ್ಲಾ ದೊಡ್ಡವನಾದುದರಿಂದ ಇವನಿಗೆ ಮಹಾದೇವನೆಂದು ಹೆಸರು ಬಂದಿತು.

೧೭. ಎಲ್ಲಾ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದಲೂ, ಲೋಕಕ್ಕೆ ಅಧೀನನಲ್ಲದೆ ಆವಶ್ಯಕವಾಗಿ ಇವನು ಬೇಕಾದುದರಿಂದಲೂ ಸಹ ಈಶ್ವರನೆನಿಸಿದನು. ದೊಡ್ಡವನೂ, ವ್ಯಾಪಕನೂ ಆದುದರಿಂದ ಬ್ರಹ್ಮನೆಂದೂ, ಪಂಚಭೂತಸ್ವರೂಪನಾದ್ದರಿಂದ ಭವನೆಂದೂ ಇವನನ್ನು ಕರೆಯುವರು.

೧೮. ಪ್ರಜೆಗಳೆಲ್ಲರೂ ಮೊದಲು ಇವನಿಂದಲೇ ಹೊರಬೀಳುವರಾದ್ದರಿಂದ ಪ್ರಜಾಪತಿಯೆಂದೂ, ಭಕ್ತರ ಹೃದಯ ಕುಹರದಲ್ಲಿ ಮಲಗುವನಾದ ಕಾರಣ ಪುರುಷನೆಂದೂ ಇವನಿಗೆ ಹೆಸರುಗಳು ಬಂದವು

೧೯. ಇವನಿಗೆ ಜನಕನಿಲ್ಲದುದರಿಂದಲೂ, ಪ್ರಾಚೀನನಾದುದರಿಂದಲೂ, ಸ್ವಯಂಭೂ ಎಂದು ಹೆಸರಿದೆ. ಹಿರಣ್ಯರೂಪದಿಂದಲೇ, ಗರ್ಭದಲ್ಲಿ ವಾಸಿಸುತ್ತ, ಆ ಹಿರಣ್ಯರೂಪಿಯಾಗಿಯೇ ಆವರಿಸಿದ್ದ ಕಾರಣ, ಈ ಸೂರ್ಯದೇವನಿಗೆ ಹಿರಣ್ಯಗರ್ಭನೆಂದು ಹೆಸರು ಬರಲು ಕಾರಣವಾಯಿತು.

ತಸ್ಮಾದ್ಧಿರಣ್ಯಗರ್ಭೇತಿ ಸೂರ್ಯೋ ದೇವೋ ನಿಗದ್ಯತೇ ।
ಆಪೋ ನಾರಾ ಇತಿ ಪ್ರೋಕ್ತಾ ಋಷಿಭಿಸ್ತತ್ತ್ವದರ್ಶಿಭಿಃ ॥ ೨೦ ॥
ಅಯನಂ ತಸ್ಯ ತತ್ಪೂರ್ವಂ ತೇನ ನಾರಾಯಣಃ ಸ್ಮೃತಃ ।
ಅರಮಿತ್ಯೇಷ ಸಿದ್ಧಾರ್ಥೇ ನಿಪಾತಃ ಕವಿಭಿಃ ಸ್ಮೃತಃ ॥ ೨೧ ॥
ಏಕಾರ್ಣವೇ ಪುರಾ ತಸ್ಮಿನ್ ನಷ್ಟೇ ಸ್ಥಾವರಜಂಗಮೇ ।
ನಾರಾಯಣಾಖ್ಯಃ ಪುರುಷಃ ಸುಷ್ವಾಪ ಸಲಿಲೇ ತದಾ ॥ ೨೨ ॥

---

೨೦-೨೨. ತತ್ತ್ವಜ್ಞರಾದ ಋಷಿಗಳು, ನಾರಾ ಎಂದರೆ ನೀರು ಎಂದು ಹೇಳುವರು. ಆ ನೀರುಗಳಿಗೆಲ್ಲಾ ಮೂಲಸ್ಥಾನವೆನಿಸಿರುವುದರಿಂದ ನಾರಾ ಶಬ್ದವನ್ನೇ ಮೊದಲುಮಾಡಿಕೊಂಡಿರುವ ಅಯನ ಶಬ್ದವು ನಾರಾಯಣನೆನಿಸಿ ನೀರುಗಳಿಗೆಲ್ಲಾ ಮೂಲಕಾರಣವೆನಿಸಿತು. ಅಂದರೆ ಸಕಲ ಜಲಸ್ಥಿತಿಗೂ ಅಧಿಪತಿಯಾಗಿರುವುದರಿಂದ ನಾರಾಯಣನೆಂದು ಸೂರ್ಯದೇವನಿಗೆ ಹೆಸರು ಬಂದಿತು.

ನಾರಾಯಣ ಶಬ್ದದ ರೂಢಿಯು ಇನ್ನೊಂದು ರೀತಿಯಲ್ಲಿಯೂ ಉಂಟಾಯಿತೆಂದು ತಿಳಿಯಬಹುದು. ಕವಿಗಳು ಅರ, ಎಂಬುದು ಪ್ರಸಿದ್ಧವಾದ ಎಂಬ ಅರ್ಥದಲ್ಲಿ ನಿಪಾತವೆನ್ನುವರು. ಇದನ್ನೇ ಸ್ಥಾವರಜಂಗಮಾತ್ಮಕವಾದ ಪ್ರಪಂಚವು ಎಂದು ತಿಳಿಯಬೇಕು. ನ + ಅರಾ : = ನಾರಾ : . ಇಲ್ಲಿ ನ ಎಂಬ ನಞ್‌ಗೆ ನಷ್ಟವಾಗಿರುವ ಎಂಬ ಅರ್ಥವನ್ನು ಹೇಳಿದ್ದಾರೆ. ಅಂದರೆ, ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನಾಶವಾಗಲಾಗಿ, ಅವುಗಳಿಗೆಲ್ಲಾ ಉತ್ಪತ್ತಿಸ್ಥಾನವಾದ ನೀರು ಮಾತ್ರ ನಿಲ್ಲುವುದು. "ಅದ್ಭ್ಯಃಪೃಥಿವೀ" ; "ಅಪಏವಸಸರ್ಜಾದೌತಾಸು ವೀರ್ಯಮವಾಸೃಜತ್" ಎಂಬ ಶ್ರುತಿ ಸ್ಮೃತ್ಯನುಸಾರವಾಗಿ ಮತ್ತೆ ಅಲ್ಲಿಂದ ಜಗತ್ತು ಹುಟ್ಟುವುದು. ನಾರಾಣಾಂ + ಅಯನಂ = ನಾರಾಯಣಂ ಎಂಬ ವ್ಯುತ್ಪತ್ತಿಯಿಂದ ಈ ಅರ್ಥವುಂಟಾಯಿತೆಂದು ಹೇಳಬಹುದು. ಮುಂದೆ ನಾರಾಯಣಂ ಅಸ್ಮಿನ್ನಸ್ತೀತಿ ನಾರಾಯಣಃ ಅಂದರೆ ಅಂತಹ ನೀರುಗಳಿಗೂ ಮೂಲಪುರುಷನೆಂದು ಅರ್ಥ. ಈ ಕಾರಣದಿಂದಲೂ ನಾರಾಯಣನೆಂದು ಹೆಸರು ಬಂದಿತು. ಪ್ರಪಂಚನೆಲ್ಲಾ ನಾಶವಾದ ಸಮಯದಲ್ಲಿ ಕೇವಲ ನೀರು ಮಾತ್ರ ಉಳಿಯುವುದೆಂದು ಪ್ರಸಿದ್ಧವಾಗಿರುವುದರಿಂದ ಪರಮಾತ್ಮನು ಆಗ ನೀರಿನಲ್ಲಿಯೇ ಮಲಗಿ ನಿದ್ರಿಸುತ್ತಾನೆಂದು ತಿಳಿಯಬೇಕು.

ಸಹಸ್ರಶೀರ್ಷಾ ಸುಮಹಾನ್ ಸಹಸ್ರಪಾತ್ ।
ಸಹಸ್ರಚಕ್ಷುರ್ವದನಃ ಸಹಸ್ರಭುಕ್ ।
ಸಹಸ್ರಬಾಹುಃ ಪ್ರಥಮಃ ಪ್ರಜಾಪತಿಃ ।
ಸೂರ್ಯಾಖ್ಯತೇಜಾಃ ಪುನರುಚ್ಯತೇ ರವಿಃ ॥ ೨೩ ॥

ಆದಿತ್ಯವರ್ಣೋ ಭುವನಸ್ಯ ಗೋಪ್ತಾ ಹ್ಯಪೂರ್ವ ಏಕಃ ಪುರುಷಃ ಪುರಾಣಃ
ಹಿರಣ್ಯಗರ್ಭಃ ಪುರುಷೋ ಮಹಾತ್ಮಾ ಸ ಇಷ್ಯತೇ ವೈ ತಮಸಃ ಪರಸ್ತಾತ್॥

ತುಲ್ಯಂ ಯುಗಸಹಸ್ರಸ್ಯ ನೈಶಂ ಕಾಲಮುಪಾಸ್ಯತಃ ।
ಸಂವರ್ತಾಂತೇ ಪ್ರಕುರುತೇ ಬ್ರಹ್ಮತ್ವಂ ಸರ್ಗಕಾರಣಾತ್ ॥ ೨೫ ॥

---

೨೩. ಈ ಸೂರ್ಯನನ್ನೇ ಪುನಃ, ಸಾವಿರ ತಲೆಯುಳ್ಳವನಾದ್ದರಿಂದ ಸಹಸ್ರ ಶೀರ್ಷನೆಂದೂ, ಎಲ್ಲರಿಗಿಂತಲೂ ಶ್ರೇಷ್ಠನಾದುದರಿಂದ ಸುಮಹಾ ಎಂದೂ, ಸಾವಿರ ಕಾಲುಗಳುಳ್ಳವನಾದುದರಿಂದ, ಸಹಸ್ರಪಾತ್ ಎಂದೂ, ಸಾವಿರ ಕಣ್ಣುಗಳುಳ್ಳವ ನಾದುದರಿಂದ, ಸಹಸ್ರ ಚಕ್ಷುವೆಂದೂ, ಸಾವಿರ ಮುಖಗಳುಳ್ಳವನಾದ್ದರಿಂದ, ಸಹಸ್ರ ವದನನೆಂದೂ, ಸಹಸ್ರಭೋಗವುಳ್ಳವನಾದುದರಿಂದ ಸಹಸ್ರಭುಕ್ ಎಂದೂ, ಸಾವಿರ ತೋಳುಳ್ಳವನಾದುದರಿಂದ, ಸಹಸ್ರಬಾಹುವೆಂದೂ, ಎಲ್ಲರಿಗಿಂತಲೂ ಮೊದಲೇ ಇವನು ಇದ್ದುದರಿಂದ ಪ್ರಥಮನೆಂದೂ, ಸ್ಥಾವರಜಂಗಮಾತ್ಮಕವಾದ ಸಕಲ ಪ್ರಪಂಚ ವನ್ನೂ ಸೃಷ್ಟಿ, ಸ್ಥಿತಿ, ಲಯ, ಗೊಳಿಸುವುದರಿಂದ ಪ್ರಜಾಪತಿಯೆಂದೂ, ಸೂರ್ಯ ಎಂಬ ಹೆಸರಿನ ತೇಜಸ್ಸಿನಿಂದ ಕೂಡಿರುವುದರಿಂದ ಸೂರ್ಯನೆಂದೂ ಹಿಂದಿನವರೆಲ್ಲರೂ ಸ್ತುತಿಸುವರು.

೨೪. ಸಕಲ ಪ್ರಪಂಚವನ್ನೂ ರಕ್ಷಣೆಮಾಡುವ, ಅಪೂರ್ವನೂ ಅಂದರೆ ಅನಾದಿಯೂ, ಅದ್ವಿತೀಯನೂ, ಪುರಾಣಪುರುಷನೂ, ಹಿರಣ್ಯಗರ್ಭನೂ, ಮಹಾ ಪುರುಷನೆನಿಸಿದವನೂ, ಆದ ಸೂರ್ಯಪರಮಾತ್ಮನು ತಮೋಗುಣವನ್ನಾಶ್ರಯಿಸಿ ಪ್ರಳಯವನ್ನುಂಟುಮಾಡಿದ ಮೇಲೆ ಪುನಃ ಪ್ರಪಂಚವನ್ನು ಸೃಷ್ಟಿಮಾಡಲಪೇಕ್ಷಿಸು ವನು, ಆದರೆ ಅವನು ತಮಸ್ಸಿಗಿಂತ ಬೇರೆಯಾದವನು.

೨೫. ಹೀಗೆ ತಮೋರೂಪವಾಗಿ ಸಾವಿರ ಯುಗಗಳು ಪ್ರಳಯರೂಪವಾಗಿ ಕಳೆದಮೇಲೆ ಈ ಸೂರ್ಯಪರಮಾತ್ಮನು ಮತ್ತೆ ಸೃಷ್ಟಿಗೋಸುಗ ಬ್ರಹ್ಮನೆನಿಸುವನು.

**ಸಲಿಲೇನಾಪ್ಲುತಾಂ ಭೂಮಿಂ ದೃಷ್ಟ್ವಾ ಕಾರ್ಯಂ ವಿಚಿಂತ್ಯ ಸಃ ।**
**ಭೂತ್ವಾ ವೈ ಸ ತು ವಾರಾಹೋ ಹ್ಯಪಃ ಸಂವಿಶತೇ ಪ್ರಭುಃ ॥ ೨೬ ॥**

**ಸಂಚಿಂತ್ಯೈವಂ ಚ ದೇವೋಽಸೌ ಭೂಮೇರುದ್ಧರಣಕ್ಷಮಃ ।**
**ಮಹೀಂ ಮಹಾರ್ಣವೇ ಮಗ್ನಾಮುದ್ಧರ್ತುಮುಪಚಕ್ರಮೇ ॥ ೨೭ ॥**

**ಉತ್ತಿಷ್ಠತಸ್ತಸ್ಯ ಜಲಾರ್ದ್ರಕುಕ್ಷೇಃ ಮಹಾವರಾಹಸ್ಯ ಮಹೀಂ ನಿಧಾಯ ।**
**ವಿಧುನ್ವತೋ ವೇದಮಯಂ ಶರೀರಂ ಲೋಮಾಂತರಸ್ಥಾ ಮುನಯೋ ಜಪಂತಿ ॥ ೨೮ ॥**

**ಉದ್ಧೃತ್ಯ ಚೋರ್ವೀಂ ಸಲಿಲಾತ್ಪ್ರಜಾಸರ್ಗಮಕಲ್ಪಯತ್ ।**
**ವಿಸೃಜನ್ಮಾನಸಾನ್ಪುತ್ರಾನಾತ್ಮನಸ್ತೇಜಸಾ ಸಮಾನ್ ॥ ೨೯ ॥**

---

೨೬. ಅನಂತರ ಪ್ರಳಯದಲ್ಲಿ ಭೂಮಿಯೆಲ್ಲಾ ನೀರಿನಲ್ಲಿ ಮುಳುಗಿ ಹೋಗಿರುವುದರಿಂದ ಪ್ರಜಾಸೃಷ್ಟಿಗೆ ಆಧಾರಭೂತವಾದ, ಅದನ್ನು ಮೊದಲು ಉದ್ಧಾರಮಾಡಲೋಸುಗ, ಹಂದಿಯ ರೂಪವನ್ನು ಧರಿಸಿ, (ವರಾಹಾವತಾರಮಾಡಿ) ನೀರಿನಲ್ಲಿ ಮುಳುಗುತ್ತಾನೆ.

೨೭. ಸರ್ವಸಮರ್ಥನಾದ ಈ ಸೂರ್ಯಪರಮಾತ್ಮನು ಹಿಂದೆ ಹೇಳಿದಂತೆ ವರಾಹ ರೂಪವನ್ನು ಧರಿಸಿ ಮಹಾಸಮುದ್ರದಲ್ಲಿ ಮುಳುಗಿರುವ ಭೂಮಿಯನ್ನು ಮೇಲಕ್ಕೆತ್ತಲು ಪ್ರಾರಂಭಮಾಡಿದನು.

೨೮. ಅನಂತರ ನೀರಿನಿಂದ ತೊಯ್ದಿರುವ ಶರೀರವುಳ್ಳವನಾಗಿ ಮೇಲಕ್ಕೆ ಭೂಮಿಯನ್ನು ಹಿಡಿದುಕೊಂಡು ಬರುತ್ತಿರುವ ವರಾಹರೂಪಿಯಾದ ಪರಮಾತ್ಮನು ವೇದ ಸ್ವರೂಪವಾದ ತನ್ನ ಮೈಯನ್ನು ಕೊಡವಲು, ಆ ಪರಮಾತ್ಮನ ರೋಮಗಳಲ್ಲಿ ಮುನಿಗಳು ವಾಸಿಸುತ್ತಾ ವೇದವನ್ನು ಜಪಿಸುತ್ತಿದ್ದರು.

೨೯-೩೧. ಭೂಮಿಯನ್ನು ನೀರಿನಿಂದ ಮೇಲಕ್ಕೆತ್ತಿದ ನಂತರ ಆ ಪರಮಾತ್ಮನು ತನ್ನ ಅಂಶಗಳಿಂದ ಕೂಡಿದ ಭೃಗು, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು,

ಭೃಗ್ವಂಗಿರಸಮತ್ರಿಂ ಚ ಪುಲಸ್ತ್ಯಂ ಪುಲಹಂ ಕ್ರತುಂ ।
ಮರೀಚಿಮಥ ದಕ್ಷಂ ಚ ವಸಿಷ್ಠಂ ನವಮಂ ತಥಾ ॥ ೩೦ ॥

ನವ ಪ್ರಜಾಪತೀನ್ ಸೃಷ್ಟ್ವಾ ತತಃ ಸ ಪುರುಷೋತ್ತಮಃ ।
ಪ್ರಾದುರ್ಭೂತೋಽದಿತೇಃ ಪುತ್ರಃ ಪ್ರಜಾನಾಂ ಹಿತಕಾಮ್ಯಯಾ ॥ ೩೧ ॥

ಮರೀಚಿಃ ಕಶ್ಯಪಂ ಪುತ್ರಂ ನಾವಿನ್ಯೈಜನಯಜ್ಜಲೇ ।
ಪ್ರಜಾಪತೀನಾಂ ದಶಮಂ ತೇಜಸಾ ಬ್ರಹ್ಮಣಾ ಸಮಂ ॥ ೩೨ ॥

ದಕ್ಷಕನ್ಯಾಽದಿತಿರ್ನಾಮ್ನಾ ಪತ್ನೀ ಸಾ ಕಶ್ಯಪಸ್ಯ ತು ।
ಅಂಡಂ ಸಾ ಜನಯಾಮಾಸ ಭೂನಭಸ್ತಲವಿಸ್ತರಂ ॥ ೩೩ ॥

ತತೋತ್ಪನ್ನಸ್ಸಹಸ್ರಾಂಶುರ್ದ್ವಾದಶಾತ್ಮಾ ದಿವಾಕರಃ ।
ನವ ಯೋಜನಸಾಹಸ್ರೋ ವಿಸ್ತಾರಸ್ತಸ್ಯ ವೈ ಸ್ಮೃತಃ ॥ ೩೪ ॥

---

ಮರೀಚಿ, ದಕ್ಷ, ವಸಿಸ್ಠ ಈ ಒಂಭತ್ತು ಮಾನಸ ಪುತ್ರರನ್ನು ಸೃಷ್ಟಿಮಾಡಿದನು. ಆ ಮೇಲೆ ಆ ಒಂಭತ್ತು ಜನರೂ ಪ್ರಜಾಸೃಷ್ಟಿಯನ್ನು ಮಾಡಿದರು. ಅನಂತರ ಪರಮಾತ್ಮನು ಈ ರೀತಿ ಸೃಷ್ಟಿಹೊಂದಿದ ಪ್ರಜೆಗಳನ್ನು ಕಾಪಾಡುವುದಕ್ಕೂ ಅವರು ಗಳಿಗೆ ಹಿತೋಪದೇಶ ಮಾಡುವುದಕ್ಕೂ ಸಹ ಅದಿತೀದೇವಿಗೆ ಪುತ್ರನಾಗಿ ಹುಟ್ಟಿದನು.

೩೨. ಮರೀಚಿ ಬ್ರಹ್ಮನು, ನೀರಿನಲ್ಲಿ ಕಶ್ಯಪನೆಂಬ ಹೆಸರುಳ್ಳ ಪುತ್ರನನ್ನು ಸೃಷ್ಟಿಸಿದನು. ಇವನು ತೇಜಸ್ಸಿನಲ್ಲಿ ಬ್ರಹ್ಮನಿಗೆ ಸಮಾನವಾದವನಾಗಿ, ಹತ್ತನೆಯ ಬ್ರಹ್ಮನೆನಿಸಿದನು.

೩೩. ದಕ್ಷಬ್ರಹ್ಮನ ಮಗಳಾದ ಅದಿತಿಯೇ ಕಶ್ಯಪನ ಹೆಂಡತಿ. ಕಶ್ಯಪನು ಇವಳಲ್ಲಿ ಭೂಮ್ಯಂತರಿಕ್ಷಗಳಷ್ಟು ವಿಸ್ತಾರವಾದ ಬ್ರಹ್ಮಾಂಡವನ್ನು ಸೃಷ್ಟಿಮಾಡಿದನು.

೩೪. ಆ ಅಂಡದಲ್ಲಿ ಸಹಸ್ರ ಕಿರಣಗಳುಳ್ಳ ದ್ವಾದಶಮೂರ್ತಿ ಸ್ವರೂಪನಾದ ಸೂರ್ಯನು ಹುಟ್ಟಿದನು. ಆ ಸೂರ್ಯನ ವಿಸ್ತಾರವು ಒಂಭತ್ತುಸಾವಿರ ಯೋಜನಗಳು. (9000) ಅವನ ಮಂಡಲದ ವಿಸ್ತಾರವು ಅಂದರೆ ಪರಿಧಿಯು ಇದರ ಮೂರರಷ್ಟು ಎಂದರೆ (27000) ಇಪ್ಪತ್ತೇಳು ಸಾವಿರ ಯೋಜನಗಳು.

ವಿಸ್ತಾರಸ್ತ್ರಿಗುಣಶ್ಚಾಸ್ಯ ಪರಿಣಾಹಸ್ತು ಮಂಡಲೀ ।
ಯಥಾ ಪುಷ್ಪಂ ಕದಂಬಸ್ಯ ಸಮಂತಾತ್ಕೇಸರೈರ್ವೃತಂ ।
ತಥೈವ ತೈಜಸಂ ಗೋಲಂ ಸಮಂತಾದ್ರಶ್ಮಿಭಿರ್ವೃತಮ್ ॥ ೩೫ ॥

ಸಹಸ್ರಶೀರ್ಷಾ ಪುರುಷಃ ಪ್ರಾಙ್ಮಯಾಯ ಉದಾಹೃತಃ ।
ತೈಜಸಸ್ತಸ್ಯ ಗೋಲಸ್ಯ ಸ ತು ಮಧ್ಯೇ ವ್ಯವಸ್ಥಿತಃ ॥ ೩೬ ॥

ಆದಿತ್ಯಸ್ಸ ತಪತ್ಯೇಷ ನಿಯನ್ನಾಪ್ತೋಗಭಸ್ತಿಭಿಃ ।
ಸಹಸ್ರಪಾದಸ್ತ್ವೇಷೋಽಗ್ನಿರ್ವೃತ್ತಂ ಕುಂಭನಿಭಃ ಸ್ಮೃತಃ ॥ ೩೭ ॥

ಆದತ್ತೇ ಸಾ ತು ರಶ್ಮೀನಾಂ ಸಹಸ್ರೇಣ ಸಮಂತತಃ ।
ಆಪೋ ನದೀಸಮುದ್ರೇಭ್ಯೋ ಹ್ರದಕೂಪೇಭ್ಯ ಏವ ಚ ॥ ೩೮ ॥

ಪ್ರಭಾ ಸೌರೀತಿ ಪಾದೇನ ಹ್ಯಸ್ತಂ ಯಾತಿ ದಿವಾಕರೇ ।
ಅಗ್ನಿಮಾವಿಶತೇ ರಾತ್ರೌ ತಸ್ಮಾದ್ದೂರಾತ್ಪ್ರಕಾಶ್ಯತೇ ॥ ೩೯ ॥

---

೩೫. ನೀಪ ಪುಷ್ಪವು ಕೇಸರ (ದಳ) ಗಳಿಂದಾವರಿಸಿರುವಂತೆ, ತೇಜಃಸ್ವರೂಪವಾದ ಈ ಗೋಳವು ಸುತ್ತಲೂ ಕಿರಣಗಳಿಂದ ಕೂಡಿ ಹೊಳೆಯುತ್ತಿದೆ.

೩೬. ನಿಮಗೆ ನಾನು ಹಿಂದೆ ಹೇಳಿದ ಸಾವಿರ ತಲೆಗಳುಳ್ಳ ಪರಮ ಪುರುಷನು, ತೇಜಸ್ವರೂಪವಾದ ಆ ಗೋಳದ ಮಧ್ಯದಲ್ಲಿರುವನು.

೩೭. ಈ ಸೂರ್ಯನು ತನ್ನ ಕಿರಣಗಳಿಂದ ಅಂತರಿಕ್ಷದಲ್ಲಿರುವ ಜಲವನ್ನು ಸುಡುವಂತೆ ಮಾಡುವನು. ಸಹಸ್ರ ಪಾದವುಳ್ಳ ಇವನೇ ಅಗ್ನಿಯೆಂದೂ, ಅಗ್ನಿಯು ಮಂಕಾಗಿರುವ ಗಡಿಗೆಗೆ ಸಮಾನನೆಂದೂ ಹೇಳುವರು.

೩೮. ಈ ಸೂರ್ಯನು ತನ್ನ ಸಾವಿರ ಕಿರಣಗಳಿಂದಲೂ ಎಲ್ಲ ಕಡೆಯಲ್ಲಿಯೂ ಅಂದರೆ ನದಿಗಳು, ಸಮುದ್ರಗಳು, ಹಳ್ಳ ಕೊಳ್ಳಗಳು, ಮತ್ತು ಭೂಮಿಗಳು, ಇವುಗಳಿಂದ ನೀರನ್ನಾಕರ್ಷಣೆ ಮಾಡುತ್ತಾನೆ.

೩೯. ಸೂರ್ಯನು ಮುಳುಗುತ್ತಿರುವಾಗ ಪ್ರಭೆಯೆಂಬ ಕಿರಣವು ಅಗ್ನಿಯನ್ನು ಪ್ರವೇಶಿಸಿ ರಾತ್ರಿಯಲ್ಲಿ, ಆಮೂಲಕ ಪ್ರಕಾಶವನ್ನುಂಟುಮಾಡುವುದು.

ಉದಿತೇ ಚ ಪುನಃ ಸೂರ್ಯೇ ಚೌಷ್ಣ್ಯಮಾಗ್ನೇಯಮಾವಿಶತ್ ।
ಪಾದೇನ ತೇಜಸಶ್ಚಾಗ್ನೇಃ ತಥಾ ತತ್ತಪತೇ ದಿವಾ ॥ ೪೦ ॥

ಪ್ರಕಾಶ್ಯಂ ಚ ತಥೌಷ್ಣ್ಯಂ ಚ ಸೂರ್ಯಾಗ್ನ್ಯೋರ್ಯೇ ಚ ತೇಜಸೀ ।
ಪರಸ್ಪರಾನುಪ್ರವೇಶಾದಾಖ್ಯಾ ಯೇ ತೇ ದಿವಾನಿಶಮ್ ॥ ೪೧ ॥

॥ ನಾರದ ಉವಾಚ ॥

ವ್ಯಾಪಕತ್ವಂ ಚ ರಶ್ಮೀನಾಂ ನಾಮಾನಿ ಚ ನಿಬೋಧ ಮೇ ।
ಹೇತಯಃ ಕಿರಣಾ ಗಾವೋ ರಶ್ಮಯೋಽಥ ಗಭಸ್ತಯಃ ॥ ೪೨ ॥

ಅಭೀಷವೋವನಾನ್ಯುಸ್ರಾಃ ಘೃಣಯೋಽಥ ಮರೀಚಯಃ ।
ನಾಡ್ಯೋ ದೀಧಿತಯಸ್ಸಾಧ್ಯಾ ಮಯೂಖಾ ಭಾನವೋಂಶವಃ ॥ ೪೩ ॥

ಸಪ್ತರ್ಷಯಃ ಸುಪರ್ಣಾಶ್ಚ ಕರಾಃ ಪಾದಾಸ್ತಥೈವ ಚ ।
ಏವಂ ನಾಮ್ನಾಂ ತು ಪರ್ಯಾಯಾಃ ರಶ್ಮೀನಾಂ ವಿಂಶತಿಃ ಸ್ಮೃತಾಃ ॥೪೪॥

---

೪೦. ಸೂರ್ಯನು ಉದಯಿಸಿದನಂತರ ಅಗ್ನಿಯಲ್ಲಿರುವ ಆ ಕಿರಣವು ಸೂರ್ಯನನ್ನು ಪ್ರವೇಶಿಸುವುದು. ಇದರಿಂದ ಪುನಃ ಹಾಗೆಯೇ ಹಗಲೆಲ್ಲಾ ತೇಜಃ ಕಿರಣದಿಂದ ಜಗತ್ತನ್ನು ಸುಡುತ್ತಾನೆ.

೪೧. ಈ ರೀತಿ ಸೂರ್ಯನ ಪ್ರಕಾಶವುಂಟುಮಾಡುವ ಮತ್ತು ಅಗ್ನಿಯ ಸುಡುವ ಸ್ವಭಾವವುಳ್ಳ ತೇಜಸ್ಸುಗಳೂ ಪರಸ್ಪರ ಒಂದನ್ನೊಂದು ಪ್ರವೇಶಿಸುವುದರಿಂದ ಹಗಲು ರಾತ್ರಿಗಳಾಗಲು ಕಾರಣವಾಯಿತು.

೪೨-೪೪. ನಾರದನು ಸಾಂಬನನ್ನು ಕುರಿತು, "ಇನ್ನು ಮುಂದೆ ಆ ಸೂರ್ಯನ ಕಿರಣಗಳ ವ್ಯಾಪಕತ್ವವನ್ನು ಹೇಳುವೆನು ಕೇಳು" ಎಂದು ಇಂತೆಂದನು. ಹೇತಯಃ ಕಿರಣಾಃ, ಗಾವಃ, ರಶ್ಮಯಃ, ಗಭಸ್ತಯಃ, ಅಭೀಷವಃ, ವನಾನಿ, ಉಸ್ರಾಃ, ಘೃಣಯಃ, ಮರೀಚಯಃ, ನಾಡ್ಯಃ, ದೀಧಿತಯಃ, ಸಾಧ್ಯಾಃ, ಮಯೂಖಾಃ, ಭಾನವಃ, ಅಂಶವಃ, ಸಪ್ತರ್ಷಯಃ, ಸುಪರ್ಣಾಃ, ಕರಾಃ, ಪಾದಾಃ, ಈ ರೀತಿ ಸೂರ್ಯನ ಕಿರಣಗಳಿಗೆ ಇಪ್ಪತ್ತು ಹೆಸರುಗಳಿವೆ.

ವಂದನಾದೀನಿ ವಂದ್ಯಾನಿ ನಾಮಾನ್ಯೇಷಾಂ ಪೃಥಕ್ ಪೃಥಕ್ ।
ರವೇಃ ಕರಸಹಸ್ರಂ ತು ಶೀತವರ್ಷೋಷ್ಣಭಿಸ್ತಪನ್ ॥ ೪೫ ॥

ತಾಸಾಂ ಚತುಃಶತಂ ನಾಡ್ಯೋ ವರ್ಷಂತೇಽಚಾತ್ಯಮೂರ್ತಯಃ ।
ವಂದನಾಶ್ಚೈವ ಮೇಧ್ಯಾಶ್ಚ ಕಾತನಾಕೇತನಾಸ್ತಥಾ ॥ ೪೬ ॥

ಅಮೃತಾನಾಮತಃ ಸರ್ವಾ ರಶ್ಮಯೋ ವೃಷ್ಟಿಸರ್ಜನಾಃ ।
ಹಿಮಾವಹಾಸ್ತು ತ್ರಿಂಶದ್ವೈ ತಾಭ್ಯೋಽನ್ಯಾ ರಶ್ಮಯಃ ಸ್ಮೃತಾಃ ॥ ೪೭ ॥

ಚಂದ್ರಾಸ್ತಾ ನಾಮತಃ ಸರ್ವಾಃ ಪೀತಾಭಾಸ್ತು ಗಭಸ್ತಯಃ ।
ರಶ್ಮಯೋ ಮೇಘಪೌಷ್ಣ್ಯಶ್ಚ ಹ್ಲಾದಿನ್ಯೋ ಹಿಮಸರ್ಜನಾಃ ॥ ೪೮ ॥

ಸಮ್ಯಗ್ಬಿಭ್ರತಿ ತಾಃ ಸರ್ವಾ ಮನುಷ್ಯಾನ್ ದೇವತಾಃ ಪಿತೄನ್ ।
ಮನುಷ್ಯಾನೋಷಧೀಭಿಸ್ತು ಸ್ವಧಯಾ ಚ ಪಿತೄನಪಿ ॥ ೪೯ ॥

---

೪೫. ಈ ಸೂರ್ಯಪರಮಾತ್ಮನ ಹೆಸರುಗಳು ಪ್ರತ್ಯೇಕವಾಗಿ ಹೀಗೆ ಇವೆ. ಸೂರ್ಯನ ಸಾವಿರ ಕಿರಣಗಳೂ, ಛಳಿ, ಮಳೆ, ಸೆಖೆ ಇವುಗಳಿಂದ ತಾಪವನ್ನುಂಟುಮಾಡುತ್ತವೆ.

೪೬. ಈ ಸಾವಿರ ಕಿರಣಗಳಲ್ಲಿ ನಾನೂರು (400) ಕಿರಣಗಳು ಅಚಿಂತ್ಯ ಸ್ವರೂಪಗಳೆನಿಸಿ ಮಳೆಯನ್ನು ಸುರಿಸುತ್ತವೆ. ಇವುಗಳೂ, ನಮಸ್ಕಾರಕ್ಕೆ ಯೋಗ್ಯವಾದವುಗಳು ಮತ್ತು ಪರಿಶುದ್ಧ ಸ್ವಭಾವದವುಗಳು; ಕಾತನಾ, ಕೇತನಾ ಮತ್ತು;

ಅಮೃತಾ ಎಂಬ ಹೆಸರುಗಳಿಂದ. ಈ ನಾನೂರು ಕಿರಣಗಳು ಮಳೆಯನ್ನು ಸುರಿಸುವುವು.

೪೭-೪೮. ಮೂವತ್ತು (30) ಕಿರಣಗಳು ಮಾತ್ರ ಹಿಮವನ್ನು ಧರಿಸುತ್ತವೆ. ಆ ಕಿರಣಗಳಿಗೆ ಚಂದ್ರಕಿರಣಗಳೆಂದು ಹೆಸರಿದೆ. ಅವು ಹೊಂಬಣ್ಣವನ್ನು ಹೊಂದಿರುವುವು. ಮೇಘ ಮತ್ತು ಪೌಷ್ಣ್ಯ ಎಂಬ ಕಿರಣಗಳು ಲೋಕಕ್ಕೆ ಆನಂದವನ್ನುಂಟುಮಾಡುತ್ತಾ ಹಿಮವನ್ನು ಸೃಷ್ಟಿಮಾಡುವುವು.

೪೯. ಆ ಕಿರಣಗಳು, ಮನುಷ್ಯ, ದೇವತೆ, ಪಿತೃಗಳು ಇವರೆಲ್ಲರನ್ನೂ, ಚೆನ್ನಾಗಿ ತನ್ನ ಶಕ್ತಿಯಿಂದ ಧರಿಸುವುವು. ಅವುಗಳಲ್ಲಿ ಮನುಷ್ಯರನ್ನು ಜ್ಯೋತಿರ್ಲತೆಗಳಿಂದಲೂ, ಪಿತೃಗಳನ್ನು ಸ್ವಧಾ ತರ್ಪಣಾದಿಗಳಿಂದಲೂ, ದೇವತೆಗಳನ್ನು ಅಮೃತದಿಂದಲೂ, ಸಹ ಮೂರು ಪದಾರ್ಥಗಳಿಂದ, ಮೂವರನ್ನೂ ಸಂತೋಷಗೊಳಿಸುತ್ತವೆ.

**ಅಮೃತೇನ ಸುರಾನ್ಸರ್ವಾನ್ ತ್ರಯಸ್ತ್ರಿಭಿರತರ್ಪಯತ್ ।**
**ವಸಂತೇ ಚೈವ ಗ್ರೀಷ್ಮೇ ಚ ಶತೈಃ ಪ್ರತಪತಿ ತ್ರಿಭಿಃ ॥ ೫೦ ॥**

**ಶರತ್ಸು ಚೈವ ವರ್ಷಾಸು ಚತುರ್ಭಿಃ ಸಂಪ್ರವರ್ಷತಿ ।**
**ಹೇಮಂತೇ ಶಿಶಿರೇ ಚೈವ ಹಿಮೋತ್ಸರ್ಗಂ ತ್ರಿಭಿಃ ಪುನಃ ॥ ೫೧ ॥**

**ಓಷಧೀಷು ಬಲಂ ಧತ್ತೇ ಸ್ವಧಾಯಾಂ ಚ ಸ್ವಧೀಪುನಃ ।**
**ಸೂರ್ಯೋಽಮೃತೇ ಚಾವಭೃತಂ ತ್ರಯಂ ತ್ರಿಷು ನಿಯಚ್ಛತಿ ॥ ೫೨ ॥**

**ಕಾಲೇಽಗ್ನಿರ್ಬ್ರಹ್ಮಣಶ್ಚೈವ ದ್ವಾದಶಾತ್ಮಾ ಪ್ರಜಾಪತಿಃ ।**
**ತಪತ್ಯೇಷ ಸುರಶ್ರೇಷ್ಠಸ್ತ್ರೀನ್ಲ್ಲೋಕಾನ್ಸಚರಾಚರಾನ್ ॥ ೫೩ ॥**

**ಏಷ ಬ್ರಹ್ಮಾ ಚ ವಿಷ್ಣುಶ್ಚ ಏಷ ಏವ ಮಹೇಶ್ವರಃ ।**
**ಋಚೋ ಯಜೂಂಷಿ ಸಾಮಾನಿ ಹ್ಯೇಷ ಏವ ನ ಸಂಶಯಃ ॥ ೫೪ ॥**

---

೫೦. ವಸಂತ ಮತ್ತು ಗ್ರೀಷ್ಮ ಋತುವಿನಲ್ಲಿ ಮುನ್ನೂರು [300] ಕಿರಣಗಳಿಂದ ಪ್ರಪಂಚವನ್ನು ತಾಪಗೊಳಿಸುವನು. ಅಂದರೆ ಹೆಚ್ಚು ಬಿಸಿಲಿನಿಂದ ಜನರು ತಾಪಗೊಳ್ಳುವರು .

೫೧. ಶರದೃತು ವರ್ಷರ್ತುಗಳಲ್ಲಿ ನಾಲ್ಕು ಕಿರಣಗಳಿಂದ ಮಳೆಯನ್ನು ಸುರಿಸುತ್ತಾನೆ. ಹೇಮಂತ ಮತ್ತು ಶಿಶಿರ ಋತುಗಳಲ್ಲಿ ಮೂರೇ ಕಿರಣಗಳಿಂದ ಮಂಜನ್ನು ಉಂಟು ಮಾಡುತ್ತಾನೆ.

೫೨. ಈ ಸೂರ್ಯ ಭಗವಂತನು ವನಸ್ಪತಿಗಳಲ್ಲಿ ಬಲವನ್ನೂ, ಸ್ವಧೆಯಲ್ಲಿ ಸ್ವಧೆಯನ್ನೂ, ಅಮೃತದಲ್ಲಿ ಅವಭೃತವನ್ನೂ, ಕ್ರಮವಾಗಿ ಮೂರರಲ್ಲಿ ಮೂರು ಪದಾರ್ಥಗಳನ್ನು ಪ್ರಜಾ ಪೋಷಣೆಗಾಗಿ ನಿಯಮಿಸಿರುವನು.

೫೩. ದ್ವಾದಶ ಮೂರ್ತಿಸ್ವರೂಪನೂ, ಪ್ರಜೆಗಳಿಗೊಡೆಯನೂ, ಅಗ್ನಿ ಸ್ವರೂಪನೂ ಆದ ಈ ಸೂರ್ಯನು ಆಯಾಯ ಕಾಲದಲ್ಲಿ ಬ್ರಹ್ಮನನ್ನೂ ಮತ್ತು ಸ್ಥಾವರ ಜಂಗಮಾತ್ಮಕವಾದ ಮೂರು ಲೋಕಗಳನ್ನೂ ಸಹ ತಾಪಗೊಳಿಸುವನು .

೫೪. ಈ ಸೂರ್ಯನೇ ಬ್ರಹ್ಮ ವಿಷ್ಣು ಮಹೇಶ್ವರ ಸ್ವರೂಪನು ; ಋಗ್ಯಜುಸ್ಸಾಮವೇದಗಳೂ ಇವನೇ ; ಇದ್ದರಲ್ಲಿ ಸಂದೇಹವೇ ಇಲ್ಲ.

ಉದ್ಯನ್ಸಂದೀಪ್ಯತೇ ಋಗ್ಭಿಃ ಮಧ್ಯಾಹ್ನೇ ಯಜುಭಿಸ್ತಥಾ ।
ಸಾಮಭಿಶ್ಚಾಪಿ ಸಾಯಾಹ್ನೇ ದೀಪ್ಯತೇ ಭಾಸ್ಕರಃ ಕ್ರಮಾತ್ ॥ ೫೫ ॥

ಸ ಏಷ ತೇಜಸೋ ರಾಶಿರ್ದೀಪ್ತಿಮಾನ್ಸಾರ್ವಲೌಕಿಕಃ ।
ಪಾರ್ಶ್ವೇ ನೋರ್ಧ್ವಮಧಶ್ಚೈವ ಪ್ರತಪತ್ಯೇಷ ಸರ್ವತಃ ॥ ೫೬ ॥

ಯಥಾ ಪ್ರಭಾಕರೋ ದೀಪೋ ಗೃಹಮಧ್ಯೇ ವ್ಯವಸ್ಥಿತಃ ।
ಪಾರ್ಶ್ವೇ ನೋರ್ಧ್ವಮಧಶ್ಚೈವ ತಮೋ ನಾಶಯತೇ ಸಮಮ್ ॥ ೫೭ ॥

ತದ್ವತ್ಸಹಸ್ರಕಿರಣೋ ಗ್ರಹರಾಜೋ ಜಗತ್ಪತಿಃ ।
ತ್ರೀಣಿ ರಶ್ಮಿಶತಾನ್ಯಸ್ಯ ಭೂರ್ಲೋಕಂ ದ್ಯೋತಯಂತಿ ಚ ॥ ೫೮ ॥

---

೫೫. ಈ ಭಾಸ್ಕರನು ಉದಯಿಸುವಾಗ ಋಗ್ವೇದದಿಂದಲೂ, ಮಧ್ಯಾಹ್ನ ಸಮಯದಲ್ಲಿ ಯಜುರ್ವೇದದಿಂದಲೂ, ಸಾಯಂಕಾಲದಲ್ಲಿ ಸಾಮ ವೇದದಿಂದಲೂ, ಕ್ರಮವಾಗಿ ಬೆಳಗುತ್ತಾನೆ.

೫೬. ತೇಜೋರಾಶಿಯೂ, ಹೊಳೆಯುವ ಸ್ವಭಾವದವನೂ, ಆದ ಸೂರ್ಯನು ಎಲ್ಲಾ ಲೋಕಗಳಲ್ಲಿಯೂ ಕಾಣಿಸಿಕೊಳ್ಳುತ್ತ ಅಕ್ಕ ಪಕ್ಕಗಳಲ್ಲಿಯೂ, ಮೇಲು ಕೆಳ ಭಾಗಗಳಲ್ಲಿಯೂ ಮತ್ತು ಎಲ್ಲ ಕಡೆಯಲ್ಲಿಯೂ ಸಹ ಪ್ರಕಾಶಿಸುತ್ತಾನೆ.

೫೭-೫೮. ಮನೆಯ ಮಧ್ಯದಲ್ಲಿರಿಸಿರುವ ಹೆಚ್ಚು ಬೆಳಕುಳ್ಳ ದೀಪವು ಹೇಗೆ ಪಾರ್ಶ್ವ, ಮೇಲುಭಾಗ, ಕೆಳಭಾಗ, ಮತ್ತು ಸುತ್ತಲೂ ಇರುವ, ಕತ್ತಲೆಯನ್ನು ನಾಶಮಾಡಿ, ತಾನು ಪ್ರಕಾಶಿಸುವುದೋ ಅದರಂತೆಯೇ, ಗ್ರಹರಾಜನೂ, ಜಗದೊಡೆಯನೂ ಆದ ಈ ಸಹಸ್ರ ಕಿರಣನು ಪ್ರಪಂಚದ ಅಂಧಕಾರವನ್ನು ನೀಗುತ್ತಾ ತನ್ನ ಮುನ್ನೂರು (300) ಕಿರಣಗಳಿಂದ ಭೂಲೋಕವನ್ನೂ, ನಾನೂರು (400) ಕಿರಣಗಳಿಂದ ಪಿತೃಲೋಕವನ್ನೂ, ಉಳಿದ ಮುನ್ನೂರು (300) ಕಿರಣಗಳಿಂದ ದೇವಲೋಕವನ್ನೂ ಪ್ರಕಾಶಪಡಿಸುವನು.

ಚತ್ವಾರಿ ತು ಪಿತ್ರ್ಯಾಂಸ್ತ್ರಿರ್ಯಕ್ ತ್ರೀಣ್ಯೇವೋರ್ಧ್ವಸುರಾಲಯಂ ।
ಇತ್ಯೇತನ್ಮಂಡಲಂ ಶುಕ್ಲಂ ಭಾಸ್ಕರಂ ಲೋಕಸಂಜ್ಞಿತಂ ॥ ೫೯ ॥

ನಕ್ಷತ್ರಗ್ರಹಸೋಮಾನಾಂ ಪ್ರತಿಷ್ಠಾ ಯೋನಿರೇವ ಚ ।
ಚಂದ್ರಾದ್ಯಾಶ್ಚ ಗ್ರಹಾಃ ಸರ್ವೇ ವಿಜ್ಞೇಯಾಃ ಸೂರ್ಯಸಂಭವಾಃ ॥ ೬೦ ॥

ರವೇಃ ಕರಸಹಸ್ರಂ ಯತ್ಪ್ರಾಙ್ಮಯಾ ಸಮುದಾಹೃತಂ ।
ತೇಷಾಂ ಶ್ರೇಷ್ಠಾಃ ಶುಭಾಃ ಸಪ್ತ ರಶ್ಮಯೋ ಗ್ರಹಯೋನಯಃ ॥ ೬೧ ॥

ಸುಷುಮ್ನೋ ಹರಿಕೇಶಶ್ಚ ವಿಶ್ವಕರ್ಮಾ ತಥೈವ ಚ ।
ವಿಶ್ವವ್ಯಚಾಃ ಪುನಶ್ಚಾನ್ಯಃ ಸಂಯದ್ವಸುರತಃ ಸ್ಮೃತಃ ॥ ೬೨ ॥
ಉದನ್ವಸುಃ ಪುನಶ್ಚಾನ್ಯಃ ಸ್ವರಾದನ್ಯಃ ಪ್ರಕೀರ್ತಿತಃ ॥ ೬೩ ॥

ಸುಷುಮ್ನಃ ಸೂರ್ಯರಶ್ಮಿರ್ಯಃ ಕ್ಷೀಣಂ ಶಶಿನಮೇಧತೇ ।
ಅಮೃತಂ ಸ್ಪರ್ಧಮಾನೇನ ಸಂಭೃತ್ಯೈಕೇನ ರಶ್ಮಿನಾ ॥ ೬೪ ॥

---

೫೯-೬೦. ಈರೀತಿ ಎಲೈ ಸಾಂಬನೆ, ನಿನಗೆ ಲೋಕಪ್ರಸಿದ್ಧವೂ, ಶುಕ್ಲ ವರ್ಣವುಳ್ಳದ್ದೂ ಆದ ಸೂರ್ಯಮಂಡಲ ಸ್ವರೂಪವನ್ನು ತಿಳಿಸಿದ್ದೇನೆ. ನಕ್ಷತ್ರ ಗ್ರಹಗಳೂ, ಚಂದ್ರ ಇವುಗಳಿಗೆ ಉತ್ಪತ್ತಿ ಸ್ಥಾನವಾಗಿರುವುದೂ ಈ ಸೂರ್ಯಬಿಂಬವೇ. ಚಂದ್ರಾದಿ ಸಕಲಗ್ರಹಗಳೂ ಸೂರ್ಯನಿಂದಲೇ ಹುಟ್ಟಿದವರು.

೬೧-೬೩. ನಾನು ಹಿಂದೆ ನಿನಗೆ ಹೇಳಿರುವ ಸೂರ್ಯನ ಸಹಸ್ರಕಿರಣಗಳಲ್ಲಿ ಸುಷುಮ್ನ, ಹರಿಕೇಶ, ವಿಶ್ವಕರ್ಮಾ, ವಿಶ್ವವ್ಯಚಾಃ, ಸಂಯದ್ವಸು, ಉದನ್ವಸು, ಸ್ವರಾಟ್ ಎಂಬ ಏಳು ಕಿರಣಗಳು ಶ್ರೇಷ್ಠವಾದವುಗಳು. ಇವುಗಳೇ ಗ್ರಹಗಳ ಉತ್ಪತ್ತಿಗೆ ಕಾರಣಭೂತವಾದವುಗಳು.

೬೪-೬೫. ಸುಷುಮ್ನವೆಂಬ ಸೂರ್ಯನ ಕಿರಣವು ಕ್ಷಯಿಸಿರುವ ಚಂದ್ರನನ್ನು ಅಭಿವೃದ್ಧಿಗೆ ತರುತ್ತದೆ. ಈ ಕಿರಣವು ಅಮೃತದೊಡನೆ ಸ್ಪರ್ಧಿಸುವುದು ಅಂದರೆ ಅಮೃತವು ಹೇಗೆ ಲೋಕಕ್ಕೆಲ್ಲಾ ಆನಂದವುಂಟುಮಾಡುವುದೋ ಅದರಂತೆ ಇದೂ ಮಾಡುವುದರಿಂದ ಅದರೊಡನೆ ಸ್ಪರ್ಧೆಯೆಂದು ಹೇಳಿದೆ. ಇದೊಂದೇ ಚಂದ್ರ

**ಆಪ್ಯಾಯಯನಾಚ್ಚ ಲೋಕಾನಾಂ ಆದಿತ್ಯಶ್ಚಂದ್ರತಿಗ್ಮತಃ ।**
**ಶುಕ್ಲತ್ವಾಮೃತಶೀತತ್ವೇ ದೀಪ್ತೌ ಚಾಹ್ಲಾದನೇಽಪಿ ಚ ॥ ೬೫ ॥**

**ಧಾತುಶ್ಚ ದೀಪ್ತಿಬಹ್ವರ್ಥ ಸ್ತೇನಾಸೌ ಚಂದ್ರ ಉಚ್ಯತೇ ।**
**ಸಂಯದ್ವಸು ಸ್ತು ಯೋ ರಶ್ಮಿರ್ಯೋನಿಃ ಸೋಽಂಗಾರಕಸ್ಯ ತು ॥ ೬೬ ॥**

**ದಕ್ಷಿಣೇ ವಿಶ್ವಕರ್ಮಾ ತು ರಶ್ಮಿರಾಪ್ಯಾಯತೇ ಬುಧಂ ।**
**ಉದಾವಸುಸ್ತು ಯೋ ರಶ್ಮಿರ್ಯೋನಿಸ್ಸ ತು ಬೃಹಸ್ಪತೇಃ ॥ ೬೭ ॥**

---

ನೊಡನೆ ಸೇರಿ ಪ್ರಪಂಚಕ್ಕೆ ಶುಕ್ಲಪಕ್ಷದಲ್ಲಿ ಆನಂದವನ್ನುಂಟುಮಾಡುವುದರಿಂದಲೂ ವಿಶೇಷವಾಗಿ ಪಿತೃ ದೇವತೆಗಳಿಗೆ ಕೃಷ್ಣಪಕ್ಷದಲ್ಲಿ ಆನಂದವನ್ನುಂಟುಮಾಡುವುದರಿಂದಲೂ ಆದಿತ್ಯನೆನಿಸುವನು. ದೇವತೆಗಳಿಗೆ ಅಮೃತವೇ ಆಹಾರ. ಅದು ಚಂದ್ರನೊಬ್ಬನಿಂದಲೇ ಸಾಧ್ಯ. ಚಂದ್ರನು ಅಮೃತಮಯನಾದುದರಿಂದಲೂ, ಕೃಷ್ಣಪಕ್ಷದಲ್ಲಿ ಆ ಚಂದ್ರನು ಕ್ಷಯಹೊಂದುವುದರಿಂದ ಅವನ ಕಿರಣಸಂಪರ್ಕವಿಲ್ಲದೇ ದೇವತೆಗಳೆಲ್ಲರೂ ಅಮೃತವಿಲ್ಲದೆ ಖಿನ್ನರಾಗಿರುತ್ತಾರೆ. ಆಗ ಸೂರ್ಯನ ಸುಷುಮ್ನಾ ರಶ್ಮಿಯು ಚಂದ್ರನಲ್ಲಿ ಸೇರಿ ಅವನನ್ನು ಅಭಿವೃದ್ಧಿಗೊಳಿಸುವುದು. ಹೀಗೆ ಆ ಕಿರಣವು ಎಲ್ಲರಿಗೂ ಆನಂದವುಂಟುಮಾಡಿದಂತಾಯಿತೆಂದು ತಿಳಿಯಬೇಕು.

ಈ ಚಂದ್ರನ ಕಿರಣದಲ್ಲಿ ಶುಭ್ರತ್ವವೂ, ಅಮೃತಮಯತ್ವವೂ, ಸಂತೋಷವುಂಟುಮಾಡುವಿಕೆಯೂ ಸಹ ಇರುತ್ತವೆ. ಚಂದ್ರಶಬ್ದವು, ಚದಿ ಆಹ್ಲಾದನೆ, ಎಂಬ ಧಾತುವಿನಿಂದಲೂ, ದೀಪ್ತ್ಯರ್ಥಕ ಧಾತುವಿನ ಸಂಸರ್ಗವೂ ಸಹ " ಧಾತೂನಾಂ ಅನೇಕಾರ್ಥತ್ವಾತ್ " ಎಂಬ ಮಾತಿನಂತೆ ಇರುವುದರಿಂದಲೂ ಪ್ರಕಾಶಗೊಳಿಸಿ ಆನಂದವುಂಟುಮಾಡುವ ಸಾಮರ್ಥ್ಯ ಚಂದ್ರನಿಗಿದೆ.

೬೬. ಸಂಯದ್ವಸುವೆಂಬ ಸೂರ್ಯನ ಕಿರಣವು, ಅಂಗಾರಕನಿಗೆ ಉತ್ಪತ್ತಿ ಸ್ಥಾನವು, ಎಂದು ತಿಳಿಯಬೇಕು.

೬೭ ದಕ್ಷಿಣ ದಿಕ್ಕಿನಲ್ಲಿ ವಿಶ್ವಕರ್ಮಾ ಎಂಬ ಸೂರ್ಯ ರಶ್ಮಿಯು ಬುಧನಿಗೆ ಸಂತೋಷವನ್ನುಂಟುಮಾಡುತ್ತದೆ. ಉದಾವಸುವೆಂಬ ಕಿರಣದಿಂದ ಬೃಹಸ್ಪತಿಯು ಜನಿಸಿರುವನು.

**ವಿಶ್ವವ್ಯಚಾಸ್ತು ಯಃ ಪಶ್ಚಾಚ್ಛುಕ್ರಯೋನಿಃ ಸ ವೈ ಸ್ಮೃತಃ ।**
**ಶನೈಶ್ಚರಂ ಪುನಶ್ಚಾಪಿ ರಶ್ಮಿರಾಪ್ಯಾಯತೇ ಸ್ವರಾಟ್ ॥ ೬೮ ॥**

**ಹರಿಕೇಶಸ್ತು ಯೋ ರಶ್ಮಿಸ್ತೇಜೋನಕ್ಷತ್ರಯೋಗಿನಃ ।**
**ನ ಕ್ಷೀಯಂತೇ ಯತಸ್ತಾನಿ ತೇಷಾಂ ನಕ್ಷತ್ರತಾ ತತಃ ॥ ೬೯ ॥**

**ಕ್ಷತ್ರಂ ವೀರ್ಯಂ ಬಲಂ ತೇಜಃ ಇತಿ ಚೈಕಾರ್ಥವಾಚಕಂ ।**
**ಸೂರ್ಯಃ ಕ್ಷತ್ರಮಥಾದತ್ತೇ ತೇಷಾಂ ನಕ್ಷತ್ರತಾ ಸ್ಮೃತಾ ॥ ೭೦ ॥**

---

೬೮. ಪಶ್ಚಿಮ ದಿಕ್ಕಿನಲ್ಲಿ ವಿಶ್ವವ್ಯಚಾ ಎಂಬ ಕಿರಣವು ಶುಕ್ರನ ಉತ್ಪತ್ತಿಗೆ ಕಾರಣಭೂತವಾಗುವುದು ಸ್ವರಾಡೆಂಬ ಕಿರಣವು ಶನೈಶ್ಚರನನ್ನು ಸಂತೋಷಗೊಳಿಸುವುದು. ಅಂದರೆ ಅವನ ಜನ್ಮಸ್ಥಾನನೆಂದೇ ತಿಳಿಯಬೇಕು.

೬೯. ಹರಿಕೇಶವೆಂಬ ಕಿರಣವು ತೇಜಸ್ವಿಗಳಾದ ನಕ್ಷತ್ರಗಳೊಡನೆ ಸಂಬಂಧ ಹೊಂದಿ ಅವುಗಳಿಗೆ ಕಾಂತಿಯನ್ನುಂಟುಮಾಡುವುದು. ಇವುಗಳು ನಾಶಹೊಂದದೇ ಇರುವುದರಿಂದ ನಕ್ಷತ್ರಗಳೆನಿಸಿವವು. (ನಕ್ಷರತಿ, ಇತಿ ನಕ್ಷತ್ರಂ.)

೭೦-೭೧. ಕ್ಷತ್ರ, ವೀರ್ಯ, ಬಲ, ತೇಜಸ್ಸು ಇವೆಲ್ಲವೂ ಒಂದೇ ಅರ್ಥವನ್ನು ಕೊಡತಕ್ಕವುಗಳು ಅಂದರೆ ಪರ್ಯಾಯ ಪದಗಳು. ಆಗ ಕ್ಷತ್ರಶಬ್ದಕ್ಕೆ ವೀರ್ಯವೆಂದು ಅರ್ಥವಾದಮೇಲೆ, " ನವಿದ್ಯತೇ ಕ್ಷತ್ರಂಯೇಷಾಂ " ಎಂದು ವಿಗ್ರಹವಾಕ್ಯ ಮಾಡಿದರೆ " ನಕ್ಷತ್ರಾಣಿ " ಎಂಬುದಕ್ಕೆ ಸ್ವತಂತ್ರಶಕ್ತಿ ಇಲ್ಲದವುಗಳೆಂದರ್ಥವಾಗುತ್ತದೆ. ಸೂರ್ಯನಶಕ್ತಿ ಇವುಗಳಲ್ಲಾವಿರ್ಭವಿಸಿ ಇವುಗಳನ್ನು ಶಕ್ತಿಯುತಗಳನ್ನಾಗಿ ಮಾಡುವುದರಿಂದ ಇವುಗಳಿಗೆ ನಕ್ಷತ್ರಗಳೆಂದು ಹೆಸರು ಬಂದಿತು.

ತಮ್ಮ ತಮ್ಮ ಪುಣ್ಯವಿಶೇಷಗಳಿಂದ ಈ ಲೋಕವನ್ನು ಮತ್ತು ಈ ಮನೆಯನ್ನೂ ಬಿಟ್ಟು ಉತ್ತಮವಾದ ಆ ಲೋಕವನ್ನು ಹೊಂದಿರುವುದರಿಂದಲೂ ಶುಭ್ರವಾಗಿರುವುದರಿಂದಲೂ ಸಹ ಇವುಗಳಿಗೆ ತಾರಕಗಳೆಂದು ಹೆಸರು ಬಂದಿದೆ. ಅಂದರೆ ಪುಣ್ಯಕರ್ಮಮಾಡಿದರೆ ಅದರ ಪ್ರಭಾವದಿಂದ ಉತ್ತಮಗತಿ ದೊರೆತು ನಕ್ಷತ್ರಪದವಿ

ಅಸ್ಮಾಲ್ಲೋಕಾದಮುಂ ಲೋಕಂ ತೀರ್ಣಾನಾಂ ಸುಕೃತೈಃ ಗೃಹಾತ್ ।
ತಾರಣಾತ್ತಾರಕಾಹ್ಯೇತಾಶ್ಶುಕ್ಲತ್ವಾಚ್ಚೈವ ತಾರಕಾಃ ॥ ೭೧ ॥

ಸೂರ್ಯಸ್ಯೈವಾಪದೋ ರಶ್ಮಿರ್ನಾಮ್ನಾ ವೃಷ್ಟಿಪತಿಃ ಸ್ಮೃತಃ ।
ಸಮತ್ವಪ್ರತಿಬದ್ಧಸ್ತು ಸ ಜೀವಯತಿ ವೈ ಜಗತ್ ॥ ೭೨ ॥

ಇತಿ ಶ್ರೀ ಸಾಂಬಪುರಾಣೇ ಸರ್ವವ್ಯಾಪಿತ್ವನಿರೂಪಣಂ
ನಾಮ ಸಪ್ತಮೋಽಧ್ಯಾಯಃ.

---

ದೊರೆಯುವುದು ಹಿಂದಿನ ಸಂಪ್ರದಾಯವಾಗಿದೆ ಉದಾಹರಣೆಗಾಗಿ ಧ್ರುವ ನಕ್ಷತ್ರವನ್ನು ನೋಡಬಹುದು. ಈ ಅರ್ಥವು " ತರಂತಿ = ದಾಟಿ ಹೋಗುತ್ತಾರೆ, ಅಸ್ಮಾಲ್ಲೋಕಾತ್, ಈ ಲೋಕದ ದೆಸೆಯಿಂದ, ಇತಿ ತಾರಾಃ, ತಾರಾ ಏವ ತಾರಕಾಃ ಇವರೇ ತಾರಕಾ ಎನಿಸುವರು " ಎಂಬ ವಿಗ್ರಹವಾಕ್ಯದಿಂದ ಬಂದಿದೆ. ( ಶುಭ್ರವಾಗಿರುವುದರಿಂದಲೂ ಈ ಹೆಸರು ಒಪ್ಪುತ್ತದೆ. )

೭೨. ವೃಷ್ಟಿಪತಿ ಎಂದು ಹೆಸರುಳ್ಳ ಸೂರ್ಯನ ಇನ್ನೊಂದು ಕಿರಣವು ಶೀತೋಷ್ಣಗಳ ಸಾಮ್ಯವನ್ನುಂಟುಮಾಡಿ ಪ್ರಪಂಚವನ್ನೆಲ್ಲಾ ಕಾಪಾಡುವುದು.

ಇಲ್ಲಿಗೆ ಸಾಂಬಪುರಾಣದಲ್ಲಿ ಏಳನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟಮೋಽಧ್ಯಾಯಃ



॥ ನಾರದ ಉವಾಚ ॥

ಆದಿತ್ಯಮೂಲಮಖಿಲಂ ತ್ರೈಲೋಕ್ಯಂ ಯದುನಂದನ ।
ಭವತ್ಯಸ್ಮಾಜ್ಜಗತ್ಸರ್ವಂ ಸ ದೇವಾಸುರಮಾನುಷಂ ॥ ೧ ॥

ರುದ್ರೋಪೇಂದ್ರಮಹೇಂದ್ರಾಣಾಂ ವಿಪ್ರೇಂದ್ರತ್ರಿದಿವೌಕಸಾಂ ।
ಮಹಾದ್ಯುತಿಮತಾಂ ಚೈವ ತೇಜೋ ಯತ್ಸಾರ್ವಲೌಕಿಕಂ ॥ ೨ ॥

---

## ಎಂಟನೆಯ ಅಧ್ಯಾಯ.

೧. ನಾರದನು, ಸಾಂಬನನ್ನು ಕುರಿತು, ಇಂತೆಂದನು :— ಎಲೈ ಯದುವೀರ ಕುಮಾರನೇ, ಸ್ವರ್ಗ, ಮರ್ತ್ಯ ಪಾತಾಳವೆಂಬ ಈ ಮೂರು ಲೋಕಕ್ಕೂ ಈ ಸೂರ್ಯನೇ, ಮೂಲ ಕಾರಣನು. ಸಕಲ ದೇವ ಮಾನುಷ ರಾಕ್ಷಸ ಲೋಕಗಳೆಲ್ಲವೂ ಇವನಿಂದಲೇ ಉಂಟಾಗುವುದು.

೨-೩. ರುದ್ರ, ಉಪೇಂದ್ರ, ಇಂದ್ರ, ಬ್ರಾಹ್ಮಣ ಶ್ರೇಷ್ಠರೂ, ದೇವತೆಗಳೂ ಮತ್ತು ಮಹಾ ತೇಜಸ್ವಿಗಳೆನಿಸಿದ ಇತರ ಮಹಾಪುರುಷರು, ಇವರಸಂಬಂಧವಾದ ದಿವ್ಯತೇಜಸ್ಸೆಲ್ಲವೂ ಸೂರ್ಯನ ಸಂಬಂಧವಾದದ್ದೇ ಎಂದೂ, ಅದು ಸರ್ವ

ಸರ್ವಾತ್ಮಾ ಸರ್ವಲೋಕೇಶೋ ದೇವದೇವಃ ಪ್ರಜಾಪತಿಃ ॥ ೩ ॥
ಸೂರ್ಯ ಏವ ತ್ರಿಲೋಕಸ್ಯ ಮೂಲಂ ಪರಮದೈವತಂ ।

ಅಗ್ನೌ ಕ್ಷಿಪ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।
ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥ ೪ ॥

ಸೂರ್ಯಾತ್ಪ್ರಸೂಯತೇ ಸರ್ವಂ ತತ್ರ ಚೈವ ಪ್ರಲೀಯತೇ ।
ಭಾವಾಭಾವೌ ಹಿ ಲೋಕಾನಾಮಾದಿತ್ಯಾನ್ನಿಃಸೃತೌ ಪುರಾ ॥ ೫ ॥

ಯತ್ತತ್ತದ್ಧ್ಯಾಯಿನಾಂ ಧ್ಯಾನಂ ಮೋಕ್ಷಶ್ಚಾಪ್ಯೇಷ ಮೋಕ್ಷಿಣಾಂ ।
ಅತ್ರ ಗಚ್ಛಂತಿ ನಿರ್ವಾಣಂ ಜಾಯಂತೇಽಸ್ಮಾತ್ಪುನಃ ಪ್ರಜಾಃ ॥ ೬ ॥

---

ಲೋಕಗಳಲ್ಲಿಯೂ ವ್ಯಾಪಿಸಿರುವುದೆಂದೂ ತಿಳಿಯಬೇಕು. ಸಕಲ ಪ್ರಾಣಿಗಳ ಆತ್ಮ ಸ್ವರೂಪನೂ, ಸಕಲಲೋಕಗಳಿಗೂ ಒಡೆಯನೂ, ಪ್ರಜಾಪತಿಯೆನಿಸಿದವನೂ, ಸಹ ಈ ಸೂರ್ಯನೇ ಆಗಿರುವನು.

೪. ಸೂರ್ಯನೇ ಮೂರುಲೋಕಗಳಿಗೂ, ಮೂಲಕಾರಣನೂ, ಉತ್ತಮವಾದ ದೇವತೆಯೂ ಸಹ ಆಗಿರುವನು. ನಾವು ಯಜ್ಞೇಶ್ವರನಲ್ಲಿ ಚೆನ್ನಾಗಿ ಹೋಮ ಮಾಡಲ್ಪಟ್ಟ ಆಜ್ಯವೇ ಮೊದಲಾದ ಆಹುತಿಗಳು ಸೂರ್ಯನಿಗೆ ಸಲ್ಲುತ್ತವೆ. ಈ ಸೂರ್ಯನಿಂದ ಮಳೆಯೂ, ಮಳೆಯಿಂದ ಅನ್ನವೂ, ಅನ್ನದಿಂದ ಪ್ರಜೆಗಳೂ ಸಹ ಉತ್ಪನ್ನವಾಗುವರು. ಮತ್ತೂ ಜೀವಿಗಳು ಜೀವಿಸುವರು.

೫. ಸಕಲವಸ್ತುಗಳೂ ಸೂರ್ಯನಿಂದಲೇ ಹುಟ್ಟಿ, ಅವನಲ್ಲಿಯೇ ಐಕ್ಯವಾಗುವುವು. ಲೋಕಗಳ ಸ್ಥಿತಿ ಮತ್ತೂ ನಾಶ ಎಂಬೆರಡು ಕ್ರಿಯೆಗಳೂ ಮೊದಲು ಸೂರ್ಯನಿಂದಲೇ ಹೊರಟು ಬಂದಿವೆ. ಅಂದರೆ ಪ್ರಪಂಚದ ಸ್ಥಿತಿ ನಾಶಕಗಳಿಗೆ ಸೂರ್ಯನೇ ಕಾರಣ.

೬ ಧ್ಯಾನಮಾಡತಕ್ಕವರಿಗೆ ಧ್ಯಾನಸ್ವರೂಪನೂ, ಮೋಕ್ಷಾಪೇಕ್ಷೆಯುಳ್ಳವರಿಗೆ, ಮೋಕ್ಷಸ್ವರೂಪನೂ ಸಹ ಈ ಭಾಸ್ಕರನೇ ಆಗಿರುವನು. ಪ್ರಜೆಗಳು ಇವನಲ್ಲೇ ಐಕ್ಯವನ್ನು ಹೊಂದಿ ಪುನಃ ಇವನಿಂದಲೇ ಹುಟ್ಟುತ್ತಾರೆ.

ಕ್ಷಣಾ ಮುಹೂರ್ತಾ ದಿವಸಾಃ ನಿಶಾಃ ಪಕ್ಷಾಸ್ತಥೈವ ಚ ।
ಮಾಸಾಸ್ಸಂವತ್ಸರಾಶ್ಚೈವ ಋತವೋಽಥ ಯುಗಾನಿ ಚ ॥ ೭ ॥

ತದಾದಿತ್ಯಾದೃತೇ ಹ್ಯೇಷಾಂ ಕಾಲಸಂಖ್ಯಾ ನ ವಿದ್ಯತೇ ।
ಕಾಲಾದೃತೇ ನ ನಿಯಮೋ ನಾಗ್ನೇರ್ನಿಹರಣಂ ಕ್ರಿಯಾ ॥ ೮ ॥

ಋತೂನಾಮತಿಭಾಗಾಚ್ಚ ಪುಷ್ಪಮೂಲಂ ಫಲಂ ಕುತಃ ।
ಕುತಶ್ಚ ಸಸ್ಯನಿಷ್ಪತ್ತಿಸ್ತೃಣೌಷಧಿಗಣಾಃ ಕುತಃ ॥ ೯ ॥

ಅಭಾವೋ ವ್ಯವಹಾರಾಣಾಂ ಜಂತೂನಾಂ ದಿವಿ ಚೇಹ ಚ ।
ಜಗತ್ಪ್ರತಾಪನಮೃತೇ ಭಾಸ್ಕರಂ ವಾರಿತಸ್ಕರಂ ॥ ೧೦ ॥

---

೭–೯. ಸೂರ್ಯನಿಲ್ಲದಿದ್ದರೆ ಕಾಲ ಸಂಖ್ಯೆಗಳನ್ನು ಸೂಚಿಸುವ, ಕ್ಷಣ, ಮುಹೂರ್ತ, ದಿವಸ, ನಿಶಾ, ಪಕ್ಷ, ತಿಂಗಳು, ವರ್ಷ, ಋತು, ಮತ್ತು ಯುಗಗಳನ್ನು ನಿರ್ಣಯಿಸಲು ಸಾಧ್ಯವಿಲ್ಲ. ಕಾಲವೇ ಇಲ್ಲದಿದ್ದರೆ ಯಾವ ನಿಯಮವೂ ನಡೆಯು ಲಾರದು. ಇಂತಹ ಸಮಯದಲ್ಲಿ ಅಗ್ನಿಸಂಸ್ಕಾರಾದಿಗಳು. ಇಂತಹ ಸಮಯದಲ್ಲಿ ಗೃಹ್ಯಕರ್ಮಗಳು, ಮುಂತಾದ ಕಾಲೋಚಿತವಾದ ಕರ್ಮಗಳನ್ನು ನಿಶ್ಚಯಿಸಲು ಸಾಧ್ಯವಿಲ್ಲ. ಮತ್ತು ಕಾಲನಿಯಮವಿಲ್ಲದಿದ್ದರೆ ಇಷ್ಟು ದಿವಸಗಳಿಗೆ ಒಂದು ಋತುವೆಂಬ ನಿರ್ಣಯವಿಲ್ಲದೆ, ಆಯಾಯ ಋತುವಿನಲ್ಲಿ ಬಿಡುವ ಹೂವು, ಗೆಡ್ಡೆ, ಹಣ್ಣು ಇವುಗಳನ್ನು ತಿಳಿಯಲಾಗುವುದಿಲ್ಲ. ಸಸ್ಯಗಳು ಬೆಳೆಯುವ ಕಾಲವಿಂತಹದು, ಔಷಧಿ ಲತೆಗಳ ಸಮೂಹವು ಬೆಳೆಯುವುದಾವಾಗ? ಎಂಬುದನ್ನು ತಿಳಿಯಲು ಬಹಳ ಕಷ್ಟವಾಗುವುದು. ಆದುದರಿಂದ ಮೂಲಕಾರಣನಾದ ಸೂರ್ಯನಿಂದಲೇ ಕಾಲನಿಯಮವನ್ನು ತಿಳಿದು, ನಿಯಮದಂತೆ ವರ್ತಿಸಬೇಕು. ಒಟ್ಟಿನಲ್ಲಿ ಸೂರ್ಯನು ಕಾಲ ಸ್ವರೂಪನೆಂದು ಹೇಳಿದರೆ ತಪ್ಪಾಗಲಾರದು.

೧೦. ಜಗತ್ತನ್ನು ಪ್ರಕಾಶಗೊಳಿಸಿ, ತನ್ನ ಸುಡುವ ಕಿರಣಗಳಿಂದ ನೀರನ್ನು ಎಳೆದುಕೊಳ್ಳುವ, ಸೂರ್ಯನಿಲ್ಲದಿದ್ದರೆ, ಭೂಲೋಕ ಸ್ವರ್ಗಲೋಕಗಳ ಪ್ರಾಣಿ ವ್ಯವಹಾರವೇ ನಡೆಯುತ್ತಿರಲಿಲ್ಲ.

ನಾವೃಷ್ಟ್ಯಾ ತಪತೇ ಸೂರ್ಯಃ ನಾವೃಷ್ಟ್ಯಾ ಪರಿತುಷ್ಯತಿ ।
ನಾವೃಷ್ಟ್ಯಾ ಪರಿಸಿದ್ಧ್ಯಂತೇ ವಾರಿಣಾ ದೀಯತೇ ರವಿಃ ॥ ೧೧ ॥

ವಸಂತೇ ಕಪಿಲಃ ಸೂರ್ಯೋ ಗ್ರೀಷ್ಮೇ ಕಾಂಚನಸನ್ನಿಭಃ ।
ಶ್ವೇತೋ ವರ್ಷಾಸು ವರ್ಣೇನ ಪಾಂಡುಃ ಶರದಿ ಭಾಸ್ಕರಃ ॥ ೧೨ ॥

ಹೇಮಂತೇ ತಾಮ್ರವರ್ಣಸ್ತು ಶಿಶಿರೇ ಲೋಹಿತೋ ರವಿಃ ।
ಇತಿ ವರ್ಣಾಃ ಸಮಾಖ್ಯಾತಾ ಸೂರ್ಯಸ್ಯ ಋತುಸಂಭವಾಃ ॥ ೧೩ ॥

ಋತುಸ್ವಭಾವಜೈರ್ವರ್ಣೈಃ ಸೂರ್ಯಃ ಕ್ಷೇಮೋ ಸುಭಿಕ್ಷಕೃತ್ ।

ಇತಿ ಶ್ರೀ ಸಾಂಬಪುರಾಣೇ ಸರ್ವವ್ಯಾಪಕತ್ವ ನಿರೂಪಣಂ ನಾಮ ಅಷ್ಟಮೋಽಧ್ಯಾಯಃ.

---

೧೧ ಸೂರ್ಯನು ಮಳೆಯಿಲ್ಲವೆಂದು ಬಿಸಿಲನ್ನುಂಟುಮಾಡುವುದೂ ಇಲ್ಲ, ಮಳೆ ಬರಲಿಲ್ಲವೆಂಬ ಸಂತೋಷವೂ ಅವನಿಗಿಲ್ಲ, ಅಥವಾ ಮಳೆ ಬರಬಾರದೆಂದು ಅದನ್ನು ನಿಷೇಧಮಾಡುವುದೂ ಇಲ್ಲ. ಆದರೂ ಸಹ ಅವನು ತನ್ನ ಸ್ವಭಾವಕ್ಕನು ಸಾರವಾಗಿ ಪ್ರಪಂಚಕ್ಕೆ ಮಳೆಗರೆದು ಸಂತೋಷವುಂಟುಮಾಡುವನು. ಹಿಂದೆ ಹೇಳಿದುದೆಲ್ಲವನ್ನೂ ಸೂರ್ಯನು ಪ್ರಪಂಚ ಕ್ಷೇಮಕ್ಕೋಸ್ಕರವಾಗಿ ಮಾಡುತ್ತಿರುವನೇ ಹೊರತು ಅವನಿಗೆ ಇದರ ಸಂಬಂಧವೇ ಸೋಂಕುವುದಿಲ್ಲವೆಂದು ತಿಳಿಯಬೇಕು.

೧೨-೧೩. ಈಗ ಋತುಗಳಲ್ಲಿ ಸೂರ್ಯನ ವರ್ಣವನ್ನು ತಿಳಿಸುತ್ತೇನೆ— ಸೂರ್ಯನು, ವಸಂತಋತುವಿನಲ್ಲಿ ಕಪಿಲವರ್ಣದಿಂದಲೂ, ಗ್ರೀಷ್ಮರ್ತುವಿನಲ್ಲಿ ಚಿನ್ನದ ಬಣ್ಣದಿಂದಲೂ, ವರ್ಷರ್ತುವಿನಲ್ಲಿ ಶ್ವೇತ ಅಂದರೆ ಶುದ್ಧಬಿಳುಪು ಬಣ್ಣದಿಂದಲೂ, ಶರದೃತುವಿನಲ್ಲಿ ಶುಭ್ರವಾದ ಬಿಳಿಯಬಣ್ಣದಿಂದಲೂ, ಹಿಮಂತಋತುವಿನಲ್ಲಿ ತಾಮ್ರವರ್ಣದಿಂದಲೂ, ಶಿಶಿರಋತುವಿನಲ್ಲಿ ಅಚ್ಚಕೆಂಪು ಕಾಂತಿಯಿಂದಲೂ ಕೂಡಿರುವನು. ಈರೀತಿ ಸೂರ್ಯನಿಗೆ ಆಯಾಯ ಋತುಗಳ ಸ್ವಭಾವದಿಂದ ಆ ರೀತಿ ಬೇರೆ ಬೇರೆ ಬಣ್ಣಗಳುಂಟಾಗುವುವು. ಆಯಾಯ ಬಣ್ಣವನ್ನೇ ಹೊಂದಿ ಸೂರ್ಯನು ಲೋಕಕ್ಕೆ ಕ್ಷೇಮವನ್ನೂ, ಧನಧಾನ್ಯಸಮೃದ್ಧಿಯನ್ನೂ ಸಹ ಉಂಟುಮಾಡುವನು.

ಇಲ್ಲಿಗೆ ಸಾಂಬಪುರಾಣದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

—O—

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ನವಮೋಽಧ್ಯಾಯಃ

॥ ನಾರದ ಉವಾಚ ॥

**ಅಥಾದಿತ್ಯಸ್ಯ ನಾಮಾನಿ ಸಾಮಾನ್ಯಾನೀಹ ದ್ವಾದಶ ।**
**ದ್ವಾದಶಾಽಪಿ ಪೃಥಕ್ತ್ವೇನ ತಾನಿ ವಕ್ಷ್ಯಾಮ್ಯಶೇಷತಃ ॥ ೧ ॥**

**ಆದಿತ್ಯಸ್ಸವಿತಾ ಸೂರ್ಯೋ ಮಿಹಿರೋಽರ್ಕಃ ಪ್ರಭಾಕರಃ ।**
**ಮಾರ್ತಂಡೋ ಭಾಸ್ಕರೋ ಭಾನುಶ್ಚಿತ್ರಭಾನುರ್ದಿವಾಕರಃ ॥ ೨ ॥**

---

## ಒಂಬತ್ತನೆಯ ಅಧ್ಯಾಯ.

೧-೨. ನಾರದಮಹರ್ಷಿಯು, ಸಾಂಬನನ್ನು ಕುರಿತು, " ಅಯ್ಯಾ, ಸಾಂಬನೇ, ಸಾಮಾನ್ಯವಾಗಿ ಸೂರ್ಯನಿಗೆ ಆದಿತ್ಯ, ಸವಿತಾ, ಸೂರ್ಯ, ಮಿಹಿರ, ಅರ್ಕ, ಪ್ರಭಾಕರ, ಮಾರ್ತಂಡ, ಭಾಸ್ಕರ, ಭಾನು, ಚಿತ್ರಭಾನು, ದಿವಾಕರ, ರವಿ ಎಂದು ಹನ್ನೆರಡು ಹೆಸರುಗಳು ಪ್ರಸಿದ್ಧವಾಗಿವೆ. ಇವಲ್ಲದೇ ಪ್ರತ್ಯೇಕವಾಗಿ ಇನ್ನೂ ಹನ್ನೆರಡು ಹೆಸರುಗಳು ಇವೆ. ಅವೆಲ್ಲವನ್ನೂ ಸ್ವಲ್ಪವೂ ಬಿಡದಂತೆ ತಿಳಿಸುವೆನು, ಕೇಳು " ಎಂದು ಹೇಳಿದನು.

ರವಿರ್ದ್ವಾದಶಕಶ್ಚೈವ ಜ್ಞೇಯಃ ಸಾಮಾನ್ಯನಾಮಭಿಃ ।
ವಿಷ್ಣುರ್ಧಾತಾ ಭಗಃ ಪೂಷಾ ಮಿತ್ರೇಂದ್ರೌ ವರುಣೋ ಯಮಃ ॥ ೩ ॥

ವಿವಸ್ವಾನಂಶುಮಾಂಸ್ತ್ವಷ್ಟಾ ಪರ್ಜನ್ಯೋ ದ್ವಾದಶ ಸ್ಮೃತಃ ।
ಇತ್ಯೇತೇ ದ್ವಾದಶಾದಿತ್ಯಾ ಪೃಥಕ್ತ್ವೇನ ಪ್ರಕೀರ್ತಿತಾಃ ॥ ೪ ॥

ಉತ್ತಿಷ್ಠಂತಿ ಸದಾಹ್ಯೇತೇ ಮಾಸೈರ್ದ್ವಾದಶಭಿಃ ಕ್ರಮಾತ್ ।
ವಿಷ್ಣುಸ್ತಪತಿ ಚೈತ್ರೇ ತು ವೈಶಾಖೇ ಚಾರ್ಯಮಾ ತಥಾ ॥ ೫ ॥

ವಿವಸ್ವಾನ್ಜ್ಯೇಷ್ಠಮಾಸೇ ತು ಆಷಾಢೇ ಚಾಂಶುಮಾನ್ ಸ್ಮೃತಃ ।
ಪರ್ಜನ್ಯಃ ಶ್ರಾವಣೇ ಮಾಸೇ ವರುಣಃ ಪ್ರೌಷ್ಠಸಂಜ್ಞಕೇ ॥ ೬ ॥

ಇಂದ್ರಾಖ್ಯಶ್ಚಾಶ್ವಿನೇಮಾಸೇ ಧಾತಾ ಭವತಿ ಕಾರ್ತಿಕೇ ।
ಮಾರ್ಗಶೀರ್ಷೇ ತಪೇನ್ಮಿತ್ರಃ ಪೌಷೇ ಪೂಷಾ ದಿವಾಕರಃ ॥ ೭ ॥

---

೩-೪. ವಿಷ್ಣು, ಧಾತಾ, ಭಗ, ಪೂಷಾ, ಮಿತ್ರ, ಇಂದ್ರ, ವರುಣ, ಯಮ ವಿವಸ್ವಾನ್, ಅಂಶುಮಾನ್, ತ್ವಷ್ಟಾ, ಪರ್ಜನ್ಯ ಎಂಬ ಈ ಹನ್ನೆರಡು ಸೂರ್ಯನ ಪ್ರತ್ಯೇಕವಾದ ಹೆಸರುಗಳು. ಇವರಿಗೇ ದ್ವಾದಶಾದಿತ್ಯರೆಂದೂ ಹೆಸರು.

೫-೭. ಈ ದ್ವಾದಶಾದಿತ್ಯರೇ ಹನ್ನೆರಡು ತಿಂಗಳುಗಳಲ್ಲಿಯೂ ಕ್ರಮವಾಗಿ ಪ್ರಕಾಶಿಸುವರು. ಅಂದರೆ, ವಿಷ್ಣುವು ಚೈತ್ರಮಾಸದಲ್ಲಿಯೂ, ವೈಶಾಖದಲ್ಲಿ ಆರ್ಯಮನೂ, ಜ್ಯೇಷ್ಠಮಾಸದಲ್ಲಿ ವಿವಸ್ವಂತನೂ, ಅಂಶುಮಂತನ ಆಷಾಢದಲ್ಲಿಯೂ, ಶ್ರಾವಣದಲ್ಲಿ ಪರ್ಜನ್ಯನೂ, ಭಾದ್ರಪದದಲ್ಲಿ ವರುಣನೂ, ಆಶ್ವಯುಜಮಾಸದಲ್ಲಿ ಇಂದ್ರನೂ, ಕಾರ್ತಿಕದಲ್ಲಿ ಧಾತೃವೂ, ಮಾರ್ಗಶೀರ್ಷದಲ್ಲಿ ಮಿತ್ರನೂ, ಪುಷ್ಯದಲ್ಲಿ ಪೂಷನೂ, ಮಾಘದಲ್ಲಿ ಭಗನೂ, ಫಾಲ್ಗುಣಮಾಸದಲ್ಲಿ ತ್ವಷ್ಟೃವೂ ಸಹ ಪ್ರಕಾಶಿಸವರು.

ಮಾಘೇ ಭಗಸ್ತು ವಿಜ್ಞೇಯಃ ತ್ವಷ್ಟಾ ತಪತಿ ಫಾಲ್ಗುನೇ ।
ಏತೈರ್ದ್ವಾದಶಭಿರ್ವಿಷ್ಣೋ ರಶ್ಮಿಭಿರ್ದೀಪ್ಯತೇ ಸದಾ ॥ ೮ ॥

ದೀಪ್ಯತೇ ಗೋಸಹಸ್ರೇಣ ಶತೈಶ್ಚ ತ್ರಿಭಿರರ್ಯಮಾ ।
ದ್ವಿಸಪ್ತಕೈರ್ವಿವಸ್ವಾಂಸ್ತು ಹ್ಯಂಶುಮಾನ್ಪಂಚಕೈಸ್ತ್ರಿಭಿಃ ॥ ೯ ॥

ವಿವಸ್ವಾನಿವ ಪರ್ಜನ್ಯೋ ವರುಣಶ್ಚಾರ್ಯಮಾ ಯಥಾ ।
ಇಂದ್ರಸ್ತು ದ್ವಿಗುಣೈಃ ಷಡ್ಭಿರ್ಧಾತೈಕಾದಶಭಿಃ ಶತೈಃ ॥ ೧೦ ॥

ಮಿತ್ರಸ್ತು ದಶಭಿಃ ಸಾರ್ಧೈಃ ಪೂಷಾ ತು ದಶಭಿಃ ಶತೈಃ ।
ಮಿತ್ರವಚ್ಚ ಭಗಸ್ತ್ವಷ್ಟಾ ಸಹಸ್ರೇಣ ಶತೇನ ಚ ॥ ೧೧ ॥

ಉತ್ತರೋಪಕ್ರಮೋಽರ್ಕಸ್ಯ ವರ್ಧಂತೇ ರಶ್ಮಯಸ್ತಥಾ ।
ದಕ್ಷಿಣೋಪಕ್ರಮೇ ತಸ್ಯ ಹ್ರಸಂತೇ ಸೂರ್ಯರಶ್ಮಯಃ ॥ ೧೨ ॥

---

೮-೧೨. ಮೇಲೆ ಹೇಳಿದ ವಿಷ್ಣುವೇ ಮೊದಲಾದ ಹನ್ನೆರಡು ಸ್ವರೂಪಗಳಿಂದ ಸರ್ವವ್ಯಾಪಕನಾದ ಸೂರ್ಯ ಪರಮಾತ್ಮನು ಪ್ರಕಾಶಿಸುತ್ತಿರುವನು.

ಈಗ ಪ್ರತ್ಯೇಕವಾಗಿ ದ್ವಾದಶಾದಿತ್ಯರು ಪ್ರಕಾಶಿಸುವ ಕಿರಣ ಸಂಖ್ಯೆಗಳನ್ನು ಹೇಳುತ್ತೇನೆ. ಅದರಲ್ಲಿ ವಿಷ್ಣುವು ಸಾವಿರ ಕಿರಣಗಳಿಂದಲೂ, (1000) ಅರ್ಯಮನು, ಸಾವಿರದ ಮುನ್ನೂರು (1300) ಕಿರಣಗಳಿಂದಲೂ, ವಿವಸ್ವಂತನು ಸಾವಿರದ ಹದಿನಾಲ್ಕು ಕಿರಣಗಳಿಂದಲೂ, [1014] ಅಂಶುಮಂತನು ಸಾವಿರದ ಹದಿನೈದು [1015] ಕಿರಣಗಳಿಂದಲೂ, ಪರ್ಜನ್ಯನು ವಿವಸ್ವಂತನಂತೆ ಸಾವಿರದ ಹದಿನಾಲ್ಕು ಕಿರಣಗಳಿಂದಲೂ [1014], ವರುಣನು ಅರ್ಯಮನಂತೆ ಸಾವಿರದ ಮುನ್ನೂರು ಕಿರಣಗಳಿಂದಲೂ (1300), ಇಂದ್ರನು ಸಾವಿರದ ಹನ್ನೆರಡು ಕಿರಣಗಳಿಂದಲೂ (1012),ಧಾತೃವು ಸಾವಿರದನೂರು (1100) ಕಿರಣಗಳಿಂದಲೂ, ಮಿತ್ರನು ಸಾವಿರದ ನೂರಹದಿನೈದು (1115) ಕಿರಣಗಳಿಂದಲೂ. ಪೂಷನು ಸಾವಿರ ಕಿರಣಗಳಿಂದಲೂ (1000) ಭಗನು ಮಿತ್ರನಂತೆ ಸಾವಿರದ ನೂರಹದಿನೈದು ಕಿರಣಗಳಿಂದಲೂ (1115), ತ್ವಷ್ಟೃವು ಸಾವಿರದನೂರು ಕಿರಣಗಳಿಂದಲೂ (1100) ಸಹ ಪ್ರಕಾಶಿಸುವರು. ಸೂರ್ಯನು ಉತ್ತರಕ್ಕೆ ಸಂಚರಿಸಿದ ಹಾಗೆಲ್ಲಾ ಅವನ ಕಿರಣಗಳು ಅಭಿವೃದ್ಧಿಯಾಗುವುವು. ದಕ್ಷಿಣಕ್ಕೆ ಬಂದಹಾಗೆಲ್ಲಾ ಕಿರಣಗಳು ಕ್ಷಯವಾಗುತ್ತಾ ಕಡಿಮೆಯಾಗುವುವು.

ಏವಂ ರಶ್ಮಿಸಹಸ್ರಂ ತತ್ಸೂರ್ಯಲೋಕಾರ್ಥಸಾಧಕಂ ।
ಭಿದ್ಯತೇ ಋತುಮಾಸಾದ್ಯೈಃ ಸಹಸ್ರಂ ಬಹುಧಾ ಪುನಃ ॥ ೧೩ ॥

ಏವಂ ನಾಮ್ನಾಂ ಚತುರ್ವಿಂಶತಿರೇಷಾ ಚ ಪ್ರಕೀರ್ತಿತಾ ।
ವಿಸ್ತರೇಣ ಸಹಸ್ರಂ ತು ಪುನರನ್ಯತ್ಪ್ರಕೀರ್ತಿತಮ್ ॥ ೧೪ ॥

ಅಥ ಚೈಷಾಂ ಪುನರ್ನಾಮ್ನಾಂ ಧಾತ್ವರ್ಥನಿಗಮಂ ಶೃಣು ।
ದಿವ್ಯಾನಾಂ ಪಾರ್ಥಿವಾನಾಂ ಚ ವಶಾನಾಮಿಹ ಸರ್ವಶಃ ॥ ೧೫ ॥

ಆದನಾನ್ನಿತ್ಯಮಾದಿತ್ಯಸ್ತಪಸಾಂ ತೇಜಸಾಮಯಂ ।
ಅದಿತೇರ್ವಾ ಸುತೋ ಯಸ್ಮಾನ್ನಿಗಮಜ್ಞೈರುದಾಹೃತಃ ॥ ೧೬ ॥
ಅಪತ್ಯಪ್ರತ್ಯಯಾತ್ತಸ್ಮಾತ್ಸೂರ್ಯಸ್ಯಾದಿತ್ಯತಾ ಸ್ಮೃತಾ ॥ ೧೭ ॥

---

೧೩. ಹಿಂದೆ ಹೇಳಿದಂತೆ ಸೂರ್ಯನ ಸಾವಿರಕಿರಣಗಳೇ ಋತು, ಮಾಸ, ದಿನಾದಿಗಳಿಂದ ಅಧಿಕವಾಗಿ ತೋರುತ್ತಾ ಸೂರ್ಯಲೋಕದ ಕಾರ್ಯಾಚರಣೆಯಲ್ಲಿ ಸಮರ್ಥವಾಗುವುವು.

೧೪. ಸೂರ್ಯನಿಗೆ ನಾನು ಹಿಂದೆ ತಿಳಿಸಿದಂತೆ ಒಟ್ಟು ಇಪ್ಪತ್ತುನಾಲ್ಕು (24) ಹೆಸರುಗಳು ನಿನಗೆ ತಿಳಿದಿವೆ. ಎಲೈ ಸಾಂಬನೇ, ಇದಲ್ಲದೆ ಇನ್ನೂ ವಿಸ್ತರಿಸಿ ಹೇಳಲು ಸಹಸ್ರ ಹೆಸರುಗಳು ಸೂರ್ಯನಿಗಿವೆ. ಅದನ್ನು ಅನಂತರ ತಿಳಿಸುವೆನು" ಎಂದು ನಾರದರು ಹೇಳುತ್ತಾ

೧೫. ಈಗ, ಎಲೈ ಸಾಂಬನೆ, ಸ್ವರ್ಗಮರ್ತ್ಯಲೋಕಗಳಲ್ಲಿ ಪ್ರಸಿದ್ಧಿ ಹೊಂದಿರುವ ಹಿಂದೆ ಹೇಳಿದ ಇಪ್ಪತ್ತುನಾಲ್ಕು ಸೂರ್ಯನ ಹೆಸರುಗಳು, ಹೇಗೆ ಒಬ್ಬನಿಗೇ ಬಂದವು? ಎಂಬುದರ ವಿವರಣೆಯನ್ನೂ ಧಾತುಗಳಿಂದ ಈ ಅರ್ಥವು ಬಂದಿರುವ ರೀತಿಯನ್ನೂ ವಿವರಿಸಿ ಹೇಳುವೆನು ಕೇಳು ಎಂದು ಮುಂದುವರಿಸಿದರು.

೧೬-೧೭. ತಪಸ್ಸುಗಳನ್ನು ಮತ್ತು ತೇಜಸ್ಸುಗಳನ್ನೂ ಸಂಗ್ರಹಿಸಿ ಅವುಗಳಿಂದ ನಿತ್ಯವೂ ಪ್ರಪಂಚವನ್ನು ರಕ್ಷಿಸುವನಾದ್ದರಿಂದ ಇವನಿಗೆ ಆದಿತ್ಯನೆಂದು ಹೆಸರು ಬಂದಿತು. ಅಥವ ಕಶ್ಯಪ ಬ್ರಹ್ಮನ ಪತ್ನಿಯಾದ ಅದಿತಿಯು ಮಗನಾದುದರಿಂದಲೂ, ಇವನಿಗೆ, ಅದಿತಿ ಶಬ್ದದ ಮೇಲೆ ಅಪತ್ಯಾರ್ಥಕವಾದ, ಣ್ಯ ಪ್ರತ್ಯಯವು ಬಂದು ಆದಿತ್ಯನೆಂಬ ಹೆಸರುಂಟಾಗಿದೆ.

ಸ್ರವಂತಿ ಸ್ಯಂದನಾರ್ಥೇ ಚ ಧಾತುರೇಷ ನಿಪಾತ್ಯತೇ ।
ಸ್ರವಣಾತ್ತೇಜಸೋದ್ಧಾ ಚ ತೇನಾಸೌ ಸವಿತಾ ಸ್ಮೃತಃ ॥ ೧೮ ॥

ಶಶ್ವಚ್ಚ ಜಾಯತೇ ಯಸ್ಮಾಚ್ಛಶ್ವತ್ಸಂತಿಷ್ಠತೇ ಯತಃ ।
ತಸ್ಮಾತ್ಸರ್ವೈಃ ಸ್ಮೃತಸ್ಸೂರ್ಯೋ ನಿಗಮಜ್ಞೈರ್ಮನೀಷಿಭಿಃ ॥ ೧೯ ॥

ನುದಿತಿ ಪ್ರೇರಣೇ ಧಾತು ರ್ಭಾದೀಪ್ತೌ ಚೈವ ಕೀರ್ತಿತಃ ।
ನೋದನಾತ್ಕಾರಣಾದ್ಭಾಸಾ ಭಾನುರಿತ್ಯಭಿಧೀಯತೇ ॥ ೨೦ ॥

ಚಿತ್ರಾ ಹಿ ಭಾನವೋ ಯಸ್ಯ ವರ್ಣೈಶ್ಶುಕ್ಲಾದಿಭಿರ್ಯತಃ ।
ಭಾನವೋ ರಶ್ಮಯಃ ಪ್ರೋಕ್ತಾಃ ಚಿತ್ರಭಾನುಸ್ತತಃ ಸ್ಮೃತಃ ॥ ೨೧ ॥

---

೧೮. ಸ್ರವಂತೀ ಎಂಬುದು " ಸೃಸ್ರವಣೆ " ಎಂಬ ಧಾತುವಿನಿಂದ ನಿಷ್ಪನ್ನವಾದ ರೂಪವು. ಸ್ರವಣ ಅಥವ ಸ್ಯಂದನ ಎಂಬುದು [ಹರಡುವಿಕೆ] ಎರಡೂ ಸಮಾನಾರ್ಥಕಗಳು. ತನ್ನ ತೇಜಸ್ಸುಗಳನ್ನು ಎಲ್ಲಾ ಕಡೆಯಲ್ಲಿಯೂ ಹರಡಿ ವ್ಯಾಪಿಸಿರುವನಾದ್ದರಿಂದ ಈ ಸೂರ್ಯನಿಗೆ ಸವಿತಾ ಎಂದು ಹೆಸರು ಬಂದಿತು. ಅಥವಾ ಸ್ರವಂತೀ ಎಂದರೆ ಸೋರುವುದು ಎಂಬ ಅರ್ಥವಿದೆ, "ತೇಜಸಃ =ತೇಜಸ್ಸುಗಳು, ಯಸ್ಮಾತ್ = ಯಾರದೆಸೆಯಿಂದ, ಸ್ರವಂತಿ= ಪ್ರಸರಿಸುತ್ತವೆಯೋ [ಹೊರಡುತ್ತವೆಯೋ] ಅವನು ಸವಿತಾ ಎಂದು ಅರ್ಥಮಾಡಬಹುದು."

೧೯. ಆಗಾಗ್ಗೆ ರೂಪಾಂತರಗಳನ್ನು ಹೊಂದಿ ಹುಟ್ಟುವನಾದ್ದರಿಂದಲೂ, ಯಾವಾಗಲೂ, ಶಾಶ್ವತವಾಗಿ ಇರುವನಾದ್ದರಿಂದಲೂ, ತತ್ತ್ವಜ್ಞರಾದ ಪಂಡಿತರು ಇವನನ್ನು ಸೂರ್ಯನೆಂದು ಕರೆಯುವರು.

೨೦. ಭಾನು ಶಬ್ದವು, ಪ್ರೇರಣಾರ್ಥಕವಾದ, ನುದಧಾತುವಿನಿಂದಲೂ ದೀಪ್ತ್ಯರ್ಥಕವಾದ ಭಾ ಧಾತುವಿನ ಸಂಬಂಧದಿಂದಲೂ ನಿಷ್ಪನ್ನವಾಗಿದೆ. ಅಂದರೆ ಪ್ರಪಂಚವನ್ನೆಲ್ಲಾ ಪ್ರೇರಣೆಮಾಡುವವನೂ, ಪ್ರಕಾಶಪಡಿಸುವನೂ ಆದುದರಿಂದ ಸೂರ್ಯನಿಗೆ ಭಾನುವೆಂದು ಹೆಸರು ಬಂದಿತು.

೨೧. ಸೂರ್ಯನ ಕಿರಣಗಳು, ಬಿಳುಪು, ಕೆಂಪು ಮೊದಲಾದ ನಾನಾಬಣ್ಣಗಳಿಂದ ಕೂಡಿರುವುದರಿಂದ ಇವನಿಗೆ ಚಿತ್ರಭಾನುವೆಂದು ಹೆಸರು ಬಂದಿತು.

ಭಾಸ್ವತಸ್ತು ಕರಾಹ್ಯಸ್ಯ ಭಾರೋಽತ್ಯರ್ಥಂ ಕರೋತಿ ಚ ।
ಭಾಸ್ವದೀಪ್ತೌ ಸ್ಮೃತೋ ಧಾತುಃ ಭಾಸ್ಕರಸ್ತೇನ ಸ ಸ್ಮೃತಃ ॥ ೨೨ ॥

ಭಾದೀಪ್ತಾವಿತ್ಯಯಂ ಧಾತುಶ್ಚೋಪಸರ್ಗೇಣ ಸಂಯುತಃ ।
ಭಾಸ್ಕರೋತಿಪ್ರಕರ್ಷೇಣ ಯಸ್ಮಾತ್ತಸ್ಮಾತ್ಪ್ರಭಾಕರಃ ॥ ೨೩ ॥

ದಿವೇತಿ ಚಾವ್ಯಯಂ ಲಿಂಗಂ ಪಠ್ಯತೇ ಸೂರಿಭಿಃ ಸದಾ ।
ದಿವಾ ಕರೋತಿ ಯಸ್ಮಾಚ್ಚ ತಸ್ಮಾದೇವ ದಿವಾಕರಃ ॥ ೨೪ ॥

ಅವತಿ ತ್ರೀನಿಮಾನ್‌ಲೋಕಾನ್ ಯಸ್ಮಾದೇಷ ಪರಿಭ್ರಮನ್ ।
ಅವೇತಿ ರಕ್ಷಣೇ ಧಾತುರವನಾತ್ಸವಿತಾ ಸ್ಮೃತಃ ॥ ೨೫ ॥

---

೨೨. ಯಾವಾಗಲೂ ಹೊಳೆಯುವ ಸ್ವಭಾವವುಳ್ಳ ಈ ಸೂರ್ಯನ ಕಿರಣಗಳು, ಹೆಚ್ಚು ಬೆಳಕನ್ನುಂಟುಮಾಡುವುದರಿಂದ, ದೀಪ್ತ್ಯರ್ಥಕವಾದ ಭಾಸ್ವ ಧಾತುವಿನಿಂದ ಹುಟ್ಟಿರುವ ಈ ಭಾಸ್ಕರ ಶಬ್ದವು ಹೆಚ್ಚು ಬೆಳಕನ್ನುಂಟುಮಾಡುವ ಕಿರಣಗಳುಳ್ಳವನೆಂಬರ್ಥವನ್ನು ಸೂಚಿಸುತ್ತಾ ಸೂರ್ಯ ಶಬ್ದದ ಪರ್ಯಾಯ ಶಬ್ದವೆನಿಸಿತು.

೨೩. ಪ್ರ ಎಂಬ ಉಪಸರ್ಗದಿಂದ ಕೂಡಿದ ಭಾದೀಪ್ತೌ ಎಂಬ ಧಾತುವು “ ಪ್ರಕರ್ಷೇಣ= ಹೆಚ್ಚಾಗಿ ಭಾಸ್= ಬೆಳಕನ್ನು, ಕರೋತಿ= ಉಂಟುಮಾಡುತ್ತದೆ ” ಎಂಬರ್ಥವನ್ನು ತಿಳಿಸುವುದರಿಂದ ಪ್ರಭಾಕರನೆಂಬ ಹೆಸರೂ ಸೂರ್ಯನಿಗೆ ಸಲ್ಲುವುದು.

೨೪. ಪಂಡಿತರು ದಿವಾ ಎಂಬುದನ್ನು ಅವ್ಯಯವೆಂದು ಹೇಳುವರು, ಇದಕ್ಕೆ ಲಿಂಗವಚನಗಳಾವುವೂ ಇರುವುದಿಲ್ಲ. ಹಗಲು ಎಂಬರ್ಥದಲ್ಲಿ ರೂಢವಾಗಿದೆ. ಅದನ್ನು ಉಂಟುಮಾಡುವನಾದ್ದರಿಂದ ಇವನಿಗೆ ದಿವಾಕರನೆಂಬ ಹೆಸರು ಬಂದಿರುವುದು.

೨೫. ಸೂರ್ಯನು ಮೂರು ಲೋಕಗಳಲ್ಲಿಯೂ ಸಂಚರಿಸುತ್ತಾ ಹಾಗೆಯೇ ಎಲ್ಲವನ್ನೂ ರಕ್ಷಿಸುವನು. ಆದುದರಿಂದ ರಕ್ಷಣಾರ್ಥಕವಾದ ಅವ ಧಾತುವಿನಿಂದ ನಿಷ್ಪನ್ನವಾದ ಸವಿತಾ ಎಂಬ ಶಬ್ದವೂ ಸೂರ್ಯನನ್ನೇ ತಿಳಿಸುವುದು.

ದೇವೈರಭ್ಯರ್ಚಿತೋ ಯಸ್ಮಾತ್ತಸ್ಮಾದರ್ಕಃ ಸ ಉಚ್ಯತೇ ।
ಅಂಡೇ ದ್ವಿಧಾ ಕೃತೇ ಹ್ಯಾರ್ತಂ ದೃಷ್ಟ್ವಾ ಸ್ನೇಹಾತ್ಪಿತಾಽಬ್ರವೀತ್ ।
ಆರ್ತೋ ಮಾಭವ ದೇವೇಶ ಮಾರ್ತಂಡಸ್ತೇನ ಸ ಸ್ಮೃತಃ ॥ ೨೬ ॥

ಯಸ್ಮಾದ್ಧಾರಯತೇ ಲೋಕಾನ್ ಭೂಮಿಂ ತೇಷಾಂ ದದಾತಿ ಚ ।
ಡುಧಾಞ್ ಧಾರಣೇ ಧಾತುಃ ತಸ್ಮಾದ್ಧಾತಾ ಸ ಉಚ್ಯತೇ ॥ ೨೭ ॥

ಅಚಿಪ್ರತ್ಯಯಪೂರ್ವಸ್ಯ ಋುಧಾತೋರ್ಯ ನಿಪಾತ್ಯತೇ ।
ಗತೌ ಯಸ್ಮಾತ್ಪರೋ ನಾಸ್ತಿ ತೇನ ಸೂರ್ಯೋಽರ್ಯಮಾಃ ಸ್ಮೃತಃ॥೨೮॥

---

೨೬. ದೇವತೆಗಳೆಲ್ಲರೂ ಈ ದೇವನನ್ನು ಯಾವಾಗಲೂ ಪೂಜಿಸುವರಾದ್ದರಿಂದ ಪೂಜ್ಯನಾದ ಸೂರ್ಯನಿಗೆ ಅರ್ಕನೆಂದು ಹೆಸರು ಬಂದಿತು.

ಇವನು ಹುಟ್ಟುವಾಗ ಅಂಡವು ಎರಡು ಭಾಗವಾಗಲು, ದುಃಖಿತನಾಗಿರುವ ಇವನನ್ನು ನೋಡಿ, ತಂದೆಯಾದ ಕಶ್ಯಪನು, ಪ್ರೀತಿಯಿಂದ [ಆರ್ತೋಮಾಭವ] ಎಲೈ ದೇವತೆಗಳಿಗೆಲ್ಲಾ ಒಡೆಯನಾಗುವವನೇ, ದುಃಖಿತನಾಗಬೇಡವೆಂದು ಹೇಳಿದುದರಿಂದ, ಸೂರ್ಯನಿಗೆ ಮಾರ್ತಂಡನೆಂದು ಹೆಸರು ಬಂದಿತು.

೨೭. ಲೋಕಗಳನ್ನೆಲ್ಲಾ ಧರಿಸಿ, ಆ ಲೋಕಗಳಿಗೆಲ್ಲ ಆಶ್ರಯ ಕೊಟ್ಟು ಕಾಪಾಡುವನಾದ್ದರಿಂದ ಧಾರಣಾರ್ಥಕವಾದ, ಧಾಞ್ ಧಾತುವಿನಿಂದ ಉಂಟಾಗಿರುವ ಧಾತಾ ಎಂಬ ಶಬ್ದವು ಸೂರ್ಯನನ್ನೆ ತಿಳಿಸುವುದು.

೨೮. ಅರ್ಯಮಾ ಎಂಬ ಶಬ್ದವು, ಅಚ್ ಪ್ರತ್ಯಯವನ್ನೇ ಮೊದಲು ಹೊಂದಿರುವ, ಋಗತೌ ಎಂಬ ಧಾತುವಿನಿಂದ ಉಂಟಾದುದು. ಈ ಧಾತುವಿಗೆ ಅಚ್ ಪ್ರತ್ಯಯಪೂರ್ವಕವಾಗಿದ್ದರೆ, ರ್ಯ ಎಂಬುದು ನಿಪಾತವಾಗಿ ಬರುತ್ತದೆ. ಗಮನದಲ್ಲಿ ಸೂರ್ಯನಿಗಿಂತಲೂ ಶ್ರೇಷ್ಠರೆನಿಸಿದವರಿಲ್ಲವಾದ್ದರಿಂದ, ಈ ಸೂರ್ಯನಿಗೆ ಅರ್ಯಮಾ ಎಂಬ ಹೆಸರು ಬಂದಿತು.

ಸ್ನೇಹೇನ ಸರ್ವಭೂತಾನಿ ಯಸ್ಮಾತ್ತ್ರಾಯತಿ ಭಾಸ್ಕರಃ ।
ಞಿಮಿದಾಸ್ನೇಹನೇ ಧಾತುಸ್ತಸ್ಮಾನ್ಮಿತ್ರ ಸ್ಸ ಉಚ್ಯತೇ ॥ ೨೯ ॥

ವರಾನ್ವಿವೃಣತೋ ದೇವಾನ್ ವರದೋ ಹಿ ವರಾರ್ಥಿನಾಂ ।
ಧಾತುಃ ವೃಞ್‌ವರಣೇ ಪ್ರೋಕ್ತಃ ತೇನಾಸೌ ವರುಣಸ್ಸ್ಮೃತಃ ॥ ೩೦ ॥

ಐಶ್ವರ್ಯಂ ಪರಮಂ ಯಸ್ಯ ಪನ್ನಗಾಶ್ಚ ಸುರಾಸುರಾಃ ।
ಇದಿಶ್ಚ ಪರಮೈಶ್ವರ್ಯೇ ಧಾತುರಿಂದ್ರಸ್ತತಸ್ತು ಸಃ ॥ ೩೧ ॥

ಶಕ್ತೋಽಯಂ ಜಗತಃ ಕರ್ತುಂ ಸರ್ಗಾನುಗ್ರಹಸಂಗ್ರಹಾನ್ ।
ಶಕ್ಲ್‌ಶಕ್ತೌ ಸ್ಮೃತೋ ಧಾತುಃ ಶಕ್ರಸ್ತೇನ ಸ ಉಚ್ಯತೇ ॥ ೩೨ ॥

---

೨೯. ಚರಾಚರಾತ್ಮಕವಾದ ಸಕಲ ಭೂತಗಳನ್ನೂ, ಭಾಸ್ಕರನು ಪ್ರೀತಿಯಿಂದ ಕಾಪಾಡುವನು. ಆದುದರಿಂದ ಞಿಮಿದಾ ಸ್ನೇಹನೆ, ಅಂದರೆ, ಸ್ನೇಹನರೂಪವಾದ ಅರ್ಥವುಳ್ಳ ಮಿದಾ ಧಾತುವಿನಿಂದುದಯಿಸಿದ ಈ ಮಿತ್ರಶಬ್ದವು ಸೂರ್ಯನಿಗೇ ಅನ್ವಯಿಸುವುದು.

೩೦. ವರುಣ ಶಬ್ದವು, ವೃಞ್ ಎಂಬ ವರಣಾರ್ಥಕ ಧಾತುವಿನಿಂದ ಹುಟ್ಟಿದುದು. ವರವನ್ನು ಅಪೇಕ್ಷಿಸುವ ದೇವತೆಗಳೇ ಮೊದಲಾದವರಿಗೆ ವರವನ್ನು ಕರುಣಿಸಿ ಅವರನ್ನು ಅನುಗ್ರಹಿಸುತ್ತ ವರದನೆನಿಸಿರುವ ಈ ಸೂರ್ಯನಿಗೆ ವರುಣನೆಂದು ಹೆಸರುಬಂದಿತು.

೩೧ ಇಂದ್ರ ಶಬ್ದವು ಪರಮೈಶ್ವರ್ಯಾರ್ಥಕವಾದ ಇದಿ ಎಂಬ ಧಾತುವಿನಿಂದ ಹುಟ್ಟಿದೆ ಸೂರ್ಯನಿಗೆ, ನಾಗರು, ದೇವತೆಗಳು ಮತ್ತು ರಾಕ್ಷಸರು ಇವರೇ ಐಶ್ವರ್ಯ ಸ್ವರೂಪವಾಗಿರುವುದರಿಂದ, ಐಶ್ವರ್ಯಶಾಲಿಯೆನಿಸಿರುವ ಈ ಸೂರ್ಯನಿಗೆ ಇಂದ್ರನೆಂಬ ಹೆಸರು ಬಂದಿದೆ.

೩೨. ಶಕ್ರ ಶಬ್ದವು, ಶಕ್ತ್ಯರ್ಥವನ್ನು ತಿಳಿಸುವ ಶಕ್ ಧಾತುವಿನಿಂದ ಹುಟ್ಟಿದೆ. ಸೂರ್ಯನು, ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರವಮಾಡುವುದರಲ್ಲಿ ಸಮರ್ಥನಾಗಿರುವುದರಿಂದ, ಇವನಿಗೆ ಶಕ್ರನೆಂದು ಹೆಸರುಬರಲು ಕಾರಣವಾಯಿತು.

ವಸತ್ಯದೃಷ್ಟಃ ಸರ್ವೇಷು ಭೂತೇಷ್ವಂತರ್ಹಿತೋ ರವಿಃ ।
ಧಾತುರ್ವಸ ನಿವಾಸೇತಿ ವಿವಸ್ವಾನ್ಸ್ತೇನ ತೂಚ್ಯತೇ ॥ ೩೩ ॥

ಗರ್ಜಶಬ್ದೇ ಪ್ರಪೂರ್ವಸ್ಯ ಧಾತೋಃ ಪರ್ಜನ್ನಿಪಾತ್ಯತೇ ।
ಗರ್ಜತ್ಯತೀವ ಯಸ್ಮಾಚ್ಚ ತಸ್ಮಾತ್ಪರ್ಜನ್ಯ ಉಚ್ಯತೇ ॥ ೩೪ ॥

ಯಸ್ಮಾತ್ಸಿಂಚತಿ ಲೋಕಾಂಸ್ತ್ರೀನ್ ಭೂರ್ಭುವಸ್ಸ್ವೋಽಮೃತಾದಿಭಿಃ ।
ಪುಷ ಪುಷ್ಟೌ ಸ್ಮೃತೋ ಧಾತುಃ ತಸ್ಮಾತ್ಪೂಷಾ ಸ ಉಚ್ಯತೇ ॥ ೩೫ ॥

ಅಶೂ ವ್ಯಾಪ್ತಾವಯಂ ಧಾತುಃ ಪ್ರಿಯಶ್ಚಾಪ್ಯನುರಾಗತಃ ।
ಸೂರ್ಯೋ ವ್ಯಾಪ್ತಂ ಜಗದ್ಯಸ್ಮಾತ್ ತಸ್ಮಾದಂಶುಸ್ಸ ಉಚ್ಯತೇ ॥ ೩೬ ॥

---

೩೩. ಇನ್ನೊಬ್ಬರಿಗೆ ಗೋಚರನಾಗದೇ, ಸಕಲಭೂತಗಳಲ್ಲಿಯೂ ಒಳಗೆ ಅಡಗಿಕೊಂಡು ವಾಸಮಾಡುವನಾದ್ದರಿಂದ, ನಿವಾಸಾರ್ಥಕವಾದ, ವಸಧಾತುವಿನಿಂದ ಉಂಟಾಗಿರುವ ವಿವಸ್ವಾನ್ ಎಂಬಶಬ್ದವು ಸೂರ್ಯನನ್ನೇ ಬೋಧಿಸುವುದು.

೩೪. ಪ್ರ ಎಂಬ ಉಪಸರ್ಗ ಪೂರ್ವಕವಾದ, ಶಬ್ದಮಾಡುವ ಎಂಬರ್ಥವನ್ನು ಹೊಂದಿರುವ, ಗರ್ಜ ಧಾತುವಿಗೆ, ಪರ್ಜನ್ ಎಂಬ ನಿಪಾತವು ಬರುತ್ತದೆ. ಹೆಚ್ಚಾಗಿ ಶಬ್ದಮಾಡುವನಾದ್ದರಿಂದ, ( ಮಳೆಗಾಲದಲ್ಲಿ ಗುಡುಗು, ಸಿಡಲು ಮೊದಲಾದವುಗಳು ಉಂಟಾಗುವುದರಿಂದ ) ಈ ಸೂರ್ಯನಿಗೆ ಪರ್ಜನ್ಯನೆಂದು ಹೆಸರು ಬಂದಿತು.

೩೫. ಪೂಷಾ ಎಂಬ ಪದವು, ಪುಷ್ಟ್ಯರ್ಥಕವಾದ ಪುಷ ಧಾತುವಿನಿಂದ ಹುಟ್ಟಿದೆ. ಸೂರ್ಯನು ಭೂಲೋಕ, ಭುವರ್ಲೋಕ, ಸುವರ್ಲೋಕವೆಂಬ ಮೂರು ಲೋಕಗಳನ್ನೂ ಅಮೃತವೇ ಮೊದಲಾದವುಗಳಿಂದ ಸೇಚನೆಮಾಡುತ್ತ, ಆ ಲೋಕಗಳ ಜನಗಳಿಗೆ ಪುಷ್ಟಿಯನ್ನುಂಟು ಮಾಡುತ್ತಿರುವನಾದ್ದರಿಂದ, ಸೂರ್ಯನಿಗೆ ಪೂಷಾ ಎಂದು ಹೆಸರುಬಂದಿತು.

೩೬. ಅಂಶು, ಎಂಬ ಶಬ್ದವು, ವ್ಯಾಪ್ತ್ಯರ್ಥಕವಾದ ಅಶೂ ಎಂಬ ಧಾತುವಿನಿಂದ ಉಂಟಾದುದು. ಸೂರ್ಯನು ಪ್ರಪಂಚವನ್ನೆಲ್ಲಾ ವ್ಯಾಪಿಸಿ, ಪ್ರೀತಿಯಿಂದಲೂ ಮತ್ತು ಅನುರಾಗದಿಂದಲೂ, ಸಲಹುತ್ತಿರುವನಾದ್ದರಿಂದ ಇವನಿಗೆ ಅಂಶು, ಅಥವ ಅಂಶುಮಾನ್; ಎಂದು ಹೆಸರಾಯಿತು.

ಸೇವ್ಯತೇ ಯಃ ಸುರೈಸ್ಸರ್ವೈಃ ಭಾಸ್ಕೈವ ಭಜತೇ ಯತಃ ।
ಧಾತುರ್ಭಜೇತಿ ಸೇವಾಯಾಂ ತೇನಾಸೌ ಭಗ ಉಚ್ಯತೇ ॥ ೩೭ ॥

ತುಷ ತುಷ್ಟೌ ಸ್ಮೃತೋ ಧಾತುಃ ತಸ್ಮಾತ್ತ್ವಷ್ಟಾ ನಿಪಾತ್ಯತೇ ।
ಸೃಜತ್ಯೇಷ ಪ್ರಜಾಸ್ತುಷ್ಟಃ ತ್ವಷ್ಟಾ ತೇನ ಸ ಉಚ್ಯತೇ ॥ ೩೮ ॥

ಯಸ್ಮಾದ್ವಿಶ್ವಮಿದಂ ಸರ್ವಂ ಆದಿತ್ಯೇನೇಹ ರಶ್ಮಿಭಿಃ ।
ವಿಷುವ್ಯಾಪ್ತೌ ಸ್ಮೃತೋ ಧಾತುಃ ತಸ್ಮಾದ್ವಿಷ್ಣುಃ ಸ ಉಚ್ಯತೇ ॥ ೩೯ ॥

ಬೃಹದಸ್ಯ ಶರೀರಂ ಯದಪ್ರಮೇಯಂ ಪ್ರಮಾಣತಃ ।
ಬೃಹದ್ವಿಸ್ತೀರ್ಣಮಿತ್ಯುಕ್ತಂ ಬ್ರಹ್ಮಾ ತೇನ ಸ ಉಚ್ಯತೇ ॥ ೪೦ ॥

ಪೂಜ್ಯಂತೇ ಚ ಸುರೈಸ್ಸರ್ವೈರ್ಮಹಾಂಶ್ಚೈವ ಪ್ರಮಾಣತಃ ।
ಧಾತುರ್ಮಹತ್‌ಪೂಜಾಯಾಂ ಮಹಾದೇವಸ್ತತಃ ಸ್ಮೃತಃ ॥ ೪೧ ॥

೩೭. ಭಗ ಶಬ್ದವು, ಸೇವಾರ್ಥಕವಾದ ಭಜ ಧಾತುವಿನಿಂದ ಹುಟ್ಟಿದುದು. ಸೂರ್ಯನು ಎಲ್ಲಾ ದೇವತೆಗಳಿಂದಲೂ ಸೇವಿಸಲ್ಪಡುತ್ತಾ ಪ್ರಕಾಶವನ್ನು ಹೊಂದುವನಾದ್ದರಿಂದ ಇವನಿಗೆ, ಭಗನೆಂದು ಹೆಸರುಬಂದಿದೆ

೩೮. ತ್ವಷ್ಟಾ ಎಂಬ ಶಬ್ದವು, ತುಷ್ಟ್ಯರ್ಥಬೋಧಕವಾದ ತುಷ ಧಾತುವಿನಿಂದ ಉಂಟಾಗಿದೆ. ಸೂರ್ಯನು, ಸಂತೋಷಹೊಂದಿ ಪ್ರಜಾ ನಿರ್ಮಾಣಕಾರ್ಯ ಮಾಡುವನಾದುದರಿಂದ ಇವನಿಗೆ ತ್ವಷ್ಟಾ ಎಂಬ ನಾಮಧೇಯವು ಅನ್ವರ್ಥವಾಗಿದೆ.

೩೯. ವಿಷ್ಣು ಶಬ್ದವು ವ್ಯಾಪ್ತ್ಯರ್ಥಕವಾದ, ವಿಷು ಧಾತುವಿನಿಂದ ಹುಟ್ಟಿದುದು. ಸೂರ್ಯನು ತನ್ನ ಕಿರಣಗಳಿಂದ, ಸಕಲ ಜಗತ್ತನ್ನೂ ವ್ಯಾಪಿಸಿರುವನಾದ ಕಾರಣ, ಇವನಿಗೆ ವಿಷ್ಣುವೆಂಬ ಹೆಸರು ಪ್ರಸಿದ್ಧವಾಗಿದೆ.

೪೦. ಈ ಸೂರ್ಯನ ಶರೀರವು ದೊಡ್ಡದಾಗಿ, ಅಳತೆಗೆ ಸಿಗದಿರುವುದರಿಂದ ಬಹಳ ದೊಡ್ಡದೂ ವಿಸ್ತಾರವಾದುದೂ, ಆಗಿದೆ. ಅಂತಹ ಶರೀರವುಳ್ಳವನಾದ ಇವನನ್ನು ಬ್ರಹ್ಮನೆಂದು ಎಲ್ಲರೂ, ಕರೆಯುವರು.

೪೧. ಮಹಾದೇವ ಶಬ್ದವು, ಪೂಜಾರ್ಥಕವಾದ ಮಹ ಧಾತುವಿನಿಂದ ಉಂಟಾದುದು. ಆದಿತ್ಯನು, ದೊಡ್ಡವನೆನಿಸಿ, ಎಲ್ಲಾ ದೇವತೆಗಳಿಂದಲೂ ಪೂಜೆಯನ್ನು ಹೊಂದುತ್ತಿರುವನಾದುದರಿಂದ ಇವನಿಗೆ ಮಹಾದೇವನೆಂದು ಹೆಸರು ಬಂದಿತು.

ಯನ್ನಿರ್ವಹತಿ ಯದ್ವೀಕ್ಷೇದ್ಯದುಗ್ರೋ ಯತ್ಪ್ರತಾಪವಾ ।
ಮಾಂಸಶೋಣಿತಮಜ್ಜಾದೌ ಯತ್ತತೋ ರುದ್ರ ಉಚ್ಯತೇ ॥ ೪೨ ॥
ಯಸ್ಮಾತ್ಸೃಷ್ಟ್ಯನುಗೃಹ್ಣೀತೇ ಗೃಹ್ಯತೇ ಚೈವ ಯತ್ಪುನಃ ।
ಗುಣಾತ್ಮನಾ ತು ತ್ರೈಕಾಲಃ ತಸ್ಮಾದೇವ ಸ ಉಚ್ಯತೇ ॥ ೪೩ ॥
ಅಯಂ ಪರಮಯಂ ನೇತಿ ಬ್ರುವತೇ ಭಿನ್ನದರ್ಶನಾಃ ।
ತಾಮಸಾನ್ ಮೂಢಭಾವಾಚ್ಚ ದೃಷ್ಟ್ವಾ ತಾನ್ವಿಬ್ರುವಂತಿ ಚ ॥ ೪೪ ॥
ಬ್ರಹ್ಮಣಃ ಕಾರಣಂ ಕೇಚಿತ್ಕೇಚಿದಾಹುರ್ದಿವಾಕರಮ್ ।
ಕೇಚಿದ್ಭಕ್ತಿಪರತ್ವೇನ ತ್ವಾಹುರ್ವಿಷ್ಣುಂ ತಥಾಽಪರೇ ॥ ೪೫ ॥

---

೪೨. ಮಾಂಸ, ರಕ್ತ, ಮೇದಸ್ಸು ಇವೇ ಮೊದಲಾದವುಗಳಲ್ಲಿ, ಕೆಲವನ್ನು ಧರಿಸಿ, ಕೆಲವನ್ನು ನೋಡುತ್ತ, ಕೆಲವಲ್ಲಿ ಕ್ರೂರನಾಗಿ, ತೇಜಸ್ವಿಯಾದ ಕಾರಣ, ಈ ಸೂರ್ಯನು ರುದ್ರನೆಂಬ ಹೆಸರನ್ನು ಪಡೆಯುವನು.

೪೩. ಸತ್ವರಜಸ್ತಮೋಗುಣ ಸ್ವರೂಪದಿಂದ ಆಗಿಂದಾಗ್ಗೆ, ಸೃಷ್ಟಿ, ಸ್ಥಿತಿ ಸಂಹಾರ ಕಾರ್ಯಗಳನ್ನೆಸಗುತ್ತಾ, ಗುಣಸ್ವರೂಪನೆಂದೆನಿಸಿ ಮೂರು ಕಾಲಗಳಲ್ಲಿಯೂ ಪ್ರಕಾಶಿಸುವನಾದುದರಿಂದ ಸೂರ್ಯನನ್ನು ತ್ರೈಕಾಲಿಕನೆಂದು ಕರೆಯುವರು ಅಥವಾ, ಪ್ರಾತಃಕಾಲದಲ್ಲಿ ಉದಯಿಸಿ, ಮಧ್ಯಾಹ್ನದಲ್ಲಿ ರಕ್ಷಣೆ ಮಾಡುತ್ತ ಪುನಃ ಸಾಯಂಕಾಲದಲ್ಲಿ ತನ್ನ ಕಿರಣಗಳನ್ನು ತಾನೇ ಹಿಂದಕ್ಕೆ ತೆಗೆದುಕೊಳ್ಳುವುದರಿಂದ ಬೆಳಗ್ಗೆ, ಮಧ್ಯಾಹ್ನ, ಮತ್ತು ಸಾಯಂಕಾಲವೆಂಬ ಮೂರು ಕಾಲಗಳಲ್ಲಿಯೂ ಪ್ರಕಾಶಿಸುವನಾದಕಾರಣ ಇವನನ್ನು ತ್ರೈಕಾಲಕನೆಂದು ಕರೆಯುವರು.

೪೪. ಭಿನ್ನ ಭಿನ್ನದರ್ಶನವನ್ನು ತಿಳಿದವರು, ಇವನು ಉತ್ಕೃಷ್ಟನು, ಇವನುತ್ತಮನಲ್ಲವೆಂದು ಹೇಳುವರು. ಮತ್ತು ಅಜ್ಞಾನಿಗಳು ಮೂಢ ಭಾವನೆಯಿಂದಲೇ ನೋಡುತ್ತ, ಅವರಿಗೆ ಇದೇ ರೀತಿ ಉಪದೇಶಮಾಡುವರು.

೪೫. ಕೆಲವರು, ಬ್ರಹ್ಮನೇ ಪ್ರಪಂಚಕ್ಕೆಲ್ಲಾ ಮೂಲ ಕಾರಣನೆನ್ನುವರು. ಇನ್ನು ಕೆಲವರು, ಸೂರ್ಯನೇ, ಆದಿ ಕಾರಣನು ಎನ್ನುವರು. ಮತ್ತೆ ಕೆಲವರು ವಿಷ್ಣುಭಕ್ತರಾದುದರಿಂದ ವಿಷ್ಣುವನ್ನೇ ಜಗತ್ಕಾರಣನೆಂದೂ ಹೇಳುವರು.

ಕಾರಣಾಸ್ತು ಸ್ಮೃತಾಹ್ಯೇತೇ ನಾನಾರ್ಥೇಷು ಸುರೋತ್ತಮ ।
ಏಕಃ ಸ ತು ಪೃಥಕ್ತ್ವೇನ ಸ್ವಯಂಭೂರಿತಿ ವಿಶ್ರುತಃ ॥ ೪೬ ॥

ಯದಾನುರುಧ್ಯತೇ ವರ್ಣೈರ್ವಿಚಿತ್ರೈಃ ಸ್ಫಟಿಕೋ ಮಣಿಃ ।
ತಥಾ ಗುಣವಶಾತ್ತಸ್ಯ ಸ್ವಯಂಭೂರಸುರಂಜನಾತ್ ॥ ೪೭ ॥

ಏಕೋ ಭೂತ್ವಾ ಮಹಾಮೇಘಃ ಪೃಥಕ್ತ್ವೇನಾವತಿಷ್ಠತೇ ।
ವರ್ಣತೋ ರೂಪತಶ್ಚೈವ ಯಥಾ ಗುಣವಶಾತ್ತು ಸಃ ॥ ೪೮ ॥

ನಭಸಃ ಪತಿತಂ ತೋಯಂ ಯಾತಿ ತೋಯಾಂತರಂ ಯಥಾ ।
ಭೂಮೇರಥವಿಶೇಷೇಣ ತಥಾ ಗುಣವಶಾತ್ತು ಸಃ ॥ ೪೯ ॥

ಯಥಾ ದಿವ್ಯವಿಶೇಷಾದ್ವಾ ವಾಯುರೇಕಃ ಪೃಥಗ್ಭವೇತ್ ।
ದುರ್ಗಂಧೋ ವಾ ಸುಗಂಧೋ ವಾ ತಥಾ ಗುಣವಶಾತ್ತು ಸಃ ॥ ೫೦ ॥

---

೪೬. ಎಲೈ ದೇವೋತ್ತಮನಾದ ಸಾಂಬನೆ; ಸೂರ್ಯನಿಗೆ ಅನೇಕ ಹೆಸರು ಬರಲು ಕಾರಣವೇನೆಂಬುದನ್ನು ಇಲ್ಲಿಯವರಿಗೆ ತಿಳಿಸಿದೆನು. ಅವನೊಬ್ಬನೇ ಪ್ರತ್ಯೇಕನೆನಿಸಿ ಸ್ವಯಮುತ್ಪನ್ನನಾದುದರಿಂದ ಸ್ವಯಂಭೂ ಎಂದು ಪ್ರಸಿದ್ಧನಾಗಿರುವನು.

೪೭-೪೮. ಸ್ಫಟಿಕ ಮಣಿಯು ಒಂದೇಆದರೂ ಅನೇಕ ವರ್ಣಗಳ ಸಂಬಂಧದಿಂದ, ಬೇರೆ ಬೇರೆಯಾಗಿ ಕಾಣುವಂತೆ, ಸ್ವಯಂಭೂ ಎನಿಸಿದ ಈ ದೊಡ್ಡಮೇಘವು ಬೇರೆ ಬೇರೆ ವರ್ಣಗಳಿಂದಲೂ, ರೂಪಗಳಿಂದಲೂ ಸಹ ಬೇರೆಬೇರೆಯಾಗಿರುವಂತೆ ಕಾಣಬರುವುದು.

೪೯. ಅಂತರಿಕ್ಷದಿಂದ ಭೂಮಿಯಮೇಲೆ ಬಿದ್ದ ನೀರು ಅಧಿಷ್ಠಾನಭೇದದಿಂದ ನಾಮಾಂತರಗಳನ್ನು ಪಡೆಯುವಂತೆ, ಆಯಾಯ ಗುಣವಿಶೇಷಗಳಿಂದ ಬೇರೆಬೇರೆ ಹೆಸರುಗಳು ತೋರುತ್ತಿದ್ದರೂ, ಎಲ್ಲವೂ ಸೂರ್ಯನನ್ನೇ ತಿಳಿಸುವುವು.

೫೦. ವಾಯುವೊಂದೇ ಆದರೂ ಆಶ್ರಯ ಭೇದದಿಂದ, ದುರ್ಗಂಧವಾಗಿಯೂ ಸುಗಂಧವಾಗಿಯೂ ಹೇಗೆ ತೋರುವುದೋ, ಅದರಂತೆಯೇ ಸೂರ್ಯನೊಬ್ಬನೇ ಅನೇಕ ರೂಪದಿಂದ ತೋರುವನೆಂದು ತಿಳಿಯಬೇಕು.

ಯಥಾ ವಾ ಗಾರ್ಹಪತ್ಯೋಽಗ್ನಿ ರನ್ಯತ್ಸಂಜ್ಞಾಂತರಂ ವ್ರಜೇತ್ ।
ದಕ್ಷಿಣಾಹವನೀಯಾದಿ ಬ್ರಹ್ಮಾದಿಷು ತಥಾ ಹ್ಯಸೌ ॥ ೫೧ ॥

ಏಕತ್ವೇ ಚ ಪೃಥಕ್ತ್ವೇ ಚ ಪ್ರೋಕ್ತಮೇತನ್ನಿದರ್ಶನಂ ।
ತಸ್ಮಾದ್ಭಕ್ತಿಃ ಪರಾ ಕಾರ್ಯಾ ದೇವೇಽಹ್ಯಸ್ಮಿನ್ದಿವಾಕರೇ ॥ ೫೨ ॥

ಏಷ ಬ್ರಹ್ಮಾ ಚ ವಿಷ್ಣುಶ್ಚ ಏಷ ಏವ ಮಹೇಶ್ವರಃ ।
ಏಷ ವೇದಾಶ್ಚ ಯಜ್ಞಾಶ್ಚ ಸ್ವರ್ಗಶ್ಚೈವ ನ ಸಂಶಯಃ ॥ ೫೩ ॥

ಸೂರ್ಯವ್ಯಾಪ್ತಮಿದಂ ವಿಶ್ವಂ ಜಗತ್ಸ್ಥಾವರಜಂಗಮಂ ।
ಅದ್ಯತೇ ಪೀಯತೇ ಚೈವ ಅನ್ನಪಾನಾತ್ಮಕೋ ರವಿಃ ॥ ೫೪ ॥

---

೫೧ ಗಾರ್ಹಪತ್ಯಾಗ್ನಿಯು, ಮಂತ್ರಭೇದದಿಂದ, ವೇದಭೇದದಿಂದ ದಕ್ಷಿಣಾಗ್ನಿ, ಆಹವನೀಯವೆಂಬ ನಾಮಾಂತರವನ್ನು ಹೊಂದಿ ಬೇರೆ ಬೇರೆಯಾಗಿ ತೋರುವಂತೆ, ಈ ಸೂರ್ಯನು, ಬ್ರಹ್ಮ. ವಿಷ್ಣು, ಮಹೇಶ್ವರಾದಿಯಾಗಿ ಅನೇಕ ಹೆಸರುಗಳಿಂದ ಕರೆಯಲ್ಪಡುವನು.

೫೨. ಎಲೈ ಸಾಂಬನೇ, ಸೂರ್ಯ ಪರಮಾತ್ಮನು, ಒಬ್ಬನೇ ಎಂಬ ವಿಷಯದಲ್ಲಿಯೂ, ನಾನಾಹೆಸರುಗಳಿಂದ ಬೇರೆ ಬೇರೆಯಾಗಿ ತೋರುವನೆಂಬುದರಲ್ಲಿಯೂ ಅನೇಕ ಉದಾಹರಣೆಗಳನ್ನು ಹೇಳಿ ತಿಳಿಸಿದುದಾಯಿತು. ಇನ್ನು ಈ ಸೂರ್ಯನಲ್ಲಿ ಶ್ರೇಷ್ಠವಾದ ಭಕ್ತಿಯನ್ನಿಟ್ಟು ಯಾವಾಗಲೂ ಪೂಜಿಸು.

೫೩. ಈ ಸೂರ್ಯನೇ, ಬ್ರಹ್ಮ ವಿಷ್ಣು ಮಹೇಶ್ವರ ಸ್ವರೂಪನು. ಇವನೇ ವೇದಗಳು, ಯಜ್ಞಗಳೂ ಮತ್ತು ಸ್ವರ್ಗ ಇವುಗಳ ಸ್ವರೂಪವುಳ್ಳವನು. ಇದರಲ್ಲಿ ಸಂಶಯವಿಲ್ಲ.

೫೪. ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವನ್ನು ಸೂರ್ಯನು ವ್ಯಾಪಿಸಿರುವನು. ಅನ್ನಪಾನ ಸ್ವರೂಪನಾದ ಈ ರವಿಯು ಈ ಪ್ರಪಂಚವು ಅನ್ನ ಸ್ವರೂಪವಾದಾಗ ಭಕ್ಷಿಸುತ್ತಲೂ, ಜಲಸ್ವರೂಪವಾದಾಗ ಪಾನಮಾಡುತ್ತಲೂ ಇರುವನು.

ಸರ್ವತ್ರ ಸವಿತಾ ದೇವಸ್ತನುಭಿರ್ನಾಮಭಿ ಶ್ಚ ಸಃ ।
ವೃಕ್ಷೇಷು ಚ ತಿಥೌ ವಾಯೌ ವ್ಯೋಮ್ನಿ ಚಾಗ್ನೌ ಚ ಸರ್ವಶಃ ॥ ೫೫ ॥
ಏವಂ ವಿಧೋ ಹ್ಯಯಂ ಸೂರ್ಯಃ ಸದಾ ಪೂಜ್ಯೋ ವಿಜಾನತಾ ।
ಆದಿತ್ಯಂ ವೇತ್ತಿ ಯಸ್ತ್ವೇನಂ ತಸ್ಮಿನ್ನೇವ ಪ್ರಲೀಯತೇ ॥ ೫೬ ॥
ಅಪ್ಯೇಕಂ ವೇತ್ತಿ ಯೋ ನಾಮಧಾತ್ವರ್ಥನಿಗಮೈರವೇಃ ।
ಸ ರೋಗೈರ್ವರ್ಜಿತಃ ಸರ್ವೈಃ ಸದ್ಯಃ ಪಾಪಾತ್ಪ್ರಮುಚ್ಯತೇ ॥ ೫೭ ॥
ನ ಹಿ ಪಾಪಕೃತಃ ಸಾಂಬ ಭಕ್ತಿರ್ಭವತಿ ಭಾಸ್ಕರೇ ।
ತಸ್ಮಾತ್ತ್ವಂ ಪರಯಾ ಭಕ್ತ್ಯಾ ಪ್ರಪದ್ಯಸ್ವ ದಿವಾಕರಮ್ ॥ ೫೮ ॥

ಇತಿ ಶ್ರೀ ಸಾಂಬಪುರಾಣೇ ಸೂರ್ಯನಿಗಮನಂನಾಮ
ನವಮೋಽಧ್ಯಾಯಃ.

---

೫೫. ಸೂರ್ಯನು, ಎಲ್ಲಾ ಕಡೆಗಳಲ್ಲಿಯೂ, ನಕ್ಷತ್ರ, ತಿಥಿ, ವಾಯು, ಅಂತರಿಕ್ಷ, ಅಗ್ನಿ ಇವೇ ಮೊದಲಾದವುಗಳಲ್ಲಿಯೂ ನಾನಾ ಹೆಸರುಗಳಿಂದ ಅನೇಕ ರೂಪವನ್ನು ಧರಿಸಿ ನೆಲಸಿರುವನು.

೫೬. ಬುದ್ಧಿವಂತನಾದವನು, ಈರೀತಿಯಾದ ಸೂರ್ಯನನ್ನು ತಿಳಿದು ಪೂಜಿಸಬೇಕು. ಹಾಗೆ ಯಾವಾಗಲೂ ಪೂಜಿಸಿದರೆ, ಕೊನೆಗೆ ಆದಿತ್ಯನಲ್ಲೇ ಅವನು ಐಕ್ಯನಾಗುವನು.

೫೭. ಯಾರು ಸೂರ್ಯನ ಒಂದೇ ಒಂದು ಹೆಸರನ್ನಾದರೂ, ಧಾತ್ವರ್ಥಗಳ ನಿಯಮವನ್ನನುಸರಿಸಿ ಸರಿಯಾಗಿ ತಿಳಿಯುವನೋ, ಅಂಥಹವನು ಸಕಲ ರೋಗಗಳಿಂದಲೂ ಬಿಡಲ್ಪಟ್ಟು, ಕೂಡಲೇ ಪಾಪರಹಿತನಾಗುವನು.

೫೮. ಎಲೈ ಸಾಂಬನೇ, ಪಾಪಿಯಾದ ಪುರುಷನಿಗೆ ಸೂರ್ಯನಲ್ಲಿ ಭಕ್ತಿಯುಂಟಾಗುವುದಿಲ್ಲ. ಆದುದರಿಂದ ನೀನು ಉತ್ತಮವಾದ ಭಕ್ತಿಯಿಂದ ಸೂರ್ಯನನ್ನು ಪೂಜಿಸಿ ಅವನ ಸಾನ್ನಿಧ್ಯವನ್ನು ಪಡೆಯುವನಾಗು, ಎಂದು ನಾರದನು ಕೃಷ್ಣಪುತ್ರನಾದ ಸಾಂಬನಿಗೆ ಹೇಳಿದನು.

ಇಲ್ಲಿಗೆ ಸಾಂಬಪುರಾಣದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದಶಮೋಽಧ್ಯಾಯಃ



॥ ವಸಿಷ್ಠ ಉವಾಚ ॥

ಏವಂ ಶ್ರುತ್ವಾ ತು ಕಾರ್ತ್ಸ್ನ್ಯೇನ ಹೃಷ್ಟೋ ಜಾಂಬವತೀಸುತಃ ।
ಜಾತಕೌತೂಹಲೋ ಭೂಯಃ ಪರಿಪಪ್ರಚ್ಛ ನಾರದಂ ॥ ೧ ॥

॥ ಸಾಂಬ ಉವಾಚ ॥

ಅಹೋ ಸೂರ್ಯಸ್ಯ ಮಾಹಾತ್ಮ್ಯಂ ವರ್ಣಿತಂ ಹರ್ಷವರ್ಧನಂ ।
ಯೇನ ಮೇ ಭಕ್ತಿರುತ್ಪನ್ನಾ ಪರೇ ದೇವೇ ವಿಭಾವಸೌ ॥ ೨ ॥

---

## ಹತ್ತನೆಯ ಅಧ್ಯಾಯ.

೧. ಜಾಂಬವತೀ ಸುತನಾದ ಸಾಂಬನು ಈರೀತಿ ಸೂರ್ಯನ ವೃತ್ತಾಂತವನ್ನೆಲ್ಲಾ ಸಂಪೂರ್ಣವಾಗಿ ನಾರದನಿಂದ ಕೇಳಿ, ಪುನಃ ಕುತೂಹಲವುಳ್ಳವನಾಗಿ ನಾರದನನ್ನು ಮುಂದೆ ಹೇಳುವಂತೆ ಕೇಳಿದನು. ಎಂದು ವಸಿಷ್ಠರು ಬೃಹದ್ಬಲ ರಾಜನಿಗೆ ತಿಳಿಸಿದರು.

೨-೩. ಕೃಷ್ಣ ಪುತ್ರನಾದ ಸಾಂಬನು ನಾರದನನ್ನು ಕುರಿತು, " ಎಲೈ ಮಹಾ ಮುನಿಯೇ, ಸೂರ್ಯನ ಮಹಿಮೆಯು ಆಶ್ಚರ್ಯಕರವಾದುದು. ನೀನು ಅದನ್ನು ನನಗೆ ತಿಳಿಸಿ ಸಂತೋಷವನ್ನು ಹೆಚ್ಚುವಂತೆ ಮಾಡಿರುವೆ. ಇದನ್ನು ಕೇಳಿದುದರಿಂದ ಶ್ರೇಷ್ಠನಾದ ಈ ಸೂರ್ಯ ಪರಮಾತ್ಮನಲ್ಲಿ ನನಗೆ ಭಕ್ತಿಯುಂಟಾಗಿದೆ. ಆದ್ದರಿಂದ

**ಅತೋ ರಾಜ್ಞೀಂ ಮಹಾಭಾಗಾಂ ನಿಕ್ಷುಭಾಂ ಚ ಮಹಾಮುನೇ ।**
**ದಂಡಿನಂ ಪಿಂಗಲಾದೀಂಶ್ಚ ಏವಮೇವ ವದಸ್ವ ಮೇ ॥ ೩ ॥**

**॥ ನಾರದ ಉವಾಚ ॥**

**ಪ್ರಾಗುಕ್ತೇಽರ್ಕಸ್ಯ ದ್ವೇ ಭಾರ್ಯೇ ತೇ ರಾಜ್ಞೀ ನಿಕ್ಷುಭೇ ಶುಭೇ ।**
**ತಯೋಶ್ಚ ರಾಜ್ಞೀ ದ್ಯೌರ್ಜ್ಞೇಯಾ ನಿಕ್ಷುಭಾ ಪೃಥಿವೀ ಸ್ಮೃತಾ ॥ ೪ ॥**

**ಪೌಷಸ್ಯ ಕೃಷ್ಣಸಪ್ತಮ್ಯಾಂ ದ್ಯೌರರ್ಕೇಣೇಹ ಪೂಜ್ಯತೇ ।**
**ಮಾಘಸ್ಯ ಕೃಷ್ಣಸಪ್ತಮ್ಯಾಂ ಮಹ್ಯಾ ಸಹ ಭವೇದ್ರವಿಃ ॥ ೫ ॥**

**ಭೂಶ್ಚಾದಿತ್ಯಶ್ಚ ಭಗವಾನ್ ಗಚ್ಛತಃ ಸಂಗಮಂ ತದಾ ।**
**ಋತುಸ್ನಾತಾ ಮಹೀ ತತ್ರ ಗರ್ಭಂ ಗೃಹ್ಣಾತಿ ಭಾಸ್ಕರಾತ್ ॥ ೬ ॥**

---

ನೀನು ಹಿಂದೆ ತಿಳಿಸಿದ ಸೂರ್ಯನ ಪತ್ನಿಯರೆನಿಸಿದ, ಶ್ರೇಷ್ಠಳಾದ, ರಾಜ್ಞೀ ಎಂಬುವಳೂ, ನಿಕ್ಷುಭಾದೇವಿಯೂ ಯಾರು ? ಅಲ್ಲದೇ ದಂಡೀ, ಪಿಂಗಲ ಮೊದಲಾದವರ ವೃತ್ತಾಂತವೇನು ? ಇವೆಲ್ಲವನ್ನೂ ವಿಶದವಾಗಿ ತಿಳಿಸಬೇಕು" ಎಂದು ಪ್ರಾರ್ಥಿಸಿದನು.

೪. "ಎಲೈ ಸಾಂಬನೆ, ಸೂರ್ಯನಿಗೆ, ರಾಜ್ಞೀ ಮತ್ತೂ ನಿಕ್ಷುಭೆ ಎಂಬ ಇಬ್ಬರು ಪತ್ನಿಯರೆಂದು, ಹಿಂದೆ ತಿಳಿಸಿದ್ದೇನೆ. ಅವರಲ್ಲಿ, ರಾಜ್ಞೀ ಎಂಬುವಳೇ ಸ್ವರ್ಗವೆಂದೂ, ಅಥವ ಅಂತರಿಕ್ಷವೆಂದೂ ನಿಕ್ಷುಭಾ ಎಂಬುವಳೇ ಭೂಮಿಯೆಂದೂ ತಿಳಿಯಬೇಕು". ಎಂದು ನಾರದನು ಸಾಂಬನ ಪ್ರಶ್ನೆಗೆ ಉತ್ತರ ಹೇಳಲಾರಂಭಿಸಿದನು.

೫. ಪುಷ್ಯಮಾಸದ ಕೃಷ್ಣಪಕ್ಷ ಸಪ್ತಮೀ ದಿವಸ ಅಂತರಿಕ್ಷವು ಸೂರ್ಯನಿಂದ ಪೂಜಿಸಲ್ಪಡುತ್ತದೆ. ಮಾಘಮಾಸದ ಕೃಷ್ಣಪಕ್ಷ ಸಪ್ತಮೀದಿನ ಭೂಮಿಯೊಡನೆ ಸೇರಿ ಸೂರ್ಯನು ಸೇವೆ ಹೊಂದುವನು.

೬. ಆ ಮಾಘ ಬಹುಳ ಸಪ್ತಮೀ ದಿವಸ, ಭೂಮಿಯೂ, ಸೂರ್ಯನೂ ಒಟ್ಟಿಗೆ ಸೇರುವರು. ಆವಾಗ ಭೂದೇವಿಯು ಋತುಸ್ನಾನಮಾಡಿ ಸೂರ್ಯನಿಂದ ಗರ್ಭವನ್ನು ಧರಿಸುವಳು.

ದ್ಯೌರ್ಜಲಂ ಸೂರ್ಯತೋ ಗರ್ಭಂ ವರ್ಷಾಸ್ವೃತುಷು ಭೂತಲೇ ।
ತತ್ರ ಲೌಕಿಕವಾರ್ತಾರ್ಥಂ ಮಹೀ ಸಸ್ಯಂ ಪ್ರಸೂಯತೇ ॥ ೭ ॥

ಸಸ್ಯೋಪಯೋಗಸಂಹೃಷ್ಟಾ ಆಹುತಿಂ ಜುಹ್ವತಿ ದ್ವಿಜಾಃ ।
ಸ್ವಾಹಾಕಾರವಷಟ್ಕಾರೈರ್ಯಜಂತೇ ಪಿತೃದೇವತಾಃ ॥ ೮ ॥

ನಿಕ್ಷುಭಾ ಕುರುತೇ ಯಸ್ಮಾದೋಷಧೀಭಿಃ ಸ್ವಧಾಮೃತೈಃ ।
ಮರ್ತ್ಯಾನ್ಪಿತೄಂಶ್ಚ ದೇವಾಂಶ್ಚ ತೇನ ಭೂರ್ನಿಕ್ಷುಭಾ ಸ್ಮೃತಾ ॥ ೯ ॥

ಯಥಾ ರಾಜ್ಞೀ ದ್ವಿಧಾ ಭೂತಾ ಯಸ್ಯ ಚೇಯಂ ಸುತಾ ಸ್ಮೃತಾ ।
ಅಪತ್ಯಾನಿ ಚ ಯಾನ್ಯಸ್ಯಾ ತಾನಿ ವಕ್ಷ್ಯಾಮಿ ತಚ್ಛೃಣು ॥ ೧೦ ॥

---

೭. ಅಂತರಿಕ್ಷವು ಸೂರ್ಯನಿಂದ ಜಲರೂಪಗರ್ಭವನ್ನು ಧರಿಸಿ ಮಳೆಗಾಲದಲ್ಲಿ ಗರ್ಭಿಣಿಯಾಗುತ್ತದೆ. ಭೂಮಿಯು ಈವರ್ಷಾಕಾಲದಲ್ಲಿ ಲೋಕಗಳಿಗೆಲ್ಲಾ ಈ ಸಮಾಚಾರಗಳನ್ನು ತಿಳಿಸಲೋಸುಗ ಪೈರುಗಳನ್ನು ಬಿಡುತ್ತದೆ.

೮. ಈ ಸಸ್ಯಗಳನ್ನುಪಯೋಗಿಸಿ, ಸಂತೋಷ ಹೊಂದಿ ಬ್ರಾಹ್ಮಣರು ಅಗ್ನಿಯಲ್ಲಿ ಆಹುತಿಯನ್ನು ಕೊಡುತ್ತಾರೆ. ಪಿತೃಗಳೂ ದೇವತೆಗಳೂ ಸಹ, ಸ್ವಾಹಾ ಕಾರವಷಟ್ಕಾರ ರೂಪವಾದ ಆಹುತಿಗಳನ್ನು ಹೊಂದುವರು.

೯. ಭೂಮಿಯು, ಓಷಧಿಗಳಿಂದ ಮನುಷ್ಯರನ್ನೂ, ಸ್ವಧೆಯಿಂದ ಪಿತೃ ಗಳನ್ನೂ, ಅಮೃತದಿಂದ ದೇವತೆಗಳನ್ನೂ ಸಹ ಕ್ಷೋಭೆ ಇಲ್ಲದವರನ್ನಾಗಿಮಾಡಿ ಅವರಿಗೆ ಸಂತೋಷವನ್ನುಂಟುಮಾಡುವುದರಿಂದ, ಈ ಭೂದೇವಿಗೆ ನಿಕ್ಷುಭಾ ಎಂದು ಹೆಸರು ಬಂದಿತು.

೧೦. ಇಲ್ಲಿಯವರೆಗೆ ನಿಕ್ಷುಭಾದೇವಿಯು ಆ ಹೆಸರನ್ನು ಹೊಂದಲು ಕಾರಣವನ್ನು ತಿಳಿಸಿದೆನು. ಈಗ ಎಲೈ ಸಾಂಬನೆ, ರಾಜ್ಞೀ ಎಂಬುವಳು ಎರಡು ಸ್ವರೂಪವನ್ನು ಹೊಂದಿದುದು ಹೇಗೆ? "(ಅಂದರೆ, ರಾಜ್ಞೀ, ಅಂತರಿಕ್ಷವೆಂಬ") ಇವಳು ಯಾರ ಮಗಳು? ಇವಳ ಮಕ್ಕಳಿಷ್ಟೆಂಬ ವಿಷಯವನ್ನು ನಿನಗೆ ತಿಳಿಸುವೆನು ಕೇಳು ಎಂದು ನಾರದನು ವಿಷಯವನ್ನು ಮುಂದುವರಿಸಿದನು.

ಮರೀಚಿರ್ಬ್ರಹ್ಮಣಃ ಪುತ್ರೋ ಮರೀಚೇಃ ಕಶ್ಯಪಃ ಸುತಃ ।
ತಸ್ಮಾದ್ಧಿರಣ್ಯಕಶಿಪುಃ ಪ್ರಹ್ಲಾದಸ್ತಸ್ಯ ಚಾತ್ಮಜಃ ॥ ೧೧ ॥

ಪ್ರಹ್ಲಾದಸ್ಯ ಸುತೋ ನಾಮ್ನಾ ವಿಶ್ರುತೋಽಥ ವಿರೋಚನಃ ।
ವಿರೋಚನಸ್ಯ ಭಗಿನೀ ಸಂಜ್ಞಯಾ ಜನನೀ ತು ಸಾ ॥ ೧೨ ॥

ಹಿರಣ್ಯಕಶಿಪೋಃ ಪೌತ್ರೀ ದಿತೇಃ ಪುತ್ರಸ್ಯ ಸಾ ಸ್ಮೃತಾ ।
ಸಾ ವಿಶ್ವಕರ್ಮಣಃ ಪತ್ನೀ ಪ್ರಾಹ್ಲಾದೀ ಚೋಚ್ಯತೇ ಬುಧೈಃ ॥ ೧೩ ॥

ಅಥ ನಾಮ್ನಾ ಸುರೂಪೇತಿ ಮರೀಚೇರ್ದುಹಿತಾ ಶುಭಾ ।
ಪತ್ನೀಹ್ಯಂಗಿರಸಃ ಸಾ ತು ಜನನೀ ಚ ಬೃಹಸ್ಪತೇಃ ॥ ೧೪ ॥

ಬೃಹಸ್ಪತೇಶ್ಚ ಭಗಿನೀ ಭುವನೀ ಬ್ರಹ್ಮವಾದಿನೀ ।
ಪ್ರಭಾಸಸ್ಯ ತು ಸಾ ಪತ್ನೀ ವಸೂನಾಮಷ್ಟಮಸ್ಯ ತು ॥ ೧೫ ॥

---

೧೧-೧೨. ಮರೀಚಿಯು ಬ್ರಹ್ಮನ ಮಗನು. ಮರೀಚಿಯ ಮಗನು ಕಶ್ಯಪನು. ಕಶ್ಯಪನ ಮಗನು ಹಿರಣ್ಯಕಶಿಪುವು. ಇವನ ಮಗನೇ ಪ್ರಹ್ಲಾದನು. ಪ್ರಹ್ಲಾದನ ಮಗನು ಪ್ರಸಿದ್ಧನಾದ ವಿರೋಚನೆಂಬುವನು. ಆ ವಿರೋಚನನಿಗೆ ಒಬ್ಬಳು ತಂಗಿಯಿದ್ದಳು. ಅವಳ ಹೆಸರು ಜನನೀ ಎಂದು.

೧೩. ಕಶ್ಯಪರಿಂದ ದಿತಿಯಲ್ಲಿ ಹಿರಣ್ಯಕಶಿಪು ಉದಯಿಸಿದನು. ಇವನ ಮೊಮ್ಮಗಳೇ ಜನನೀ ಎಂಬುವಳು. ಇವಳು ವಿಶ್ವಕರ್ಮನ ಪತ್ನಿಯು. ಇವಳನ್ನೂ ಪ್ರಾಹ್ಲಾದೀ ಎಂದೂ (ಪ್ರಹ್ಲಾದನ ಮಗಳಾದ್ದರಿಂದ) ತಿಳಿದವರು ಕರೆಯುವರು.

೧೪-೧೫. ಮರೀಚಿ ಬ್ರಹ್ಮನಿಗೆ ಸುರೂಪಳೆಂಬ ಮಗಳಿದ್ದಳು. ಅವಳು ಅಂಗಿರಸನ ಹೆಂಡತಿ. ಬೃಹಸ್ಪತ್ಯಾಚಾರ್ಯನ ತಾಯಿಯಾದವಳು. ಬೃಹಸ್ಪತ್ಯಾಚಾರ್ಯನಿಗೆ ಬ್ರಹ್ಮಸ್ವರೂಪವನ್ನು ತಿಳಿದಿರುವ ಭುವನೀ ಎಂಬ ಹೆಸರುಳ್ಳ ತಂಗಿಯಿದ್ದಳು. ಇವಳು ಎಂಟನೆಯ ವಸುವಾದ ಪ್ರಭಾಸನ ಹೆಂಡತಿ.

ಪ್ರಸೂತಾ ವಿಶ್ವಕರ್ಮಾಣಂ ಸರ್ವಶಿಲ್ಪವತಾಂ ವರಂ ।
ಸ ವೈ ನಾಮ್ನಾ ಪುನಸ್ತ್ವಷ್ಟಾ ತ್ರಿದಶಾನಾಂ ಸ ವರ್ಧಕಿಃ ॥ ೧೬ ॥

ದೇವಾಚಾರ್ಯಸ್ಯ ತಸ್ಯೇಯಂ ದುಹಿತಾ ವಿಶ್ವಕರ್ಮಣಃ ।
ಸರೇಣುರಿತಿ ವಿಖ್ಯಾತಾ ತ್ರಿಷು ಲೋಕೇಷು ಭಾಮಿನೀ ॥ ೧೭ ॥

ರಾಜ್ಞೀ ಸಂಜ್ಞಾ ಚ ಸಾ ಸ್ತ್ರೀ ಪ್ರಭಾ ಸೈವ ತು ಭಾಸ್ವತಃ ।
ತಸ್ಯಾ ಏವ ಸುತಾ ಛಾಯಾ ನಿಕ್ಷುಭಾ ಸಾ ಮಹೀಮಯೀ ॥ ೧೮ ॥

ಸಾಪಿ ಭಾರ್ಯಾ ಭಗವತೋ ಮಾರ್ತಂಡಸ್ಯ ಮಹಾತ್ಮನಃ ।
ಸಾಧ್ವೀ ಪತಿವ್ರತಾ ದೇವೀ ರೂಪಯೌವನಶಾಲಿನೀ ।
ರಂತುಂ ವೈ ನರರೂಪೇಣ ಸೂರ್ಯೋ ಭವತಿ ವೈ ಪುರಾ ॥ ೧೯ ॥

---

೧೬. ಇವಳು ಶಿಲ್ಪಿಗಳಲ್ಲಿ ಅಗ್ರಗಣ್ಯನೆನಿಸಿದ ವಿಶ್ವಕರ್ಮನೆಂಬ ಪುತ್ರನನ್ನು ಪಡೆದಳು. ಇವನಿಗೆ ತ್ವಷ್ಟಾ ಎಂಬ ಹೆಸರೂ ಇದ್ದಿತು. ಇವನು ದೇವತೆಗಳಿಗೆ ಬೇಕಾದ ಶಿಲ್ಪಕೆಲಸಗಳನ್ನೂ, ಗೃಹಾರಾಮಾದಿಗಳನ್ನು ಮಾಡಿಕೊಡುತ್ತ ದೇವ ಶಿಲ್ಪಿಎನಿಸಿದ್ದನು.

೧೭. ದೇವಾಚಾರ್ಯನಾದ ವಿಶ್ವಕರ್ಮನಿಂದ ಜನನಿಯಲ್ಲಿ ಸರೇಣು ಎಂಬ ಹೆಸರುಳ್ಳ ಮಗಳು ಹುಟ್ಟಿದಳು. ಇವಳು ಮೂರು ಲೋಕಗಳಲ್ಲಿಯೂ ಗೌರವಕ್ಕೆ ಪಾತ್ರಳಾಗಿದ್ದಳು.

೧೮. ಈ ಸರೇಣುವಿಗೇ ರಾಜ್ಞೀ ಎಂಬ ಹೆಸರೂ ಸಂಜ್ಞಾ ಎಂಬ ಹೆಸರೂ ಸಹ ಇದ್ದವು. ಇವಳೇ ಸೂರ್ಯನ ಪ್ರಭೆಯ ಸ್ವರೂಪಳು. ಇವಳ ಮಗಳೇ ಛಾಯಾ ಎಂಬುವಳು. ಇವಳನ್ನೇ ಭೂಮಿಸ್ವರೂಪವಾದ ನಿಕ್ಷುಭಾದೇವಿಯೆಂದು ಕರೆಯುವರು.

೧೯. ಈ ನಿಕ್ಷುಭಾದೇವಿಯೂ ಭಗವಂತನಾದ ಸೂರ್ಯನ ಹೆಂಡತಿ ಇವಳು, ಸಾಧ್ವಿಯೂ, ಪತಿವ್ರತೆಯೂ, ರೂಪವಂತಳೂ, ಯುವತಿಯೂ ಆಗಿದ್ದಳು. ಇವಳನ್ನು ನೋಡಿ ಸೂರ್ಯನು ಹಿಂದೆ ಇವಳೊಡನೆ ಕ್ರೀಡಿಸಲು ಮನುಷ್ಯರೂಪ ವನ್ನು ಧರಿಸಿದನು.

**ಆದಿತ್ಯಸ್ಯ ತು ಯದ್ರೂಪಂ ಮಹತಾ ಸ್ವೇನ ತೇಜಸಾ ।**
**ಗಾತ್ರೇಷು ಪ್ರತಿರುದ್ಧೇಷು ನಾತಿಕ್ರಾಂತಮಿವಾಽಭವತ್ ॥ ೨೦ ॥**

**ಅನ್ನಿಶ್ಯತ್ತೇಷು ಗಾತ್ರೇಷು ಭಗಂ ದೃಷ್ಟ್ವಾ ಪಿತಾಽಬ್ರವೀತ್ ।**
**ಆರ್ತಸ್ತ್ವಂ ಭವಮಾರ್ತಂಡಮಾರ್ತಂಡಸ್ತೇನ ಸ ಸ್ಮೃತಃ ॥ ೨೧ ॥**

**ಇತಿ ಶ್ರೀ ಸಾಂಬಪುರಾಣೇ ರಾಜ್ಞೀನಿಕ್ಷುಭೋತ್ಪತ್ತಿರ್ನಾಮ ದಶಮೋಽಧ್ಯಾಯಃ.**

---

೨೦. ಮಹಾ ತೇಜಸ್ಸಿನಿಂದಕೂಡಿ ದೊಡ್ಡ ರೂಪವನ್ನು ಧರಿಸಿದ್ದ ಇವನು ಮನುಷ್ಯರೂಪನ್ನು ಹೊಂದಲು ಅವಯುವಗಳು ಸಣ್ಣವಾಗಿ ಇವನ ತೇಜಸ್ಸು ಪ್ರಕಾಶಹೀನವಾಯಿತು; ಅಂದರೆ ಹಿಂದಿನಷ್ಟು ಪ್ರಕಾಶವಿಲ್ಲದಾಯಿತು.

೨೧. ಆ ಸೂರ್ಯನ ಅವಯುವಗಳು ಸಂಕುಚಿತವಾಗುತ್ತಿರಲು, ಆಗ ತಂದೆಯಾದ ಕಶ್ಯಪನು ಇವನನ್ನು ನೋಡಿ, ಎಲೈ ಸೂರ್ಯನೆ, ನೀನು ದುಃಖ ವನ್ನು ಹೊಂದಬೇಡವೆಂದು ಹೇಳಿದುದರಿಂದ ಇವನಿಗೆ ಮಾರ್ತಂಡನೆಂದು ಹೆಸರು ಬಂದಿತು. (ಈ ವಿಷಯುವು ಹಿಂದೆಯೂ ಬಂದಿದೆ.) ಎಂದು ನಾರದನು ಸಾಂಬನಿಗೆ ಹೇಳಿದನು.

ಇಲ್ಲಿಗೆ ಸಾಂಬಪುರಾಣದಲ್ಲಿನ ಹತ್ತನೆಯ ಅಧ್ಯಾಯುವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕಾದಶೋಽಧ್ಯಾಯಃ

॥ ನಾರದ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಪ್ರಜಾಸ್ತಸ್ಯ ಮಹಾತ್ಮನಃ ।**
**ತ್ರೀಣ್ಯಪತ್ಯಾನಿ ಸಂಜ್ಞಾಯಾಂ ಜನಯಾಮಾಸ ವೈ ರವಿಃ ॥ ೧ ॥**

**ದ್ವೌ ಪುತ್ರೌ ತು ಮಹಾಭಾಗೌ ಕನ್ಯಾಂ ಕಾಲಿಂದಿಮೇವ ಚ ।**
**ಮನುರ್ವೈವಸ್ವತೋ ಜ್ಯೇಷ್ಠಃ ಶ್ರಾದ್ಧದೇವಃ ಪ್ರಜಾಪತಿಃ ॥ ೨ ॥**

---

## ಹನ್ನೊಂದನೆಯ ಅಧ್ಯಾಯ.

೧-೨. ನಾರದನು ಸಾಂಬನನ್ನು ಕುರಿತು, ಎಲೈ ಸಾಂಬನೆ, ಇನ್ನು ಮುಂದೆ ಸೂರ್ಯಮಹಾಪುರುಷನ ಮಕ್ಕಳ ವಿಷಯವನ್ನು ತಿಳಿಸುವೆನು ಕೇಳು ಸೂರ್ಯನು ಸಂಜ್ಞಾ ಎಂಬ ಪತ್ನಿಯಲ್ಲಿ ಮೂರು ಮಂದಿ ಮಕ್ಕಳನ್ನು ಪಡೆದನು. ಅವರಲ್ಲಿ ಇಬ್ಬರು ಗಂಡು ಮಕ್ಕಳು. ಮೂರನೆಯವಳೇ ಕಾಳಿಂದಿ ಎಂಬ ಹೆಸರಿನಿಂದ ಪ್ರಸಿದ್ಧಳಾದ ಮಗಳು. ಗಂಡು ಮಕ್ಕಳಿಬ್ಬರಲ್ಲಿ ಶ್ರಾದ್ಧದೇವನೆನಿಸಿದ, ವೈವಸ್ವತ ಮನುವೇ ಹಿರಿಯವನು, ವೈವಸ್ವತ ಯಮನು ಕಿರಿಯವನು.

**ತತೋ ಯಮೋ ಯಮೀ ಚೈವ ಯಮಲೌ ಸಂಬಭೂವತುಃ ।**
**ತೇಜಸ್ತ್ವಭ್ಯಧಿಕಂ ತಸ್ಯ ನಿತ್ಯಮೇವ ವಿವಸ್ವತಃ ॥ ೩ ॥**
**ತೇನಾತಿತಾಪಯಾಮಾಸ ತ್ರೀನ್ಲೋಕಾನ್ಸಚರಾಚರಾನ್ ।**
**ಗೋಲಾಕಾರಂ ತು ತದ್ರೂಪಂ ದೃಷ್ಟ್ವಾ ಸಂಜ್ಞಾ ವಿವಸ್ವತಃ ॥ ೪ ॥**
**ಅಸಹಂತೀ ತು ತತ್ತೇಜಃ ಸ್ವಾಂ ಛಾಯಾಂ ಪ್ರೇಕ್ಷ್ಯ ಚಾಬ್ರವೀತ್ ।**

**॥ ಸಂಜ್ಞೋವಾಚ ॥**

**ಭವ ನಾರೀ ಸ್ವರೂಪಾ ತ್ವಂ ಲಕ್ಷಣೈಃ ಸದೃಶೀ ಮಮ ॥ ೫ ॥**
**ಏವಮುಕ್ತ್ವಾ ಸಮುತ್ತಿಷ್ಠತ್ತಸ್ಯಾಃ ಸದೃಶಲಕ್ಷಣಾ ।**
**ಮಹೀಮಯೀ ತು ಸಾ ಸಂಜ್ಞಾ ತಸ್ಯಾಶ್ಛಾಯಾ ಸಮುತ್ಥಿತಾ ॥ ೬ ॥**

---

೩. ಹಿರಿಯವನಾದ ವೈವಸ್ವತಮನುವು ಹುಟ್ಟಿದಮೇಲೆ, ಯಮ ಮತ್ತೂ ಯಮೀ ಎಂಬ ಹೆಸರುಳ್ಳ ಇಬ್ಬರು ಅವಳಿ ಮಕ್ಕಳು ಹುಟ್ಟಿದರು. ಇವರಲ್ಲಿ ಯಮನೆಂಬುವನೇ ವೈವಸ್ವತ ಯಮನೆಂಬುವನು. ಯಮೀ ಎಂಬುವಳೇ ಕಾಳಿಂದೀ ಎನ್ನುವಳು. ಈರೀತಿ ಸೂರ್ಯ ಪರಮಾತ್ಮನಿಗೆ ಮೂರು ಮಂದಿ ಮಕ್ಕಳಾದರೂ ಅವನ ತೇಜಸ್ಸು ಕಡಮೆಯಾಗದೇ ನಿತ್ಯವೂ ಅಧಿಕವಾಗುತ್ತಲೇ ಇದ್ದಿತು.

೪. ಈರೀತಿ ಸೂರ್ಯನು ತನ್ನ ಅಧಿಕವಾದ ತೇಜಸ್ಸಿನಿಂದ ಸ್ಥಾವರ ಜಂಗಮಾತ್ಮಕವಾದ ಮೂರು ಲೋಕಗಳನ್ನೂ, ಸುಡುತ್ತಲೇ ಇದ್ದನು. ಇವನ ಪತ್ನಿಯಾದ ಸಂಜ್ಞಾದೇವಿಯು, ಗೋಲಾಕಾರವಾಗಿರುವ ಇವನ ರೂಪವನ್ನು ನೋಡಿ, ಸೂರ್ಯನ ತೇಜಸ್ಸನ್ನು ಸಹಿಸಲಾರದೇ, ತನ್ನ ಮಗಳಾದ ಛಾಯೆಯನ್ನು ಕರೆದು, ಇಂತೆಂದಳು.

೫. ಎಲೌ ಮಗಳೇ, ನೀನು ನನ್ನಂತೆ ಲಕ್ಷಣಗಳನ್ನು ಧರಿಸಿ ನನ್ನಂತೆಯೇ ಸ್ತ್ರೀ ರೂಪವನ್ನು ಧರಿಸು ಎಂದಳು.

೬-೮. ಸಂಜ್ಞಾದೇವಿಯು ಈರೀತಿ ಹೇಳಿ ನಿಂತುಕೊಳ್ಳಲು ಭೂಮಿಯು ಸ್ವರೂಪಳಾದ ಸಂಜ್ಞಾದೇವಿಯ ಛಾಯೆಯು, ಅವಳಂತೆಯೇ ರೂಪವನ್ನು ಧರಿಸಿ, ಎದುರಿಗೆ ಬಂದು ನಿಂತುಕೊಂಡು ಕೈಜೋಡಿಸಿ, ಸಂಜ್ಞಾದೇವಿಗೆ ನಮಸ್ಕಾರಮಾಡಿ ಅವಳನ್ನು ಕುರಿತು, ಶೋಭನಾಂಗಿಯೇ, ನನ್ನನ್ನು ಏತಕ್ಕೊಸ್ಕರ, ಈ ರೂಪದಿಂದ

ಪ್ರಾಂಜಲಿಃ ಪ್ರಣತಾ ಭೂತ್ವಾ ಛಾಯಾ ಸಂಜ್ಞಾಮಭಾಷತ ॥ ೭ ॥

ಯದರ್ಥಮಹಮುತ್ಪನ್ನಾ ತದಾಜ್ಞಾಪಯ ಶೋಭನೇ ।
ಸರ್ವಮೇವ ಕರಿಷ್ಯಾಮಿ ಯದ್ಯಪಿ ಸ್ಯಾತ್ತು ದುಷ್ಕರಮ್ ॥ ೮ ॥

॥ ಸಂಜ್ಞೋವಾಚ ॥

ಅಹಂ ಯಾಸ್ಯಾಮಿ ಭದ್ರಂ ತೇ ಸ್ವಯಮೇವ ಗೃಹಂ ಪಿತುಃ ।
ನಿರ್ವಿಕಾರೇಣ ವಸ್ತವ್ಯಂ ತ್ವಯೇಹ ಭವನೇ ಮಮ ॥ ೯ ॥

ಇಮೌ ಚ ಬಾಲಕೌ ಹ್ಯಂಕೇ ಕನ್ಯಾ ಚ ವರವರ್ಣಿನೀ ।
ಸಂಭಾವ್ಯಾ ನೈವ ಚಾಖ್ಯೇಯಂ ಇದಂ ಭಗವತಸ್ತ್ವಯಾ ॥ ೧೦ ॥

॥ ಛಾಯೋವಾಚ ॥

ನಾಖ್ಯಾಸ್ಯಾಮಿ ಮತಂ ತಸ್ಯೈ ಗಚ್ಛ ದೇವಿ ಯಥಾ ಸುಖಂ ।
ಇತ್ಯುಕ್ತ್ವಾ ಛಾಯಯಾ ಸಂಜ್ಞಾ ಜಗಾಮ ಭವನಂ ಪಿತುಃ ॥ ೧೧ ॥

---

ಸೃಷ್ಟಿಮಾಡಿರುವೆ ? ನನ್ನಿಂದ ಏನಾಗಬೇಕು ? ಎಂತಹ ಕಠಿನವಾದ ಕಾರ್ಯವಾಗಿದ್ದರೂ ಅದನ್ನು ನಾನು ನಿನಗೋಸ್ಕರ ಮಾಡಿಯೇ ಮಾಡುವೆನು. ವಿಷಯವನ್ನು ತಿಳಿಸು, ಎಂದು ಹೇಳಿದಳು.

೯-೧೦. ಸಂಜ್ಞಾದೇವಿಯು, ಛಾಯೆಯನ್ನು ಕುರಿತು, ನಾನು ನನ್ನ ತಂದೆಯ ಮನೆಗೆ ಹೋಗುವೆನು. ನಿನಗೆ ಶುಭವಾಗಲಿ ! ನೀನು ನನ್ನ ಮನೆಯಲ್ಲಿ ಸ್ವಲ್ಪವೂ, ವಿಕಾರವನ್ನು ಹೊಂದದೇ, ನಾನೆಂದೇ ತಿಳಿಯುವಂತೆ ವಾಸಮಾಡಿಕೊಂಡಿರು. ಈ ತೊಡೆಯಮೇಲಿರುವ ಇಬ್ಬರು ಬಾಲಕರನ್ನೂ ಸುಂದರಾಂಗಿಯಾದ ಈ ಕನ್ಯೆಯನ್ನೂ ಸಹ ಸರಿಯಾಗಿ ಪೋಷಣೆಮಾಡುತ್ತಾ ಪ್ರೀತಿಯಿಂದ ಕಾಣಬೇಕು. ಈ ವಿಷಯವನ್ನು ನನ್ನ ಪತಿಯಾದ ಸೂರ್ಯ ಭಗವಂತನಿಗೆ ಖಂಡಿತವಾಗಿಯೂ ತಿಳಿಸಬಾರದು, ಎಂದು ಹೇಳಿದಳು.

೧೧. ಅನಂತರ ಛಾಯಾದೇವಿಯು, ಸಂಜ್ಞಾದೇವಿಯನ್ನು ಕುರಿತು " ದೇವಿ, ನೀನು ಹೇಳಿದಂತೆಯೇ ಆಗಲಿ, ನಾನು ಖಂಡಿತವಾಗಿಯೂ ಈ ವಿಷಯವನ್ನು ಭಗವಂತನಾದ ಸೂರ್ಯನಿಗೆ ತಿಳಿಸುವುದಿಲ್ಲ. ನೀನು ಸಂತೋಷವಾಗಿ ತಂದೆಯ ಮನೆಗೆ ಹೊರಡು ಎಂದು ಹೇಳಿದಳು. ಇದನ್ನು ಕೇಳಿ ಸಂಜ್ಞಾದೇವಿಯು ತನ್ನ ತವರು (ತಂದೆ) ಮನೆಗೆ ಹೋದಳು

ಪಿತುಃ ಸಮೀಪಂ ಗತ್ವಾ ತು ವ್ರೀಡಿತಾ ಸಾ ತಪಸ್ವಿನೀ ।
ವರ್ಷಾಣಾಂ ತು ಸಹಸ್ರಂ ವೈ ವಸಮಾನಾ ಪಿತುರ್ಗೃಹೇ ॥ ೧೨ ॥

ಭರ್ತುಃ ಸಮೀಪಂ ಯಾಹೀತಿ ಪಿತ್ರೋಕ್ತಾ ಸಾ ಪುನಃ ಪುನಃ ।
ಅಗಚ್ಛದ್ವಡಬಾ ಭೂತ್ವಾ ತ್ಯಕ್ತ್ವಾ ರೂಪಂ ಯಶಸ್ವಿನೀ ॥ ೧೩ ॥

ಉತ್ತರಾಂಶ್ಚ ಕುರೂನ್ಗತ್ವಾ ತೃಣಾನ್ಯಥ ಚಚಾರ ಹ ।
ತತೋ ಗತಾಯಾಂ ಸಂಜ್ಞಾಯಾಂ ಸಂಜ್ಞಾಯಾ ವಚನೇನ ಸಾ ॥ ೧೪॥

ಸಂಜ್ಞಾರೂಪಂ ತತಃ ಕೃತ್ವಾ ಛಾಯಾ ಸೂರ್ಯಮುಪಸ್ಥಿತಾ ।
ದ್ವಿತೀಯಾಯಾಂ ತು ಸಂಜ್ಞಾಯಾಂ ಸಂಜ್ಞೇಯಮಿತ್ಯಚಿಂತಯತ್॥೧೫॥

ಭಾಸ್ಕರೋ ಜನಯಾಮಾಸ ಪುತ್ರೌ ಕನ್ಯಾಂ ಚ ರೂಪಿಣೀಂ ।
ಪೂರ್ವಜಸ್ಯ ಮನೋಸ್ತುಲ್ಯೌ ನಾದೃಶ್ಯೇನ ಚ ತಾವುಭೌ ॥ ೧೬ ॥

---

೧೨-೧೩. ಸಂಜ್ಞಾದೇವಿಯು, ಈರೀತಿ ಗಂಡನ ಸಮೀಪದಿಂದ ಹೊರಟು, ತಂದೆಯಾದ ವಿಶ್ವಕರ್ಮನ ಮನೆಗೆ ಬಂದು ಅಲ್ಲಿ ನಾಚಿಕೆಯಿಂದ ನಡೆದ ವೃತ್ತಾಂತ ವನ್ನೆಲ್ಲಾ ತಂದೆಗೆ ತಿಳಿಸಿ, ಸಾವಿರ ವರ್ಷಗಳು ಅಲ್ಲಿಯೇ ವಾಸವಾಗಿದ್ದಳು ಅನಂತರ ತಂದೆಯು, ಗಂಡನ ಸಮೀಪಕ್ಕೆ ಹೋಗೆಂದು ಬಾರಿಬಾರಿಗೂ ಹೇಳುತ್ತಿರಲು, ಅವಳು ಕಾಡುಗಿಚ್ಚಾಗಿ, ತನ್ನ ಹಿಂದಿನ ರೂಪವನ್ನು ಬಿಟ್ಟು ಉತ್ತರ ಕುರುದೇಶಕ್ಕೆ ಹೋಗಿ, ಅಲ್ಲಿ ಒಣ ಹುಲ್ಲಿನಲ್ಲಿ ಸಂಚರಿಸುತ್ತಾ, ಅದನ್ನೆ ಭಕ್ಷಣೆಮಾಡುತ್ತಾ ಕಾಲಕಳೆಯು ತ್ತಿದ್ದಳು.

೧೪-೧೫. ಸಂಜ್ಞಾದೇವಿಯು, ತನ್ನ ತಂದೆಯ ಮನೆಗೆ ಹೋದಮೇಲೆ, ಛಾಯಾದೇವಿಯು, ಸಂಜ್ಞಾದೇವಿಯ ಮಾತಿನಂತೆಯೇ ತಾನೂ ಸಂಜ್ಞಾರೂಪವನ್ನೇ ಧರಿಸಿ ಸೂರ್ಯನ ಸಮೀಪಕ್ಕೆ ಬಂದಳು. ಸೂರ್ಯನಾದರೋ ಎರಡನೆಯವಳಾದ ಇವಳನ್ನು ತನ್ನ ಪತ್ನಿಯಾದ ಸಂಜ್ಞೆಯೇ ಎಂದು ಭಾವಿಸಿದನು. ಅವನಿಗೆ ಬೇರೆ ರೀತಿ ಭಾವನೆಯೇ ಉಂಟಾಗಲಿಲ್ಲ.

೧೬-೧೮. ಭಾಸ್ಕರನು ಸಂಜ್ಞಾವೇಷಧಾರಿಣಿಯಾಗಿರುವ ಆ ಛಾಯಾದೇವಿ ಯಲ್ಲಿ, ಹಿರಿಯ ಮಗನಾದ ವೈವಸ್ವತಮನುವಿಗೆ ಸಮಾನವಾಗಿರುವ, ಇಬ್ಬರು ಗಂಡು ಮಕ್ಕಳನ್ನೂ, ಸುಂದರಿಯಾದ ಒಬ್ಬಳು ಮಗಳನ್ನೂ ಸಹ ಪಡೆದನು.

ಶ್ರುತಶ್ರವಾಃ ಸ್ವಧರ್ಮಜ್ಞಃ ಶ್ರುತಕರ್ಮಾ ತಥೈವ ಚ ।
ಶ್ರುತಶ್ರವಾ ಮನುಸ್ತಾಭ್ಯಾಂ ಸಾವರ್ಣೇಯೋ ಭವಿಷ್ಯತಿ ॥ ೧೭ ॥

ಶ್ರುತಕರ್ಮಾ ಸ ವಿಜ್ಞೇಯೋ ಗ್ರಹೋ ಯೋ ವೈ ಶನೈಶ್ಚರಃ ।
ಕನ್ಯಾ ಚ ತಪತೀ ನಾಮ್ನಾ ರೂಪೇಣಾ ಪ್ರತಿಮಾ ಭುವಿ ॥ ೧೮ ॥

ಸಂಜ್ಞಾ ತು ಪಾರ್ಥಿವೀ ತೇಷಾಮಾತ್ಮಜಾನಾಂ ಯಥಾಽಕರೋತ್ ।
ಸ್ನೇಹೇನ ಪೂರ್ವಜಾನಾಂ ತು ತಥಾಽಕೃತವತೀ ತು ಸಾ ॥ ೧೯ ॥

ಮನುಸ್ತು ಕ್ಷಮತೇ ತಸ್ಯಾ ಯಮಸ್ತಸ್ಯಾ ನ ಚ ಕ್ಷಮೇತ್ ।
ಬಹುಶೋ ಯಾಚ್ಯಮಾನಸ್ತು ಪಿತುಃ ಪತ್ನ್ಯಾ ಸುದುಃಖಿತಃ ॥ ೨೦ ॥

---

ಆತ್ಮಧರ್ಮವನ್ನು ಚೆನ್ನಾಗಿ ಅರಿತಿರುವ ಶ್ರುತಶ್ರವ ಮತ್ತು ಶ್ರುತಕರ್ಮ, ಇವರೇ ಗಂಡು ಮಕ್ಕಳು. ಶ್ರುತಶ್ರವ ಎಂಬುವನು, ಮುಂದೆ ಸಾವರ್ಣೇಯಮನೆಂದು ಪ್ರಸಿದ್ಧಿ ಪಡೆಯುವನು. ಶ್ರುತಕರ್ಮನಾದರೋ, ಶನೈಶ್ಚರ ಗ್ರಹವೆಂದು ಖ್ಯಾತಿ ಪಡೆಯುವನು. ಹೆಣ್ಣುಮಗಳು ಅತ್ಯಂತ ಸುಂದರಿಯೆನಿಸಿ, ತಪತೀ ಎಂಬ ಹೆಸರಿನಿಂದ ಭೂಮಿಯಲ್ಲಿ ಪ್ರಸಿದ್ಧಿಪಡೆಯುವಳು.

೧೯. ಸಂಜ್ಞಾರೂಪಧಾರಿಣಿಯಾದ ಭೂದೇವಿಯು ಆತ್ಮಚ್ಛಾಯೆಯಾದ ಛಾಯಾದೇವಿಯು, ತನಗೆ ಮಕ್ಕಳಾಗುವವರೆಗೆ ಯಾವರೀತಿ ಸಂಜ್ಞಾದೇವಿಯ ಮಕ್ಕಳನ್ನು ಪ್ರೀತಿಯಿಂದ ಕಾಣುತ್ತಿದ್ದಳೋ ಅದೇರೀತಿ ತನಗೆ ಮಕ್ಕಳಾದಮೇಲೆ ಹಿಂದಿನವರನ್ನು ಅಷ್ಟು ಪ್ರೀತಿಯಿಂದ ನೋಡುತ್ತಿರಲಿಲ್ಲ. ತನ್ನ ಮಕ್ಕಳನ್ನು ಮಾತ್ರ ಪ್ರೀತಿಯಿಂದ ಕಾಣುತ್ತಿದ್ದಳು.

೨೦. ತಾಯಿ ಏನುಮಾಡಿದರೂ ಮನುವು ಎಲ್ಲವನ್ನೂ ಸಹಿಸಿಕೊಂಡು ಸುಮ್ಮನಿರುತ್ತಿದ್ದನು. ಯಮನು ಸಹಿಸದೆ ಅನೇಕಬಾರಿ ಅವಳನ್ನು ಬೇಡಿಕೊಂಡನು. ಆದರೂ ಅವಳು ಮೊದಲಿನಂತೆಯೇ ನಡೆಯುತ್ತಿದ್ದಳು. ಇದರಿಂದ ಯಮನು ಖಿನ್ನನಾಗಿ ಯಾವಾಗಲೂ ದುಃಖ ಹೊಂದಿರುತ್ತಿದ್ದನು.

**ಸ ವೈ ಕೋಪಾಚ್ಚ ಬಾಲ್ಯಾಚ್ಚ ಭಾವಿನೋಽರ್ಥಸ್ಯ ಗೌರವಾತ್ ।**
**ಪಾದೇನ ತರ್ಜಯಾಮಾಸ ಛಾಯಾಂ ವೈವಸ್ವತೋ ಯಮಃ ॥ ೨೧ ॥**

**ತಂ ಶಶಾಪ ತತಃ ಕ್ರುದ್ಧಾ ಸಂಜ್ಞಾ ಸಾ ಪಾರ್ಥಿವೀ ಶುಭಾ ।**
**ಯದಾ ತರ್ಜಯಸೇ ಯನ್ಮಾಂ ಪಿತುರ್ಭಾರ್ಯಾಂ ಗರೀಯಸೀಂ ॥೨೨॥**

**ತಸ್ಮಾತ್ತವೈಷ ಚರಣಃ ಪತಿಷ್ಯತಿ ನ ಸಂಶಯಃ ।**
**ಯಮಸ್ತು ತೇನ ಶಾಪೇನ ಭೃಶಂ ಪೀಡಿತಮಾನಸಃ ॥ ೨೩ ॥**

**ಮನುನಾ ಸಹ ಧರ್ಮಾತ್ಮಾ ಪಿತ್ರೇ ಸರ್ವಂ ನ್ಯವೇದಯತ್ ।**
**ಸ್ನೇಹೇನ ತುಲ್ಯಂ ಮಹತಾ ಮಾತಾ ದೇವ ನ ವರ್ತತೇ ॥ ೨೪ ॥**

---

೨೧. ಈ ವೈವಸ್ವತ ಯಮನು ಒಂದುಸಲ ತಾಯಿಯಮೇಲಿನ ಕೋಪದಿಂದಲೂ, ಹುಡುಗತನದಿಂದಲೂ, ಮತ್ತು ಮುಂದೆ ಅನುಭವಿಸಲೇಬೇಕಾದ ಶಾಪದ ಮಹಿಮೆಯಿಂದಲೂ ಸಹ ಛಾಯಾ ದೇವಿಯನ್ನು ಕಾಲಿನಿಂದ ಒದೆಯಲು ಪ್ರಯತ್ನಿಸಿದನು.

೨೨. ಆಗ ಸಂಜ್ಞಾರೂಪಧಾರಿಣಿಯಾಗಿರುವ ಮಂಗಳಕರಳಾದ ಪೃಥಿವೀದೇವಿಯು, ಕೋಪಗೊಂಡು, ನಿನ್ನ ತಂದೆಯ ಹಿರಿಯ ಪತ್ನಿಯಾದ ನನ್ನನ್ನು ಕಾಲಿನಿಂದ ಒದೆಯಲು ಪ್ರಯತ್ನಿಸುವೆಯಾದುದರಿಂದ, ಎಲೈ ಯಮನೆ, ನಿನ್ನ ಈ ಕಾಲು ಖಂಡಿತವಾಗಿಯೂ ಬಿದ್ದುಹೋಗುವುದು, ಎಂದು ಶಾಪ ಕೊಟ್ಟಳು.

೨೩. ಅನಂತರ ಶಾಪಗ್ರಸ್ತನಾದ ಯಮನು ಮನುವಿನ ಜೊತೆಯಲ್ಲಿ ಹೊರಟು ತಂದೆಯ ಬಳಿಗೆ ಬಂದು, ಖಿನ್ನವಾದ ಮನಸ್ಸುಳ್ಳವನಾಗಿ, ನಡೆದ ವೃತ್ತಾಂತವನ್ನೆಲ್ಲವನ್ನೂ ಮತ್ತೂ ತನಗೆ ತಾಯಿಯಿಂದುಂಟಾದ ಶಾಪವನ್ನೂ ಸಹ ಸೂರ್ಯ ಭಗವಂತನಿಗೆ ತಿಳಿಸಿದನು.

೨೪-೨೬. ಹಿಂದೆ ಎಲ್ಲವನ್ನೂ ತಿಳಿಸಿದನೆಂದು ಹೇಳಿದುದನ್ನೇ ವಿಸ್ತಾರವಾಗಿ, ಯಮನು, ತಂದೆಯನ್ನು ಕುರಿತು ಹೀಗೆ ಹೇಳಿದನು. "ತಂದೆಯಾದ, ಸೂರ್ಯದೇವನೇ, ತಾಯಿಯು ಈಗ ಮೊದಲಿನಂತೆ ನಮ್ಮಲ್ಲಿ ಸರಿಯಾಗಿ, ಹೆಚ್ಚು ಸ್ನೇಹ

ಸಂತ್ಯಜ್ಯ ಸ್ತ್ರಾಯುಶೋಽಸ್ಮಾನ್ಸಾ ಕನೀಯಾಂಸೋ ವಿಧಿತ್ಸತಿ ।
ತಸ್ಯಾಂ ಮಯೋದ್ಯತಃ ಪಾದೋ ನ ಚ ದೇಹೇ ನಿಪಾತಿತಃ ॥ ೨೫ ॥

ಬಾಲ್ಯಾದ್ವಾ ಯದಿ ವಾ ಮೋಹಾತ್ ತದ್ಭವಾನ್ವಕ್ತುಮರ್ಹತಿ ।
ಶಪ್ತೋಽಹಮೇವಂ ದೇವೇಶ ಜನನ್ಯಾ ತಪಸಾಂ ವರ ।
ತವ ಪ್ರಸಾದಾಚ್ಚರಣಸ್ತ್ರಾಯತಾಂ ಮಹತೋ ಭಯಾತ್ ॥ ೨೬ ॥

॥ ರವಿರುವಾಚ ॥

ಅಸಂಶಯಂ ಮರುತ್ಪುತ್ರ ಭವಿಷ್ಯತ್ಯತ್ರಕಾರಣಂ ।
ಯೇನ ತ್ವಾಮಾವಿಶತ್ಕ್ರೋಧೋ ಧರ್ಮಜ್ಞಂ ಧರ್ಮಶಾಲಿನಂ ॥ ೨೭ ॥

---

ವನ್ನು ತೋರಿಸುವುದಿಲ್ಲ. ಸಾಮಾನ್ಯವಾಗಿ ನಮ್ಮನ್ನು ಅಸಡ್ಡೆಯಿಂದ ಕಾಣುತ್ತ ಚಿಕ್ಕಮಕ್ಕಳನ್ನೇ ಪ್ರೀತಿಯಿಂದ ಕಾಣುತ್ತಿರುವಳು. ಈ ರೀತಿ ಇವಳು ಮಾಡುತ್ತಿರುವುದರಿಂದ ನನಗೆ ಕೋಪಬಂದು, ನಾನು ಅವಳ ಮೇಲೆ ಕಾಲನ್ನೆತ್ತಿ ಹೆದರಿಸಿದೆನು. ಅವಳನ್ನು ಒದೆಯಲಿಲ್ಲ. ಅಂದರೆ ನನ್ನ ಪಾದವು ಅವಳ ಶರೀರಕ್ಕೆ ತಗಲಲಿಲ್ಲ. ನಾನು ಈ ರೀತಿ ಮಾಡಿದುದು, ಕೇವಲ ಹುಡುಗತನದಿಂದಲೋ; ಅಥವಾ ಅಜ್ಞಾನದಿಂದಲೋ ಎಂಬುದನ್ನು ನೀನು ಯೋಚಿಸಬೇಕು. ನನಗೆ ಇದು ತಿಳಿಯದು. ನಾನು ಮಾಡಿದ ಈ ಅಪರಾಧದಿಂದ ತಾಯಿಯು ಕೋಪಗೊಂಡು, ನನಗೆ ಈ ರೀತಿ "ನಿನ್ನ ಕಾಲು ಬಿದ್ದುಹೋಗಲಿ" ಎಂದು ಶಾಪಕೊಟ್ಟಳು. ಎಲೈ ತೇಜಸ್ವಿಗಳಲ್ಲಿ ಶ್ರೇಷ್ಠನೆನಿಸಿದವನೇ, ನೀನು ನನ್ನಲ್ಲಿ ಅನುಗ್ರಹವಿಟ್ಟು ಈ ಮಹಾ ಭಯದಿಂದ ನನ್ನನ್ನು ಕಾಪಾಡಿ, ನನಗೆ ಕಾಲು ಪುನಃ ಬರುವಂತೆ ಕರುಣಿಸಬೇಕು. ಎಂದು ವೈವಸ್ವತಯಮನು, ಸೂರ್ಯನನ್ನು ಪ್ರಾರ್ಥಿಸಿದನು.

೨೭. ಎಲೈ ದೇವಕುಮಾರನೇ, ಧರ್ಮಜ್ಞನೂ, ಧರ್ಮವನ್ನು ಆಚರಿಸುತ್ತಿರುವವನೂ ಆದ ನಿನ್ನಂಥವನಿಗೇ ಕೋಪಬರಬೇಕಾದರೆ ನಿಶ್ಚಯವಾಗಿಯೂ ಇದರಲ್ಲಿ ಏನೋ ಕಾರಣವಿದ್ದೇ ಇದೆ, ಎಂದು ಸೂರ್ಯನು ಮಗನಾದ ಯಮನ ಮಾತಿನಿಂದ ಊಹಿಸಿದನು.

ಸರ್ವೇಷಾಮೇವ ಪಾಪಾನಾಂ ಪ್ರತಿಘಾತಸ್ತು ವಿದ್ಯತೇ ।
ನ ತು ಮಾತ್ರಾಭಿಶಪ್ತಾನಾಂ ಕ್ವಚಿನ್ಮೋಕ್ಷೋ ಭವೇದಿಹ ॥ ೨೮ ॥

ನ ಶಕ್ಯತೇ ತನ್ಮಿಥ್ಯಾ ತು ಕರ್ತುಂ ಮಾತುಃ ಸ್ವಯಂ ತವ ।
ಕ್ವಚಿತ್ತೇಽಹಂ ವಿಧಾಸ್ಯಾಮಿ ಪುತ್ರಸ್ನೇಹಾದನುಗ್ರಹಮ್ ॥ ೨೯ ॥

ಕೃಮಯೋ ಮಾಂಸಮಾದಾಯ ಪತಿಷ್ಯಂತಿ ಮಹೀತಲೇ ।
ಕೃತಮಸ್ಯಾವಚಃ ಸತ್ಯಂ ತ್ವಂ ಚ ತ್ರಾತಾ ಭವಿಷ್ಯಸಿ ॥ ೩೦ ॥

॥ ನಾರದ ಉವಾಚ ॥

ಆದಿತ್ಯಸ್ತ್ವಬ್ರವೀಚ್ಛಾಯಾಂ ಕಿಮರ್ಥಂ ತನಯೇಷು ವೈ ।
ತುಲ್ಯೇಷ್ವಪ್ಯಧಿಕಃ ಸ್ನೇಹಃ ಏಕತ್ರ ಕ್ರಿಯತೇ ತ್ವಯಾ ॥ ೩೧ ॥

---

೨೮. ಮಗನೇ, ಎಲ್ಲಾ ಶಾಪಗಳಿಗೂ ಪ್ರತಿಕ್ರಿಯೆಗಳಿರುವುವು. ಆದರೆ ತಾಯಿಯಿಂದ ಶಾಪಹೊಂದಿದವರಿಗೆ ಮಾತ್ರ ಸ್ವಲ್ಪವೂ ಬಿಡುಗಡೆಯೇ ಇಲ್ಲ. ಅವರು ಆ ಶಾಪವನ್ನು ಅನುಭವಿಸಿಯೇ ತೀರಬೇಕು.

೨೯-೩೦. ನಿನ್ನ ಸ್ವಂತ ತಾಯಿಯ ಮಾತನ್ನು ಸಂಪೂರ್ಣವಾಗಿ ಸುಳ್ಳು ಮಾಡಲು ಸಾಧ್ಯವೇ ಇಲ್ಲ. ಆದರೂ ಪುತ್ರಸ್ನೇಹದಿಂದ ನಿನಗೆ ನಾನು ಸ್ವಲ್ಪ ಅನುಗ್ರಹಮಾಡುವೆನು. ಅದೇನೆಂದರೆ. ಕ್ರಿಮಿಗಳು ನಿನ್ನ ಕಾಲಿನ ಮಾಂಸವನ್ನು ತೆಗೆದುಕೊಂಡು ಭೂಲೋಕದಲ್ಲಿ ಬೀಳುತ್ತವೆ ಇದರಿಂದ, ನಿಮ್ಮ ತಾಯಿಯ ಮಾತೂ ಸತ್ಯವಾಗುವುದು. ನೀನೂ ಸಹ ಕಾಪಾಡಲ್ಪಡುವೆಯೆಂದು ಸೂರ್ಯನು, ಯಮನಿಗೆ ಹೇಳಿದನು.

೩೧. ಯಮನನ್ನು ಹೀಗೆ ಅನುಗ್ರಹಿಸಿದ ನಂತರ ಆದಿತ್ಯನು ಛಾಯಾದೇವಿಯ ಸಮೀಪಕ್ಕೆ ಬಂದು. ದೇವಿ, ಮಕ್ಕಳೆಲ್ಲಾ ಸಮಾನ ಸ್ನೇಹಕ್ಕೆ ಪಾತ್ರರಾಗಿರುವಾಗ, ನೀನು ಒಬ್ಬರಲ್ಲಿ ಮಾತ್ರ ಏಕೆ, ಹೆಚ್ಚುಸ್ನೇಹವನ್ನು, ಇನ್ನೊಬ್ಬರಲ್ಲಿ ಕಡಿಮೆ ಪ್ರೀತಿಯನ್ನೂ ತೋರಿಸುವೆ? ಇದಕ್ಕೆ ಕಾರಣವೇನು? ಎಂದು ಕೇಳಿದನು.

ಸಾ ತತ್ಪರಿಹರಂತ್ಯಸ್ಮೈ ನಾಚಚಕ್ಷೇ ವಿವಸ್ವತಃ ।
ಆತ್ಮಾನಂ ಸ ಸಮಾಧಾಯ ಯುಕ್ತಸ್ತಥ್ಯಮುಪಶ್ಯತಃ ॥ ೩೨ ॥

ತಾಂ ಶಪ್ತುಕಾಮೋ ಭಗವಾನ್ ನಾಶಾಯ ಕುಪಿತಃ ಪ್ರಭುಃ ।
ತತಶ್ಛಾಯಾ ಯಥಾವೃತ್ತಮಾಚಚಕ್ಷೇ ವಿವಸ್ವತಃ ॥ ೩೩ ॥

ವಿವಸ್ವಾಂಸ್ತು ತತಃ ಶ್ರುತ್ವಾ ಕ್ರುದ್ಧಃ ಶ್ವಶುರಮಭ್ಯಗಾತ್ ।
ಸ ಚಾಪಿ ತಂ ಯಥಾ ನ್ಯಾಯಂ ಅರ್ಚಯಿತ್ವಾ ತು ರೋಷಿತಂ ॥ ೩೪ ॥
ನಿರ್ದಗ್ಧುಕಾಮಂ ರೋಷೇಣ ಸಾಂತ್ವಯಾಮಾಸ ತಂ ಶನೈಃ ॥ ೩೫ ॥

॥ ವಿಶ್ವಕರ್ಮೋವಾಚ ॥

ತವಾತಿತೇಜಸಾವಿಷ್ಟಮಿದಂ ರೂಪಂ ಸುದುಃಸಹಮ್ ।
ಅಸಹಂತೀ ತು ಸಾ ಸಂಜ್ಞಾ ವನೇ ವಸತಿ ಶಾದ್ವಲೇ ॥ ೩೬ ॥

---

೩೨-೩೩. ಛಾಯಾದೇವಿಯು, ಇರುವ ಸಂಗತಿಗಳನ್ನೆಲ್ಲಾ ಮುಚ್ಚಿಡುತ್ತಾ ಸೂರ್ಯನಿಗೆ, ಏನೆಂದೂ ಉತ್ತರಕೊಡಲಿಲ್ಲ. ಆಗ ಸೂರ್ಯನು, ತಾನೇ ಸಮಾಧಾನ ಹೊಂದಿ ಇವಳಿಂದ ನಿಶ್ಚಯುವನ್ನು ಕಾಣದೇ, ಹೋದನು. ಕೊನೆಗೆ ಸರ್ವಸಮರ್ಥನಾದ ಸೂರ್ಯನು ಇವಳ ಗರ್ವಕ್ಕೆ ಶಾಪಕೊಡಲು ಕೋಪ ಗೊಂಡನು. ಆಗ ಛಾಯಾದೇವಿಯು ಹೆದರಿ ಅಲ್ಲಿಯುವರೆವಿಗೆ ನಡೆದ ವೃತ್ತಾಂತ ವನ್ನೆಲ್ಲಾ ಸೂರ್ಯನಿಗೆ ತಿಳಿಸಿದಳು.

೩೪-೩೫. ಛಾಯಾದೇವಿಯು ಈ ರೀತಿ ಹೇಳಿದುದನ್ನು ಕೇಳಿದನಂತರ ಸೂರ್ಯನು ಕೋಪಗೊಂಡು ತನ್ನ ಮಾವನ ಮನೆಗೆ ಹೋದನು. ಹಾಗೆ ಮನೆಗೆಬಂದ ಅಳಿಯನಾದ ಸೂರ್ಯನನ್ನು ವಿಶ್ವಕರ್ಮನು ನ್ಯಾಯರೀತಿಯಿಂದ ಪೂಜಿಸಿದನು. ಆದರೂ ಕೋಪಗೊಂಡು, ಕೋಪದಿಂದಲೇ ಪ್ರಪಂಚವನ್ನು ಸುಡುವಂತೆ ತೋರಿಸುತ್ತಿರುವ ಅಳಿಯನನ್ನು, ಮೃದುಮಧುರವಾದ ಉಪಚಾರ ಗಳಿಂದ ಮೆಲ್ಲಗೆ ಸಮಾಧಾನಪಡಿಸಿದನು.

೩೬. ಹಾಗೆಯೇ ವಿಶ್ವಕರ್ಮನು ಅಳಿಯನನ್ನು ಕುರಿತು, ನಿನ್ನ ಅತ್ಯಂತ ತೇಜಸ್ವಿಯಾದ ರೂಪನ್ನು, ಸಹಿಸಲು ಸಾಧ್ಯವಿಲ್ಲದೇ, ಆ ನಿನ್ನ ಪತ್ನಿಯಾದ ಸಂಜ್ಞಾದೇವಿಯು ಕಾಡಿನಲ್ಲಿ ಜೊಂಡು ಹುಲ್ಲುಗಳಲ್ಲಿ ವಾಸಮಾಡುತ್ತಿರುವಳು.

ದ್ರಕ್ಷ್ಯಸೇ ತಾಂ ಭವಾನದ್ಯ ಸ್ವಾಂ ಭಾರ್ಯಾಂ ಶುಭಚಾರಿಣೀಂ ।
ರೂಪಾರ್ಥಂ ಭವತೋಽರಣ್ಯೇ ಚರಂತೀ ಸುಮಹತ್ತಪಃ ॥ ೩೭ ॥

ಮತಂ ಮೇ ಬ್ರಹ್ಮಣೋ ವಾಕ್ಯಂ ಯದಿ ತೇ ದೇವ ರೋಚತೇ ।
ರೂಪಂ ನಿರ್ವರ್ತಯಾಮ್ಯದ್ಯ ತವ ಕಾಂತಮರಿಂದಮ ॥ ೩೮ ॥

ರೂಪಂ ವಿವಸ್ವತಶ್ಚಾಸೀತ್ ತಿರ್ಯಗೂರ್ಧ್ವಮಧಃ ಸಮಮ್ ।
ತೇನಾಪಿ ಪೀಡಿತೋ ದೇವೋ ತದ್ರೂಪೇಣ ದಿವಸ್ಪತಿಃ ॥ ೩೯ ॥

ಸಂತುಷ್ಟಸ್ತಸ್ಯ ತದ್ವಾಕ್ಯಂ ಬಹು ಮೇನೇ ಮಹಾತಪಾಃ ।
ಅನುಜ್ಞಾತಸ್ತತಸ್ತ್ವಷ್ಟಾ ರೂಪನಿರ್ವರ್ತನಸ್ಯ ತು ॥ ೪೦ ॥

ವಿಶ್ವಕರ್ಮಾಭ್ಯನುಜ್ಞಾತಃ ಶಾಕದ್ವೀಪೇ ವಿವಸ್ವತಃ ।
ಭ್ರಮಿಮಾರೋಪ್ಯ ತತ್ತೇಜಃ ಶಾಂತಯಾಮಾಸ ತಸ್ಯ ವೈ ॥ ೪೧ ॥

---

೩೭. ನೀನು ಅಲ್ಲಿಗೆ ಹೋದರೆ, ಈಗಲೂ ಸುಚರಿತ್ರಳಾದ ನಿನ್ನ ಪತ್ನಿಯನ್ನು ನೋಡಬಹುದು. ಅವಳು, ನಿನ್ನ ತೇಜೋರೂಪವನ್ನು ಸಹಿಸುವಂತಾಗುವುದಕ್ಕಾಗಿಯೇ ಕಠಿನವಾದ ತಪಸ್ಸನ್ನಾಚರಿಸುತ್ತಿರುವಳು.

೩೮. ಎಲೈ ಸೂರ್ಯದೇವನೇ, ನಾನು ಹೇಳುವಮಾತು, ನಿನಗೆ ಒಪ್ಪಿಗೆಯಾಗಿ ರುಚಿಸುವುದಾದರೆ, ಬ್ರಹ್ಮನು ನನಗೆ ಹೇಳಿರುವಂತೆ ಅತ್ಯಂತ ತೇಜೋಮಯವಾದ ರೂಪವನ್ನು ಸ್ವಲ್ಪಬದಲಾಯಿಸಿ, ಸಹಿಸಲು ಸಾಧ್ಯವಾಗುವಂತೆ ಮಾಡುವೆನು. ಶತ್ರು ನಿಗ್ರಹಕರ್ತನಾದ ಸೂರ್ಯದೇವನೇ? ನಿನ್ನ ಅಭೀಷ್ಟವೇನು ? ಎಂದು ವಿಶ್ವಕರ್ಮನು ಕೇಳಿದನು.

೩೯. ಸೂರ್ಯನು ತನ್ನ ಅಡ್ಡಲಾಗಿ, ಮೇಲುಗಡೆ ಮತ್ತು ಕೆಳಭಾಗದಲ್ಲಿ ಒಂದೇ ಸಮನಾಗಿರುವ, ಆ ತೇಜೋರಾಶಿಯಿಂದ ತೊಂದರೆಗೊಂಡವನಾಗಿ, ಮಾವನ ಮಾತನ್ನು ಕೇಳಿ ಸಂತೋಷಗೊಂಡು, ಮಾವನು ಹೇಳಿದಂತೆ ಮಾಡಬಹುದೆಂದು ಒಪ್ಪಿದನು.

೪೦-೪೧. ಅನಂತರ, ವಿಶ್ವಕರ್ಮಬ್ರಹ್ಮನು, ಅಳಿಯನಾದ ಸೂರ್ಯದೇವನಿಂದ ಅಪ್ಪಣೆಯನ್ನು ಪಡೆದು ಅವನನ್ನು ಶಾಕದ್ವೀಪಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಅವನ ತೇಜಸ್ಸನ್ನು ಪುಟಹಾಕಿ, ಶಾಂತನಾಗಿರುವಂತೆ ಮಾಡಿದನು.

**ಆಜ್ಞಯಾ ಲಿಖಿತಶ್ಚಾಸೌ ನಿಪುಣಂ ವಿಶ್ವಕರ್ಮಣಾ ।**
**ಸೋಽಭ್ಯನಂದತ್ತಲ್ಲಿಖನಂ ತತಸ್ತೇನಾವತಾರಿತಃ ॥ ೪೨ ॥**

**ತತ್ತು ನಿಷ್ಪಾದಿತಂ ರೂಪಂ ತೇಜಸಾಃಪಹೃತೇನ ತು ।**
**ಕಾಂತಾತ್ಕಾಂತತರಂ ಭೂತ್ವಾ ಹ್ಯಧಿಕಂ ಶುಶುಭೇ ತತಃ ॥ ೪೩ ॥**

**ದದರ್ಶ ಯೋಗಮಾಸ್ಥಾಯ ಸ್ವಾಂ ಭಾರ್ಯಾಂ ಬಡವಾಂ ತದಾ ।**
**ಅಧೃಷ್ಯಾಂ ಸರ್ವಭೂತಾನಾಂ ತೇಜಸಾ ಸ್ವೇನ ಸಂವೃತಾಂ ॥ ೪೪ ॥**

**ಅಶ್ವರೂಪೇಣ ಮಾರ್ತಂಡಃ ತಾಂ ಮುಖೇ ಸಮಭಾವಯತ್ ।**
**ಮೈಥುನಾಯ ವಿಚೇಷ್ಟಂತೀ ಪರಪುಂಗೋ ವಿಶಂಕಯಾ ॥ ೪೫ ॥**

---

೪೨. ಅನಂತರ ವಿಶ್ವಕರ್ಮನು ಅಳಿಯನ ಆಜ್ಞೆಯಂತೆ ಅವನ ರೂಪವನ್ನು ಬದಲಾಯಿಸಿ, ಅದನ್ನು ಚೆನ್ನಾಗಿ ಬರೆದನು. ಸೂರ್ಯನೂ ಸಹ ಇದನ್ನು ನೋಡಿ ಬಹಳ ಆನಂದಪಟ್ಟನು. ಹೀಗೆ ಆದಮೇಲೆ ವಿಶ್ವಕರ್ಮನು ಅವನನ್ನು ತನ್ನ ಕಾರ್ಯಾಲಯದಿಂದ ಕಳುಹಿಸಿದನು.

೪೩. ಈ ರೀತಿ ವಿಶ್ವಕರ್ಮನು ಸೂರ್ಯನ ತೇಜಸ್ಸಿನಲ್ಲಿ ಕೊಂಚ ಭಾಗ ವನ್ನು ಕಡಿಮೆಮಾಡಿದ ಮೇಲೆ ರೂಪವು, ಸುಂದರವಾದ ವಸ್ತುಗಳಲ್ಲೆಲ್ಲಾ ಸುಂದರ ವೆನಿಸಿ ಹೆಚ್ಚಾಗಿ ಪ್ರಕಾಶಿಸಲಾರಂಭಿಸಿತು.

೪೪. ಆಮೇಲೆ ಸೂರ್ಯನು, ತನ್ನ ಯೋಗವನ್ನವಲಂಬಿಸಿ ಅದರ ಶಕ್ತಿಯಿಂದ, ಬಡಬಾರೂಪಧಾರಿಣಿಯಾದ ತನ್ನ ಪತ್ನಿ ಸಂಜ್ಞಾದೇವಿಯನ್ನು ನೋಡಿದನು. ಅವಳು ಆಗ ತನ್ನ ರೂಪವನ್ನೆಲ್ಲಾ, ಮರೆಸಿ ಮತ್ತೊಬ್ಬರಿಂದ ಮತ್ತು ತಿಳಿಯಲಸಾಧ್ಯವಾದ ರೂಪನ್ನು ಧರಿಸಿದ್ದಳು.

೪೫. ಸೂರ್ಯನು, ಅಶ್ವರೂಪದಿಂದ ಬಂದು, ತನ್ನ ಪತ್ನಿಯಾಗಿರುವ ಬಡಬಾ (ಕಾಡುಗಿಚ್ಚು) ರೂಪಿಣಿಯಾದ ಸಂಜ್ಞಾದೇವಿಯನ್ನು, ಮುತ್ತಿಟ್ಟನು. ಅವಳು ವಿಹರಿಸಲು ಅಪೇಕ್ಷಿಸುತ್ತಿದ್ದರೂ, ಪುರಪುರುಷನೆಂಬ ಸಂದೇಹದಿಂದ ಆ ಸೂರ್ಯನ ಶುಕ್ರವೆಂಬ ವೀರ್ಯವನ್ನು ಕುದುರೆ ಮೂಗುಗಳಿಂದ ವಮನ ಮಾಡಿದಳು.

ಸಾ ತದ್ವಿವಸ್ವತಃ ಶುಕ್ರಂ ನಾಸಿಕಾಭ್ಯಾಂ ನಿರಾವಮುತ್ ।
ದೇವೌ ತಸ್ಯಾಮಜಾಯೇತಾಂ ಅಶ್ವಿನೌ ಭಿಷಜಾಂ ವರೌ ॥ ೪೬ ॥

ನಾಸತ್ಯಶ್ಚೈವ ದಸ್ರಶ್ಚ ಸ್ಮೃತೌ ತೌ ನಾಮತೋಽಶ್ವಿನೌ ।
ತತಃ ಕಾಂತಂ ಸ್ವಕಂ ರೂಪಂ ದರ್ಶಯಾಮಾಸ ಭಾಸ್ಕರಃ ॥ ೪೭ ॥

ತಂ ದೃಷ್ಟ್ವಾ ಸಾಪಿ ತಂ ಜ್ಞಾತುಂ ತುತೋಷ ಚ ಮುಮೋದ ಚ ।
ತಸ್ಮಾಚ್ಚ ಶುಕ್ರಸಂಯೋಗಾದ್ಗುಣಾದ್ಭೂಮೇಸ್ತಥೈವ ಚ ॥ ೪೮ ॥

ಅಶ್ವರೂಪಃ ಶರೀ ಧನ್ವೀ ಕುಮಾರಃ ಸಮಜಾಯತ ।
ಯತೋಽಯಂ ರೇತಸೋ ಜಾತಃ ತೇನ ದೇವೇನ ಭಾವಿತಃ ॥ ೪೯ ॥

ರೈವತೋ ನಾಮತಸ್ತ್ವೇಷ ಖ್ಯಾತಿಂ ಲೋಕೇ ಗಮಿಷ್ಯತಿ ।
ಸಪ್ತದ್ವಯಾದಿತೋ ಲೋಕಾತ್ಪೂಜಾಂ ಪ್ರಾಪ್ಸ್ಯತಿ ನಿತ್ಯಶಃ ॥ ೫೦ ॥

---

೪೬. ಈ ರೀತಿ ವಾಂತಿಮಾಡಿದ ಅಶ್ವರೂಪವನ್ನು ಧರಿಸಿರುವ ಸೂರ್ಯ ದೇವನ ವೀರ್ಯದಿಂದ, ನಾಸತ್ಯ, ದಸ್ರರೆಂಬ ಇಬ್ಬರು ವೈದ್ಯಶ್ರೇಷ್ಠರಾದ ಅಶ್ವಿನೀ ದೇವತೆಗಳು ಹುಟ್ಟಿದರು.

೪೭-೪೮. ಆಮೇಲೆ ಭಾಸ್ಕರನು, ತನ್ನ ನಿಜವಾದ ಮತ್ತು ಅತ್ಯಂತ ಸುಂದರವಾಗಿರುವ ರೂಪನ್ನು ಪತ್ನಿಗೆ ತೋರಿಸಿದನು. ಅವಳು ಇದನ್ನು ನೋಡಿ, ಇದು ನಿಜವೇ ಎಂಬುದನ್ನು ತಿಳಿಯುವುದಕ್ಕೋಸ್ಕರ, ಸಂತೋಷದಿಂದ ಅವನೊಡನೆ ಕ್ರೀಡಿಸಿದಳು. ಅನಂತರ ಸೂರ್ಯನ ಶುಕ್ರವೀರ್ಯದ ಸಂಯೋಗ ದಿಂದಲೂ, ಭೂಮಿಯ ಗುಣದಿಂದಲೂ ಸಹ, ಅದೇ ರೀತಿ ಅಶ್ವರೂಪವನ್ನು ಧರಿಸಿ, ಬಿಲ್ಲು, ಬಾಣಗಳನ್ನು ಹಿಡಿದಿರುವ ಒಬ್ಬ ಕುಮಾರನುದಯಿಸಿದನು.

೪೯-೫೦. ಇವನು ರೇತಸ್ಸಿನಿಂದ ಹುಟ್ಟಿದವನಾದ್ದರಿಂದ, ರೈವತನೆಂಬ ಹೆಸರಿನಿಂದ ಪ್ರಪಂಚದಲ್ಲಿ ಪ್ರಸಿದ್ಧಿಪಡೆಯುವನು. ಮತ್ತೂ ಎಲ್ಲಾ ಲೋಕಗಳಲ್ಲಿಯೂ, ನೆಗೆಯುತ್ತಲೂ, ಕುಪ್ಪಳಿಸುತ್ತಲೂ, ನಾಗಾಲೋಟವಿಡುತ್ತಲೂ ಸಂಚರಿ ಸುವುದರಿಂದ, ಹದಿನಾಲ್ಕುಲೋಕದಲ್ಲಿಯೂ, ಪ್ರತಿನಿತ್ಯವೂ ಇವನಿಗೆ ಪೂಜೆಗಳು ದೊರೆಯುವೆಂದು ಸೂರ್ಯಭಗವಂತನು ಹೇಳಿದನು.

ಪ್ಲವನ್ ಗಚ್ಛನ್ ಪ್ರಯನ್ಯಸ್ಮಾತ್ ವಸುಮತ್ಯಾಂ ಯತಸ್ತತಃ ।
ಮನುರ್ಯಮೋ ಯಮೀ ಚೈವ ಸಾವರ್ಣಿಶ್ಚ ಶನೈಶ್ಚರಃ ॥ ೫೧ ॥
ತಪತೀ ಚಾಶ್ವಿನೌ ಚೈವ ರೇವಂತಶ್ಚ ರವೇಃ ಸುತಾಃ ॥ ೫೨ ॥

ಏವಮೇಷಾಂ ಪುರಾ ಸಂಜ್ಞಾ ದ್ವಿತೀಯಾ ಪಾರ್ಥಿವೀ ಸ್ಮೃತಾ ।
ಯಾ ಸಂಜ್ಞಾ ಸಾ ಸ್ಮೃತಾ ರಾಜ್ಞೀ ಛಾಯಾಯಾ ಸಾಪಿ ನಿಕ್ಷುಭಾ॥ ೫೩ ॥

ರಾಜೃದೀಪ್ತೌ ಸ್ಮೃತೋ ಧಾತುಃ ರಾಜರಾಜಾಯತೇ ಸದಾ ।
ಅಧಿಕಂ ಸರ್ವಭೂತೇಭ್ಯೋ ರಾಜತೇ ಚ ದಿವಾಕರಃ ॥ ೫೪ ॥

ಅಧಿಕಂ ರಾಜತೇ ಯಸ್ಮಾತ್ತಸ್ಮಾದ್ರಾಜಾ ಸ ಉಚ್ಯತೇ ।
ರಾಜಪತ್ನೀ ತು ಸಾ ಯಸ್ಮಾತ್ತಸ್ಮಾದ್ರಾಜ್ಞೀ ಪ್ರಕೀರ್ತಿತಾ ॥ ೫೫ ॥

---

೫೧-೫೨. (೧) ವೈವಸ್ವತಮನು, (೨) ವೈವಸ್ವತಯಮ, (೩) ಕಾಳಿಂದೀ (೪) ಸಾವರ್ಣೇಯಮನು, (೫) ಶನೈಶ್ಚರ, (೬) ತಪತೀ (೭) ನಾಸತ್ಯ, ದಸ್ರರೆಂಬ ಇಬ್ಬರು ಅಶ್ವಿನೀ ದೇವತೆಗಳು, (೮) ರೇವಂತ ಅಥವ ರೇವತನೆಂಬ, ಈ ಎಂಟು ಮಂದಿಯೂ ಸೂರ್ಯನ ಮಕ್ಕಳು.

೫೩. ಈ ರೀತಿ ಸೂರ್ಯನ ಮಕ್ಕಳು ಆಯಾಯ ಹೆಸರಿನಿಂದ ಪ್ರಸಿದ್ಧಿಹೊಂದಿದ್ದಾರೆ. ಸೂರ್ಯನ ಎರಡನೇ ಪತ್ನಿಯಾದವಳೇ ಪೃಥಿವಿಯು; ಸಂಜ್ಞಾದೇವಿಯೇ ರಾಜ್ಞೀಎಂದು ಸಂಜ್ಞೆಯನ್ನು ಹೊಂದಿರುವಳು. ಛಾಯಾದೇವಿಯೇ ನಿಕ್ಷುಭಾ ಎಂದೂ ಕರೆಯಲ್ಪಡುವಳು.

೫೪-೫೫. ನಾರದರು ಈಗ ಸಂಜ್ಞಾದೇವಿಗೆ ರಾಜ್ಞೀ ಎಂದು ಹೆಸರು ಬರಲು ಕಾರಣವನ್ನು ನಿರೂಪಣೆಮಾಡುವರು:—

ರಾಜೃಧಾತುವು ದೀಪ್ತ್ಯರ್ಥಕ ಅಂದರೆ ಪ್ರಕಾಶಿಸು ಎಂಬರ್ಥದಿಂದ ಕೂಡಿದ್ದು. ಈ ಸೂರ್ಯನು ಪ್ರಕಾಶಕವಾದ ಭೂತಗಳಲ್ಲೆಲ್ಲಾ ಶ್ರೇಷ್ಠವೆನಿಸಿ, ಎಲ್ಲರಿಗಿಂತಲೂ ಹೆಚ್ಚಾಗಿ ಕಾಂತಿಯಿಂದಕೂಡಿ, ಪ್ರಕಾಶವನ್ನುಂಟುಮಾಡುತ್ತಾನೂ ಪ್ರಕಾಶಿಸುತ್ತಿರುವುದರಿಂದ, ಇವನನ್ನು ರಾಜನೆಂದು, ಕರೆಯುವರು. ಸಂಜ್ಞಾದೇವಿಯು ಇವನ ಪತ್ನಿಯಾಗಿರುವುದರಿಂದ, "ರಾಜನ ಹೆಂಡತಿ ರಾಜ್ಞೀ ಎನಿಸುವಂತೆ" ಇವಳಿಗೂ ರಾಜ್ಞೀ ಎಂದು ಹೆಸರು ಬಂದಿತು.

ಸೇಯಂ ಸಂಚಾಲಿತಾ ಯಸ್ಮಾದ್ರಾಜ್ಞಾ ಯತ್ತದುದಾಹೃತಂ ।
ಕ್ಷುಭಸಂಚಲನೇ ಧಾತುಃ ನಿಕ್ಷುಭಾ ತೇನ ನಿಶ್ಚಲಾ ॥ ೫೬ ॥

ಭವಂತ್ಯತೀವ ಯಸ್ಮಾದ್ವಾ ಸ್ವರ್ಗೇಽಪಿ ಕ್ಷುದ್ವಿವರ್ಜಿತಾ ।
ಛಾಯಾಂ ತಾಂ ವಿಶತೇ ದಿವ್ಯಾಂ ಸ್ಮೃತಾ ಸಾ ತೇನ ನಿಕ್ಷುಭಾ ॥ ೫೭ ॥

ಯಮಸ್ತು ತೇನ ಶಾಪೇನ ಭೃಶಂ ಪೀಡಿತಮಾನಸಃ ।
ಧರ್ಮೇಣ ರಕ್ಷಯಾಮಾಸ ಧರ್ಮರಾಜಸ್ತತೋಽಭವತ್ ॥ ೫೮ ॥

ಶುಭೇನ ಕರ್ಮಣಾ ಚೈವ ಸಂಪ್ರಾಪ್ತಃ ಪರಮಾಂ ದ್ಯುತಿಂ ।
ಪಿತೄಣಾಮಾಧಿಪತ್ಯಂ ಚ ಲೋಕಪಾಲತ್ವಮೇವ ಚ ॥ ೫೯ ॥

---

೫೬ ಸಂಜ್ಞಾದೇವಿಯು, ಸೂರ್ಯನಿಂದ ಚೆನ್ನಾಗಿ ಚಾಲನೆ ಮಾಡಲ್ಪಟ್ಟಳು. ಅಂದರೆ ಅವಳು ಸೂರ್ಯತೇಜಸ್ಸನ್ನು ಸಹಿಸಲಾರದೆ, ಕೆಲವುಕಾಲ ರೂಪಾಂತರವನ್ನು ಹೊಂದಿ ಬೇರೆಕಡೆ ಇರುತ್ತಿದ್ದಳು. ಇವಳಿಗೆ ಇರುವ ಹೆಸರು ಹೇಗೆಬಂದಿತೆಂಬುದನ್ನು ತಿಳಿಸಿ ಆಯಿತು. ಎಲೈ ಸಾಂಬನೆ, ಈಗ ಛಾಯಾದೇವಿಗೆ ನಿಕ್ಷುಭಾ ಎಂಬ ಹೆಸರು ಬಂದ ರೀತಿಯನ್ನರುಹುವೆನು, ಕೇಳು, "ಕ್ಷುಭ ಧಾತುವು ಸಂಚಲನ ರೂಪ ಅರ್ಥವುಳ್ಳದ್ದು. ಇದಿಲ್ಲದಿರುವುದು ಅಂದರೆ, ನಿಶ್ಚಲವಾಗಿರುವುದು ನಿಕ್ಷುಭಾ, ಈ ರೀತಿ ನಿಶ್ಚಲವಾಗಿರುವಿಕೆಯನ್ನು ಹೊಂದಿರುವುದರಿಂದ ಛಾಯಾ ದೇವಿಗೆ ನಿಕ್ಷುಭಾ ಎಂದು ಹೆಸರು ಬಂದಿತು. ಈಗ ಮತ್ತೊಂದು ರೀತಿಯಿಂದಲೂ ಈ ರೀತಿ ನಿಕ್ಷುಭಾ ಎಂದು ಹೆಸರು ಬರಲು ಕಾರಣವನ್ನು ಹೇಳುವರು.

೫೭ ಕ್ಷುಭ ಶಬ್ದಕ್ಕೆ ಹಸಿವು ಎಂಬರ್ಥವಿಟ್ಟುಕೊಂಡು, ಸ್ವರ್ಗದಲ್ಲಿ ಸಹ ಹೆಚ್ಚು ಹಸಿವಿನಿಂದಲೇ ಇರುತ್ತ ದಿವ್ಯವಾದ ಛಾಯೆಯನ್ನು ಪ್ರವೇಶಿಸುತ್ತಲೇ ಇದ್ದುದರಿಂದ ಈ ಛಾಯಾದೇವಿಯನ್ನು ನಿಕ್ಷುಭಾ ಎಂದು ಕರೆಯುವರು.

೫೮-೫೯. ವೈವಸ್ವತ ಯಮನು ತಾಯಿಯ ಶಾಪದಿಂದ ಹೆಚ್ಚುನೊಂದ ಮನಸ್ಸುಳ್ಳವನಾಗಿ, ಧರ್ಮದಿಂದ ರಕ್ಷಣೆಮಾಡುತ್ತಿದ್ದನು. ಇದರಿಂದ ಇವನಿಗೆ ಧರ್ಮರಾಜನೆಂದು ಹೆಸರು ಬಂದಿತು. ಶುಭ ಕರ್ಮಗಳನ್ನೇ ಆಚರಿಸುತ್ತ, ಉತ್ತಮವಾದ ಕಾಂತಿಯನ್ನು ಹೊಂದಿ, ಪಿತೃದೇವತೆಗಳ ಆಧಿಪತ್ಯವನ್ನೂ, ಲೋಕಪಾಲಕತ್ವವನ್ನೂ ಪಡೆದನು.

ಯಸ್ತು ಜ್ಯೇಷ್ಠೋ ಮನುಸ್ತೇಷಾಂ ಸರ್ಗಸ್ತಸ್ಯ ತು ಸಾಂಪ್ರತಂ ।
ತಸ್ಯಾಪ್ಯೈಕ್ಷ್ವಾಕವೋ ವಂಶೋ ಯಸ್ಮಿನ್ ಜಾತೋ ಬೃಹದ್ಬಲಃ ॥ ೬೦ ॥

ಕನೀಯಸೀ ತಯೋರ್ಯಾ ತು ಯಮೀ ಕನ್ಯಾ ಯಶಸ್ವಿನೀ ।
ಅಭವತ್ ಸಾ ಸರಿಚ್ಛ್ರೇಷ್ಠಾ ಯಮುನಾ ಲೋಕಪಾವನೀ ॥ ೬೧ ॥

ಮನುಃ ಪ್ರಜಾಪತಿಶ್ಚೈವ ಸಾವರ್ಣಿಃ ಸುಮಹಾತಪಾಃ ।
ಭಾವ್ಯಃ ಸೋಽನಾಗತೇ ತಸ್ಮಿನ್ಮನುಃ ಸಾವರ್ಣಿಕೋಽಂತರೇ ॥ ೬೨ ॥

ಮೇರುಪೃಷ್ಠೇ ತಪೋ ದಿವ್ಯಮದ್ಯಾಪಿ ಚರತಿ ಪ್ರಭುಃ ।
ಭ್ರಾತಾ ಶನೈಶ್ಚರಸ್ತಸ್ಯ ಗ್ರಹತ್ವಂ ಸ ತು ಲಬ್ಧವಾನ್ ॥ ೬೩ ॥

ತಪತೀ ನಾಮ ಯಾ ಛಾಯಾ ಸ್ತಯೋಃ ಕನ್ಯಾ ಕನೀಯಸೀ ।
ಸಾ ಬಭೂವ ಶುಭಾ ಪತ್ನೀ ರಾಜ್ಞಃ ಸಂವರಣಸ್ಯ ತು ॥ ೬೪ ॥

---

೬೦. ಅವರಲ್ಲಿ ಹಿರಿಯಮಗನಾದ ವೈವಸ್ವತಮನುವು, ಸೃಷ್ಟಿಮಾಡುವುದರಲ್ಲಿ ಉದ್ಯುಕ್ತನಾಗಿ ಈ ಬೃಹದ್ಬಲನುದಯಿಸಿದ ಇಕ್ಷ್ವಾಕು ವಂಶವನ್ನು ಸೃಷ್ಟಿ ಮಾಡುತ್ತಿರುವನು.

೬೧. ಕಿರಿಯ ಮಗಳೂ, ಕೀರ್ತಿವಂತಳೂ, ಆದ ಯಮುನೆಯು ನದಿಗಳಲ್ಲೆಲ್ಲಾ ಶ್ರೇಷ್ಠಳೆನಿಸಿ, ಲೋಕಗಳನ್ನೆಲ್ಲಾ, ಪವಿತ್ರ ಮಾಡುತ್ತ ಯಮುನಾ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಳು.

೬೨. ಮಹಾ ತಪಃಶಾಲಿಯಾದ ಸಾವರ್ಣೀಯ ಮನುವು, ಸೋಽನಾಗತವೆಂಬ ಸಾವರ್ಣಿಕ ಮನ್ವಂತರದಲ್ಲಿ, ಪ್ರಜಾಪತಿಯೆನಿಸಿ, ಸೃಷ್ಟಿ ಕಾರ್ಯವನ್ನೆಸಗುವನು.

೬೩. ಈ ರೀತಿ ಇದ್ದರೂ ಇನ್ನೂ ಸಾವರ್ಣೀಯ ಮನುವು, ಮೇರು ಪರ್ವತದ ತಪ್ಪಲಿನಲ್ಲಿ ತಪಸ್ಸು ಮಾಡುತ್ತಲೇ ಇರುವನು. ಇವನ ತಮ್ಮನಾದ ಶನೈಶ್ಚರನು ತಪಸ್ಸುಮಾಡಿ ಗ್ರಹಾಧಿ ಪತ್ಯವನ್ನು ಪಡೆದನು.

೬೪. ಸೂರ್ಯ ಮತ್ತು ಛಾಯಾ ದೇವಿಯರ ಕಿರಿಯಮಗಳಾದ, ತಪತೀ ಎಂಬುವಳು ಸಂವರಣ ರಾಜನ ಶುಭ ಪತ್ನಿಯಾದಳು.

ತಪತೀ ನಾಮ ನದ್ಯೇವಂ ವಿಂಧ್ಯಪಾದವಿನಿಃಸೃತಾ ।
ನಿತ್ಯಂ ಪುಣ್ಯಜಲಾಸ್ನಾನೈಃ ಮಾರ್ತಂಡತನಯಾ ಶುಭಾ ॥ ೬೫ ॥

ಅಶ್ವಿನೌ ದೇವವೈದ್ಯತ್ವಂ ಲಬ್ಧವಂತೌ ಯಶಸ್ವಿನೌ ।
ತಯೋಃ ಕರ್ಮೋಪಜೀವಂತಿ ಲೋಕೇಽಸ್ಮಿನ್ಭಿಷಜಃ ಶುಭಾಃ ॥ ೬೬ ॥

ರೇವಂತೋ ನಾಮ ಯೋಽರ್ಕಸ್ಯ ರೂಪೇಣಾಽಪ್ರತಿಮಃ ಸುತಃ ।
ಸತ್ವವಾನ್ಪಾವನಃ ಸೋಽಥ ಶೀಘ್ರಮೇವ ಪ್ರಸೀದತಿ ॥ ೬೭ ॥

ಕ್ಷೇಮೇಣ ವ್ರಜತೇಽಧ್ವಾನಂ ಯಸ್ತಂ ಪೂಜಯತೇ ಪಥಿ ।
ಸುಖಪ್ರಸಾದೋ ಮರ್ತ್ಯಾನಾ ಆಖ್ಯಾಸ್ಯತಿ ಯಥಾ ಸುಖಂ ॥ ೬೮ ॥

ಯ ಇದಂ ಜನ್ಮ ದೇವಾನಾಂ ಶ್ರುಣುಯಾದ್ವಾ ಪಠೇತ್ತಥಾ ।
ವಿವರ್ಧತೇ ಚ ಪುತ್ರಾಣಾಂ ಸರ್ವೇಷಾಮಪಿ ತೈಜಸಂ ॥ ೬೯ ॥

---

೬೫. ಈ ರೀತಿ ಸೂರ್ಯನ ಮಗಳಾದ ತಪತೀನದಿಯು, ವಿಂಧ್ಯಪರ್ವತದ ತಪ್ಪಲಿನಿಂದ ಹೊರಟು, ನಿತ್ಯವೂ ಪುಣ್ಯಪ್ರದವಾದ ತೀರ್ಥದಿಂದ ಕೂಡಿಹರಿಯುತ್ತಾ, ಸ್ನಾನಪಾನಮಾಡುವವರಿಗೆಲ್ಲಾ ಮಂಗಳವನ್ನುಂಟುಮಾಡುತ್ತಿದೆ.

೬೬. ಕೀರ್ತಿವಂತರಾದ ಅಶ್ವಿನೀ ದೇವತೆಗಳು, ದೇವತೆಗಳ ವೈದ್ಯರಾದರು. ಅವರ ವೈದ್ಯಕರ್ಮವನ್ನೇ ಆಶ್ರಯಿಸಿ, ಈ ಭೂಲೋಕದಲ್ಲಿ, ಅನೇಕ ಜನ ವೈದ್ಯರು, ಜೀವನನಡೆಸುತ್ತಾ, ಮಂಗಳಕರರಾಗಿರುವರು.

೬೭-೬೮. ಸೂರ್ಯಪುತ್ರನೂ, ತನ್ನ ರೂಪಕ್ಕೆ ಸರಿಯಾದ ತೇಜಸ್ಸುಳ್ಳವನೂ ಆದ ರೇವಂತನು, ಸತ್ವಗುಣವುಳ್ಳವನೂ, ಪರಿಶುದ್ಧನೂ ಆಗಿರುವನು. ಇವನು ಜಾಗ್ರತೆಯಾಗಿ ಪ್ರಸನ್ನನಾಗುವನು. ಮಾರ್ಗದಲ್ಲಿ ಇವನನ್ನು ಪೂಜಿಸಿದರೆ, ಕ್ಷೇಮದಿಂದ ಮಾರ್ಗವು ಸಾಗುವುದು. ಮನುಷ್ಯರಿಗೆ, ಸುಲಭವಾಗಿ ಅನುಗ್ರಹ ಮಾಡುವ ಈ ರೈವತನು, ಹಿತವಾಗುವಂತೆ ಎಲ್ಲವನ್ನೂ ಉಪದೇಶಿಸುವನು.

೬೯-೭೦. ಯಾರು, ದೇವತೆಗಳ ಈ ಜನ್ಮಕಥೆಯನ್ನು ಕೇಳುವರೋ, ಅಥವಾ ಓದುವರೋ, ಅವರ ಮತ್ತು ಅವರ ಮಕ್ಕಳ ಮತ್ತೂ ಎಲ್ಲರ ತೇಜಸ್ಸು

**ಆಪದಾಂ ಪ್ರಾಪ್ಯಮುಚ್ಯೇತ ಪ್ರಾಪ್ನುಯಾಚ್ಚ ಮಹತ್ಫಲಂ ॥ ೭೧ ॥**

**ಇತಿ ಶ್ರೀ ಸಾಂಬಪುರಾಣೇ ಏಕಾದಶೋಽಧ್ಯಾಯಃ.**

---

ಅಭಿವೃದ್ಧಿಯಾಗುವುದು. ಮತ್ತೂ ಎಂತಹ ವಿಪತ್ತು ಬಂದಿದ್ದರೂ ಅದರಿಂದ ಪಾರಾಗಿ, ಉತ್ತಮವಾದ ಫಲವನ್ನು ಹೊಂದಿ, ಭೂಲೋಕದಲ್ಲಿ ಪ್ರಕಾಶಿಸುವರು, ಎಂದು ನಾರದರು, ಜಾಂಬವತೀ ಕುಮಾರನಾದ ಸಾಂಬನಿಗೆ ಹೇಳಿದರು.

ಇಲ್ಲಿಗೆ ಸಾಂಬಪುರಾಣದಲ್ಲಿನ ಹನ್ನೊಂದನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವಾದಶೋಽಧ್ಯಾಯಃ



॥ ಸಾಂಬ ಉವಾಚ ॥

ಶರೀರಲಿಖನಂ ಭಾನೋರುಕ್ತಂ ಸಂಕ್ಷೇಪತಸ್ತ್ವಯಾ ।
ವಿಸ್ತರಾಚ್ಛ್ರೋತುಮಿಚ್ಛಾಮಿ ತನ್ಮಮಾಚಕ್ಷ್ವ ಸುವ್ರತ ॥ ೧ ॥

॥ ನಾರದ ಉವಾಚ ॥

ಪಿತುರ್ಗೃಹಂ ಗತಾಯಾಂ ತು ಸಂಜ್ಞಾಯಾಂ ಯದುನಂದನ ।
ಭಾಸ್ಕರಶ್ಚಿಂತಯಾಮಾಸ ಸಂಜ್ಞಾಂ ಮದ್ರೂಪಕಾಂಕ್ಷಿಣೀಂ ॥ ೨ ॥

---

## ಹನ್ನೆರಡನೆಯ ಅಧ್ಯಾಯ.

೧. ಸಾಂಬನು, ಮತ್ತೆ ನಾರದಮಹರ್ಷಿಯನ್ನು ಕುರಿತು, "ಮಹರ್ಷಿಯೇ, ನೀನು, ಸೂರ್ಯನ ಶರೀರವನ್ನು ವಿಶ್ವಕರ್ಮನು ವಿಕಾರಗೊಳಿಸಿ ಸ್ವಲ್ಪ ತೇಜಸ್ಸನ್ನು ಕಮ್ಮಿಮಾಡಿದನೆಂದು ಸಂಕ್ಷೇಪವಾಗಿ ತಿಳಿಸಿರುವೆ. ಅದನ್ನು ವಿಸ್ತಾರವಾಗಿ ಕೇಳಲು ಅಪೇಕ್ಷಿಸುತ್ತೇನೆ. ದಯವಿಟ್ಟು ನನಗೆ ತಿಳಿಸಬೇಕೆಂದು" ಕೇಳಿಕೊಂಡನು.

೨-೩. ನಾರದರು, ಎಲೈ ಯದುಕುಮಾರನಾದ ಸಾಂಬನೇ, ಸಂಜ್ಞಾದೇವಿಯು ತಂದೆಯಾದ ವಿಶ್ವಕರ್ಮನ ಮನೆಗೆ ಹೋದಮೇಲೆ, ಸೂರ್ಯನು ಸಂಜ್ಞಾರೂಪಧಾರಿಣಿಯಾಗಿರುವ ಛಾಯಾದೇವಿಯಿಂದ ಸಂಜ್ಞಾದೇವಿಯ ವೃತ್ತಾಂತವನ್ನು ತಿಳಿದಮೇಲೆ ಸಂಜ್ಞಾದೇವಿಯು, ತನ್ನ ತೇಜಸ್ಸನ್ನು ಸಹಿಸ

**ಯಾತಾ ಪಿತುರ್ಗೃಹಂ ಯಚ್ಚ ತಪಸ್ತೇಪೇ ಯಶಸ್ವಿನೀ ।**
**ತಸ್ಮಾನ್ಮನೀಷಿತಂ ತಸ್ಯಾಃ ಪೂರಯಾಮಿ ಮನೋರಥಂ ॥ ೩ ॥**

**ಏತಸ್ಮಿನ್ನಂತರೇ ಬ್ರಹ್ಮಾ ತತ್ರಾಗತ್ಯ ದಿವಾಕರಂ ।**
**ಊಚೇ ಮಧುರಯಾ ವಾಚಾ ರವೇಃ ಪ್ರೀತಿಕರಂ ವಚಃ ॥ ೪ ॥**

**ಆದಿದೇವೋಽಸಿ ದೇವಾನಾಂ ಜ್ಞಾತಮೇತತ್ಸ್ವಯಂ ಮಯಾ ।**
**ಶ್ವಶುರೋ ವಿಶ್ವಕರ್ಮಾ ತೇ ರೂಪಂ ನಿರ್ವರ್ತಯಿಷ್ಯತಿ ॥ ೫ ॥**

**ಏವಮುಕ್ತ್ವಾ ರವಿಂ ಬ್ರಹ್ಮಾ ವಿಶ್ವಕರ್ಮಾಣಮಬ್ರವೀತ್ ।**
**ನಿರ್ವರ್ತಯಾಽಸ್ಯ ರೂಪಂ ತ್ವಂ ಮಾರ್ತಂಡಸ್ಯ ತು ಶೋಭನಂ ॥ ೬ ॥**

---

ಲಾರದೆ, ತನ್ನ ರೂಪವು ಸ್ವಲ್ಪ ತೇಜಸ್ಸಿನಿಂದ ಕಡಿಮೆಯಾಗಿ, ಮನೋಹರವಾಗುವುದನ್ನೇ ಅಪೇಕ್ಷಿಸುತ್ತಾ, ತಂದೆಯ ಮನೆಗೆ ಹೋಗಿರುವಳೆಂದೂ ಅಲ್ಲಿಂದಲೂ ಕೆಲವು ದಿವಸಗಳ ಮೇಲೆ ಹೊರಟು ರೂಪಾಂತರವನ್ನು ಹೊಂದಿ ತಪಸ್ಸುಮಾಡುತ್ತಿರುವಳೆಂದೂ ಆ ಕೀರ್ತಿವಂತಳ ಮನೋರಥವನ್ನು ನಾನು ಈಡೇರಿಸಬೇಕೆಂದೂ ನಿಶ್ಚಯಿಸಿದನು.

೪-೫. ಈ ಸಂದರ್ಭದಲ್ಲಿ ಬ್ರಹ್ಮನು ಸೂರ್ಯನ ಸಮೀಪಕ್ಕೆ ಬಂದು, ಅವನಿಗೆ ಸಂತೋಷವಾಗುವಂತೆ ಮಧುರವಾದ ನುಡಿಗಳಿಂದ ಮಾತನಾಡುತ್ತಾ, "ಎಲೈ ಭಾಸ್ಕರನೇ, ನೀನು ಎಲ್ಲದೇವತೆಗಳಿಗೂ ಆದಿದೇವನಾಗಿರುವೆ, ಇದು ನನಗೆ ಗೊತ್ತಿರುವುದು. ನಿನ್ನ ಮಾವನಾದ ವಿಶ್ವಕರ್ಮನು ನಿನ್ನ ರೂಪನ್ನು ಸ್ವಲ್ಪ ಬದಲಾಯಿಸಿ ಸುಂದರವಾಗುವಂತೆ, ಮಾಡುತ್ತಾನೆ. ನೀನು ಅವನ ಸಮೀಪಕ್ಕೆ ಹೋಗೆಂದು" ಹೇಳಿದನು.

೬. ಬ್ರಹ್ಮನು ಸೂರ್ಯನಿಗೆ ಈ ರೀತಿ ಹೇಳಿದ ನಂತರ, ವಿಶ್ವಕರ್ಮನನ್ನು ಕುರಿತು, "ನೀನು ಈ ಸೂರ್ಯನ ರೂಪವನ್ನು ಸುಂದರವಾಗುವಂತೆ ಬದಲಾಯಿಸು" ಎಂದು ಹೇಳಿದನು.

**ತತೋ ಬ್ರಹ್ಮಸಮಾದೇಶಾತ್ ಭ್ರಮಿಮಾರೋಪ್ಯ ಭಾಸ್ಕರಂ ।**
**ರೂಪಂ ನಿರ್ವರ್ತಯಾಮಾಸ ವಿಶ್ವಕರ್ಮಾ ಶನೈಃ ಶನೈಃ ॥ ೭ ॥**

**ತತಸ್ತುಷ್ಟಾವ ತಂ ಬ್ರಹ್ಮಾ ಸರ್ವೈರ್ದೇವಗಣೈಃ ಸಹ ।**
**ಗುಹ್ಯೈಃ ನಾನಾವಿಧೈಃ ಸ್ತೋತ್ರೈಃ ವೇದವೇದಾಂಗಸಂಮಿತೈಃ ॥ ೮ ॥**

**ಸ್ವಸ್ತಿ ತೇಽಸ್ತು ಜಗನ್ನಾಥ ವರ್ಷಘರ್ಮಹಿಮಪ್ರದ ।**
**ಶಾಂತಿಂ ಜುಷಸ್ವ ಲೋಕಾನಾಂ ದೇವದೇವ ದಿವಾಕರ ॥ ೯ ॥**

**ತತೋ ರುದ್ರಶ್ಚ ವಿಷ್ಣುಶ್ಚ ಭಕ್ತ್ಯಾ ತುಷ್ಟುವತುಸ್ತದಾ ।**
**ತೇಜಸ್ತೇ ವರ್ಧತಾಂ ದೇವ ಲಿಖ್ಯಮಾನಂ ದಿವಸ್ಪತೇ ॥ ೧೦ ॥**

---

೭. ವಿಶ್ವಕರ್ಮನು ಬ್ರಹ್ಮನ ಅಪ್ಪಣೆಯಂತೆ ಸೂರ್ಯನನ್ನು ಭ್ರಮಿಯಲ್ಲಿ (ಅಂದರೆ ತೇಜಸ್ಸು ಕಡಿಮೆಯಾಗಲು ಉಪಯೋಗಿಸುವ ಯಂತ್ರವೆಂದು ತಿಳಿಯಬೇಕು.) ಇರಿಸಿ, ಮೆಲ್ಲ ಮೆಲ್ಲಗೆ ಅವನ ರೂಪನ್ನು ಬದಲಾಯಿಸಿದನು.

೮. ಅನಂತರ ಬ್ರಹ್ಮನು ಸಕಲ ದೇವ ಸಮೂಹಗಳೊಡನೆ, ಆ ಸೂರ್ಯ ಭಗವಂತನನ್ನು ರಹಸ್ಯವಾದ ಮತ್ತು ವೇದವೇದಾಂಗಗಳಿಂದ ಕೂಡಿದ ಅನೇಕ ಸ್ತೋತ್ರಗಳಿಂದ ಸ್ತೋತ್ರಮಾಡಿದನು.

೯. ಅದೇನೆಂದರೆ; "ಎಲೈ ಜಗದೊಡೆಯನೂ, ದೇವೋತ್ತಮನೂ ಆದ ದಿವಾಕರನೆ, ನಿನಗೆ ಮಂಗಳವಾಗಲಿ. ಮಳೆ, ಬಿಸಿಲು ಮತ್ತು ಹಿಮಗಳನ್ನುಂಟು ಮಾಡಿದ ಮಹಿಮೆಯುಳ್ಳ ದೇವನೆ, ಸಕಲ ಲೋಕಗಳಿಗೂ, ಶಾಂತಿಯನ್ನುಂಟು ಮಾಡು."

೧೦. ಅನಂತರ, ರುದ್ರನೂ ಮತ್ತು ವಿಷ್ಣುವೂ ಸಹ ಆ ಭಾಸ್ಕರನನ್ನು ಭಕ್ತಿಯಿಂದ ಎಲೈ ಸೂರ್ಯದೇವನೆ, "ವಿಶ್ವಕರ್ಮನಿಂದ ಬದಲಾಯಿಸಲ್ಪಡುತ್ತಿರುವ ನಿನ್ನ ತೇಜಸ್ಸು ಅಭಿವೃದ್ಧಿ ಹೊಂದಲಿ", ಎಂದು ಸ್ತೋತ್ರ ಮಾಡಿದರು.

ಇಂದ್ರಸ್ತ್ವಾಗತ್ಯ ತಂ ದೇವಂ ಲಿಖ್ಯಮಾನಮುಥಾಽಸ್ತುವತ್ ।
ಜಯದೇವ ಜಯಸ್ವೇತಿ ಶಶ್ವಜ್ಞಯ ಜಗತ್ಪತೇ ॥ ೧೧ ॥

ಋಷಯಶ್ಚ ತತಃ ಸಪ್ತ ವಿಶ್ವಾಮಿತ್ರಪುರೋಗಮಾಃ ।
ತುಷ್ಟುವುರ್ವಿವಿಧೈಸ್ತೋತ್ರೈಃ ಸ್ವಸ್ತಿಸ್ವಸ್ತೀತಿ ವಾದಿನಃ ॥ ೧೨ ॥

ವೇದೋಕ್ತಾಭಿಸ್ತಥಾಶೀರ್ಭಿಃ ವಾಲಖಿಲ್ಯಾಶ್ಚ ತುಷ್ಟುವುಃ ।
ತ್ವಂ ನಾಥ ಮೋಕ್ಷಿಣಾಂ ಮೋಕ್ಷೋ ಧ್ಯೇಯಸ್ತ್ವಂ ಧ್ಯಾಯಿನಾಂ ಸದಾ ॥

ಸ್ವರ್ಗತಿಃ ಸರ್ವಸತ್ವಾನಾಂ ತ್ವಯಿ ಸರ್ವಂ ಪ್ರತಿಷ್ಠಿತಂ ।
ಶಂ ಪ್ರಜಾಭ್ಯೋಽಸ್ತು ದೇವೇಶ ಪ್ರಸನ್ನೋಽಸ್ತು ಜಗತ್ಪತೇ ॥ ೧೪ ॥

---

೧೧. ರೂಪ ನಿರ್ವರ್ತನ ಸಮಯದಲ್ಲಿ ಇಂದ್ರನೂ ಸಹ ಬಂದು, ಸೂರ್ಯ ದೇವನನ್ನು ಕುರಿತು, "ಎಲೈ ಜಗದೊಡೆಯನಾದ ದಿವಾಕರನೆ, ನಿನಗೆ ಜಯವಾಗಲಿ, ಯಾವಾಗಲೂ ನೀನು ಜಯಶೀಲನಾಗೆಂದು" ಸ್ತೋತ್ರಮಾಡಿದನು.

೧೨. ಅನಂತರ ವಿಶ್ವಾಮಿತ್ರನೇ ಮೊದಲಾದ ಸಪ್ತರ್ಷಿಗಳೂ ಅನೇಕ ವಿಧವಾದ ಸ್ತೋತ್ರಗಳಿಂದ ಸೂರ್ಯದೇವನೇ, ನಿನಗೆ ಶುಭವಾಗಲಿ, ಕಲ್ಯಾಣವಾಗಲಿ ಎಂದು ಸ್ತೋತ್ರಮಾಡಿದರು.

೧೩-೧೪. ಅನಂತರ, ವಾಲಖಿಲ್ಯರು, ವೇದೋಕ್ತವಾದ ಆಶೀರ್ವಾದಗಳಿಂದ, " ಎಲೈ, ಸೂರ್ಯದೇವನೆ, ನೀನು ಮೋಕ್ಷಾಪೇಕ್ಷಿಗಳಿಗೆಲ್ಲಾ ಮೋಕ್ಷ ಸ್ವರೂಪನು. ಧ್ಯಾನಮಾಡುವವರಿಗೆಲ್ಲಾ ಧ್ಯೇಯಸ್ವರೂಪನು. ನೀನೇ ಸಕಲ ಪ್ರಾಣಿಗಳಿಗೂ ಸ್ವರ್ಗಗತಿಯನ್ನುಂಟುಮಾಡುವವನು. ಎಲ್ಲವೂ ನಿನ್ನಲ್ಲೇ ಅಡಕವಾಗಿರುವುದು. ಜಗದೊಡೆಯನೇ, ನೀನು ಪ್ರಸನ್ನನಾಗಿ ಪ್ರಜಾ ವರ್ಗಕ್ಕೆಲ್ಲಾ ಸುಖವನ್ನುಂಟುಮಾಡು, ಎಂದು " ಸ್ತೋತ್ರಮಾಡಿದರು.

ಯಥಾ ವಿದ್ಯಾಧರಾ ನಾಗಾಃ ಯಕ್ಷರಾಕ್ಷಸಪನ್ನಗಾಃ ।
ಕೃತಾಂಜಲಿಪುಟಾಃ ಸರ್ವೇ ಶಿರೋಭಿಃ ಪ್ರಣತಾ ರವಿಂ ॥ ೧೫ ॥

ಊಚಿರೇ ವಿವಿಧಾ ವಾಚೋ ಮನಃಶ್ರೋತ್ರಸುಖಾವಹಾಃ ।
ಸಹ್ಯಂ ಭವತು ತೇಜಸ್ತೇ ಭೂತಾನಾಂ ಭೂತಭಾವನ ॥ ೧೬ ॥

ತತೋ ಹಾಹಾ ಹೂಹೂಶ್ಚೈವ ತುಷ್ಟುವು ರ್ನಾರದಸ್ತಥಾ ।
ಉಪಗಾಯತುಮಾರಬ್ಧಾಃ ಗಂಧರ್ವಕುಶಲಾ ರವಿಮ್ ॥ ೧೭ ॥

ಷಡ್ಜಮಧ್ಯಮಗಾಂಧಾರಗ್ರಾಮತ್ರಯವಿಶಾರದಾಃ ।
ಮೂರ್ಛನಾಭಿಶ್ಚ ತಾಲೈಶ್ಚ ಸಂಧಾರಿತಶಕ್ಯೈಃ ಶಿಕ್ಯೈಃ ॥ ೧೮ ॥

---

೧೫. ಹೀಗೆಯೇ, ವಿದ್ಯಾಧರರೂ, ನಾಗರೂ, ಯಕ್ಷರೂ, ರಾಕ್ಷಸರೂ, ಪನ್ನಗರೂ, ಮೊದಲಾದ ಎಲ್ಲಾ ದೇವಯೋನಿ ವಿಶೇಷಗಳೂ ಕೈಜೋಡಿಸಿ, ತಲೆಯನ್ನು ಬಾಗಿಸಿ, ಸೂರ್ಯನನ್ನು ನಮಸ್ಕರಿಸಿದರು.

೧೬. ಅನಂತರ ಅವರೆಲ್ಲರೂ, ಕಿವಿಗಳಿಗೂ, ಮತ್ತು ಮನಸ್ಸಿಗೂ ಸಹ ಆನಂದವಾಗುವಂಥಾ ಮಾತುಗಳಿಂದ ಸ್ತೋತ್ರಮಾಡುತ್ತ, "ಎಲೈ ಸಕಲಭೂತಗಳನ್ನೂ ಸೃಷ್ಟಿ ಸ್ಥಿತಿ ಲಯಗಳಿಂದ ಕಾಪಾಡುವ ಸ್ವಾಮಿಯೇ, ಸಕಲ ಭೂತಗಳೂ (ಸ್ಥಾವರ ಜಂಗಮಾತ್ಮಕವಾದ) ನಿನ್ನ ತೇಜಸ್ಸನ್ನು ಸಹಿಸುವಂತಾಗಲಿ ಎಂದು ನುಡಿದರು.

೧೭ ಅನಂತರ, ಹಾಹಾ, ಹೂಹೂ, ಎಂಬ ಗಂಧರ್ವರೂ, ಮತ್ತು ನಾರದದರೂ ಸಹ ಸ್ತೋತ್ರವಾಡಿದರು. ಗಂಧರ್ವ ಶ್ರೇಷ್ಠರಾದ ಕೆಲವರು ಸೂರ್ಯನನ್ನು ಗಾನದಿಂದ ಸ್ತೋತ್ರಮಾಡಲುಪಕ್ರಮಿಸಿದರು.

೧೮. ಷಡ್ಜ, ಮಧ್ಯಮ ಮತ್ತು ಗಾಂಧಾರ ಈ ಮೂರು ರಾಗದಲ್ಲಿ ಪಂಡಿತರಾದ ಈ ಗಂಧರ್ವರು, [ಮೋರ್ಚಿಂಗ್] ಬಾಯಿನಲ್ಲಿ ಕಬ್ಬಿಣದ ತಂತಿಯ ಸಹಾಯದಿಂದ ಬಾರಿಸುವ ವಾದ್ಯ ತಾಳಗಳನ್ನೂ ಮತ್ತೂ ಕಂಜರೀ ಮೊದಲಾದ ವಾದ್ಯಗಳನ್ನು ಬಾರಿಸುತ್ತಾ ಹಾಡಿದರು.

**ವಿಶ್ವಾಚೀ ಚ ಘೃತಾಚೀ ಚ ಹ್ಯುರ್ವಶೀ ಚ ತಿಲೋತ್ತಮಾ ।**
**ಮೇನಕಾ ಚ ಸುಜನ್ಯಾ ಚ ರಂಭಾ ಚಾಪ್ಸರಸಾಂ ವರಾ ॥ ೧೯ ॥**

**ಉಪನರ್ತಿತುಮಾರಬ್ಧಾಃ ಲಿಖ್ಯಮಾನಂ ವಿಭಾವಸುಂ ।**
**ಹಾವಭಾವವಿಲಾಸ್ಯೈಶ್ಚ ಕುರ್ವಂತ್ಯೋಽಭಿನಯಾನ್ಬಹೂನ್ ॥ ೨೦ ॥**

**ತತೋಽತೀವ ಕಲಂ ಜ್ಞೇಯಂ ಮಧುರಂ ಚಾಭ್ಯವರ್ತತ ।**
**ಸರ್ವೇಷಾಮೇವ ದೇವಾನಾಂ ಮನಃಶ್ರೋತ್ರಸುಖಪ್ರದಮ್ ॥ ೨೧ ॥**

**ಪ್ರಾವಾದ್ಯಂತಸ್ತತಸ್ತಂತ್ರೀವೀಣಾವೇಣ್ವಾದಿದರ್ದುರಾಃ ।**
**ಪಣವಾಃ ಪುಷ್ಕರಾಶ್ಚೈವ ಮೃದಂಗಾಃ ಪಟಿಹಾಸ್ತಥಾ ॥ ೨೨ ॥**

**ದೇವದುಂದುಭಯಃ ಶಂಖಾಃ ಶತಶೋಽಥ ಸಹಸ್ರಶಃ ।**
**ಗಾಯದ್ಭಿಶ್ಚೈವ ಗಂಧರ್ವೈಃ ನೃತ್ಯದ್ಭಿಶ್ಚಾಪ್ಸರೋಗಣೈಃ ॥ ೨೩ ॥**
**ತೂರ್ಯವಾದಿತ್ರಘೋಷೈಶ್ಚ ಸರ್ವಂ ಕೋಲಾಹಲೀಕೃತಂ ॥ ೨೪ ॥**

---

೧೯-೨೦. ಅನಂತರ ವಿಶ್ವಾಚೀ, ಘೃತಾಚೀ, ಉರ್ವಶೀ, ತಿಲೋತ್ತಮಾ, ಮೇನಕಾ, ಸುಜನ್ಯಾ, ಮತ್ತು ಅಪ್ಸರಶ್ರೇಷ್ಠಳೆನಿಸಿದ ರಂಭಾ ಈ ಏಳುಜನ ಅಪ್ಸರ ಸ್ತ್ರೀಯರೂ ಸೂರ್ಯನ ರೂಪನಿರ್ವರ್ತನವಾಗುವಾಗ, ತಮ್ಮ ಹಾವ, ಭಾವ, ವಿಲಾಸಗಳಿಂದ, ಅನೇಕತರಹದ ಅಭಿನಯುಗಳನ್ನು ತೋರಿಸುತ್ತಾ ನರ್ತನಮಾಡಲು ಆರಂಭಿಸಿದರು.

೨೧. ಅನಂತರ ಎಲ್ಲದೇವತೆಗಳ ಮನಸ್ಸಿಗೂ ಮತ್ತು ಕಿವಿಗಳಿಗೂ ಸುಖ ವಾಗುವಂತೆ ಅತ್ಯಂತ ಮಧುರವಾದ ಸಂಗೀತವೂ,ಕಲಾಭಿನಯುವೂ ಅಲ್ಲಿ ನಡೆಯಿತು.

೨೨-೨೩-೨೪. ಆಗಲೇ ತಂಬೂರಿ, ವೀಣೆ, ಕೊಳಲು, ಮೊದಲಾದ ವಾದ್ಯಗಳೂ, ಪಣವ ಪುಷ್ಕರ ( ಇವೆರಡೂ ವಾದ್ಯವಿಶೇಷಗಳು ಇವುಗಳನ್ನು ಜಾಗಟೆ ತರಹದ ವಾದ್ಯಗಳೆಂದು ಹೇಳಬಹುದು.. ) ಮೃದಂಗ, ತಮಟೆ ಮೊದಲಾದುವುಗಳೂ, ದೇವದುಂದುಭಿಗಳೂ, ಸಾವಿರಾರು ಶಂಖಗಳೂ ಧ್ವನಿ ಮಾಡುತ್ತಿದ್ದುವು. ಗಂಧರ್ವರು ಹಾಡುತ್ತಲೂ, ಅಪ್ಸರಸ್ತ್ರೀಯರ ಸಮೂಹವು ನರ್ತನಮಾಡುತ್ತಲೂ ಇದ್ದಿತು. ಶಂಖ, ಜಾಗಟೆಗಳ ಧ್ವನಿಗಳೂ ನಡೆಯುತ್ತಿದ್ದವು ಈ ಎಲ್ಲಾ ಧ್ವನಿಗಳಿಂದಲೂ ಆ ಸ್ಥಳವು ಕೋಲಾಹಲವನ್ನು ಹೊಂದಿದ್ದಿತು.

ತತಃ ಕೃತ್ಯೈಃ ಕರಪುಟೈಃ ಪದ್ಮಕೇಸರಸಂಯುತೈಃ ।
ಲಲಾಟೋಪರಿವಿನ್ಯಸ್ತೈಃ ಪ್ರಣೇಮುಃ ಸರ್ವದೇವತಾಃ ॥ ೨೫ ॥

ತತಃ ಕೋಲಾಹಲೇ ತಸ್ಮಿನ್ ಸರ್ವದೇವಸಮಾಗಮೇ ।
ತೇಜಸಃ ಶಾತನಂ ಚಕ್ರೇ ವಿಶ್ವಕರ್ಮಾ ಶನೈಃ ಶನೈಃ ॥ ೨೬ ॥

ಇತಿಹಿಮಜಲಘರ್ಮಕಾಲಹೇತೋಃ ।
ಹರಕಮಲಾಸನ ವಿಷ್ಣುಸಂಸ್ತುತಸ್ಯ ॥
ತನುಪರಿಲಿಖನಂ ನಿಗದ್ಯಮಾನೋ ।
ವ್ರಜತಿ ದಿವಾಕರಲೋಕಮಾಯುಷೋಽಂತೇ ॥ ೨೭ ॥

ಇತಿ ಶ್ರೀ ಸಾಂಬಪುರಾಣೇ ದ್ವಾದಶೋಽಧ್ಯಾಯಃ.

---

೨೫. ಅನಂತರ ಸಕಲ ದೇವತೆಗಳೂ, ಪದ್ಮಗಳನ್ನು ಕೈಯಲ್ಲಿಹಿಡಿದು ಕೈಜೋಡಿಸಿ ಹಣೆಯಮೇಲಿಟ್ಟುಕೊಂಡು, ಸೂರ್ಯದೇವನಿಗೆ ನಮಸ್ಕಾರ ಮಾಡಿದರು.

೨೬. ಎಲ್ಲಾದೇವತೆಗಳೂ ಒಟ್ಟುಸೇರಿ ಕೋಲಾಹಲಮಾಡುತ್ತಿರುವ ಸಂದರ್ಭದಲ್ಲಿ ವಿಶ್ವಕರ್ಮನು, ಮೆಲ್ಲಮೆಲ್ಲನೆ, ಸೂರ್ಯನ ತೇಜಸ್ಸನ್ನು ಕಡಿಮೆ ಯಾಗುವಂತೆ, ಮಾಡಿದನು. ( ಕಡೆದನು ಎಂಬುದಕ್ಕೆ ಬದಲಾಗಿ ಹೀಗೆ ಹೇಳಿದೆನು )

೨೭. ಈರೀತಿ, ಹಿಮಗಾಲ, ಬೇಸಿಗೆಕಾಲ, ಮಳೆಗಾಲಗಳ ನಡೆಯುವಿಕೆ ಗೋಸ್ಕರ, ಬ್ರಹ್ಮವಿಷ್ಣುಮಹೇಶ್ವರರಿಂದ ಸ್ತೋತ್ರಮಾಡಲ್ಪಟ್ಟು, ಸೂರ್ಯದೇವನ ಶರೀರ ಮತ್ತೂ ತೇಜಸ್ಸಿನ ವ್ಯತ್ಯಾಸವನ್ನು ಅಥವಾ ಮಾರ್ಪಾಡನ್ನು, ತಿಳಿಸುವ ಈ ಕಥಾಭಾಗವನ್ನು ಯಾರು ಹೇಳುವರೋ ಮತ್ತೂ ಕೇಳುವರೋ ಅವರು, ಈ ಲೋಕದಲ್ಲಿ ಸಕಲ ಸುಖಗಳನ್ನೂ ಅನುಭವಿಸಿ ತಮ್ಮ ಆಯುಸ್ಸು ಮುಗಿದ ನಂತರ ಸೂರ್ಯಲೋಕವನ್ನು ಹೊಂದಿ ಸುಖಿಸುವರೆಂದು ನಾರದನು ಹೇಳಿದನು.

ಇಲ್ಲಿಗೆ ಸಾಂಬಪುರಾಣದಲ್ಲಿನ ಹನ್ನೆರಡನೆಯ ಅಧ್ಯಾಯವು ಮುಗಿದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಯೋದಶೋಽಧ್ಯಾಯಃ

---

॥ ಸಾಂಬ ಉವಾಚ ॥

ತಸ್ಮಿನ್ಕಾಲೇ ಭ್ರಮೋ ರೂಪೇ ಲಿಖ್ಯಮಾನೋ ದಿವಸ್ಪತಿಃ ।
ಬ್ರಹ್ಮಾದಿಭಿರ್ಯಥಾ ದೇವಃ ಸ್ತುತೋ ವೈ ತದ್ವದಸ್ವ ಮೇ ॥ ೧ ॥

॥ ನಾರದ ಉವಾಚ ॥

ತತೋ ಲಿಖಿತುಮಾರಬ್ಧಃ ಪ್ರಹೃಷ್ಟೇನಾಂತರಾತ್ಮನಾ ।
ವಿಶ್ವಕರ್ಮಾಥ ಮಾರ್ತಾಂಡಂ ಸ್ತೋತ್ರೇಣಾನೇನ ಸಂಸ್ತುವನ್ ॥ ೨ ॥

---

## ಹದಿಮೂರನೆಯ ಅಧ್ಯಾಯ.

೧. ಅನಂತರ ಕೃಷ್ಣಪುತ್ರನಾದ ಸಾಂಬನು ನಾರದನನ್ನು ಕುರಿತು "ದೇವರ್ಷಿಯೆ; ಸೂರ್ಯನನ್ನು ಭ್ರಮಿಯಲ್ಲಿ ಆರೋಪಿಸಿ ವಿಶ್ವಕರ್ಮನು ಅವನ ರೂಪನಿರ್ವರ್ತನ ಮಾಡುತ್ತಿರುವ ಸಮಯದಲ್ಲಿ ಬ್ರಹ್ಮಾದಿಗಳು ಸೂರ್ಯದೇವನನ್ನು ಕ್ರಮವಾಗಿ ಸ್ತೋತ್ರಮಾಡಿದರೆಂದು ತಿಳಿಸಿದೆ. ಈಗ ಅದನ್ನೇ ವಿಸ್ತರಿಸಿ ಹೇಳಬೇಕು" ಎಂದು ಬೇಡಿದನು.

೨. ಆಗ ನಾರದನು "ಸಾಂಬನೇ ಕೇಳು, ಅನಂತರ ಸಂತೋಷಗೊಂಡ ಮನಸ್ಸಿನಿಂದ ವಿಶ್ವಕರ್ಮನು, ಸೂರ್ಯತೇಜಸ್ಸನ್ನು ಕನ್ನಿಮಾಡುತ್ತ ಮಾರ್ತಾಂಡನನ್ನು ಮುಂದೆ ಹೇಳುವ ಸ್ತೋತ್ರದಿಂದ ಸ್ತುತಿಸಿದನು.

॥ ವಿಶ್ವಕರ್ಮೋವಾಚ ॥

ಪ್ರಯತ್ನತಃ ಪ್ರಣತಹಿತಾನುಕಂಪಿನೇ ।
ಮರುತ್ವತಃ ಸಮನವಸಪ್ತಸಪ್ತಯೇ ॥
ವಿವಸ್ವತೇ ಕಮಲಕುಲಾವಬೋಧಿನೇ ।
ನಮಸ್ತಮಃ ಪಟಲಪಟಾವಪಾಟಿನೇ ॥ ೩ ॥

ಪಾವನಾಯ ಶುಚಿಪುಣ್ಯಕರ್ಮಣೇ ನೈಕಕಾಮವಿಷಯಪ್ರದಾಯಿನೇ ।
ಭಾಸ್ವರಾಽಮಲಮಯೂಖಮಾಲಿನೇ ಸರ್ವಲೋಕಹಿತಕಾರಿಣೇ ನಮಃ ॥

ಅಜಾಯ ಲೋಕತ್ರಯಕಾರಣಾಯ ಭೂತಾತ್ಮನೇ ಗೋಪತಯೇ ವೃಷಾಯ ।
ನಮೋ ಮಹಾಕಾರುಣಿಕೋತ್ತಮಾಯ ಸೂರ್ಯಾಯ ಸರ್ವಪ್ರಭವಾಪ್ಯಯಾಯ ॥ ೫ ॥

---

೩. ಎಲೈ ದೇವದೇವನೆ, ನೀನು ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುವ ನಿನ್ನ ಭಕ್ತರಲ್ಲಿ ಹಿತವನ್ನೂ, ದಯೆಯನ್ನೂ ತೋರುತ್ತೀಯೆ. ವಾಯುವೇಗಕ್ಕೆ ಸಮಾನವಾದ ವೇಗವುಳ್ಳ ಹೊಸದಾದ ಏಳು ಕುದುರೆಗಳೇ ನಿನ್ನ ರಥವಾಹಕಗಳಾಗಿರುವುವು. ಪದ್ಮ ಸಮೂಹಗಳೆಲ್ಲಾ ವಿಕಾಸಹೊಂದಿ ಪ್ರಕಾಶಿಸುವುದೂ ನಿನ್ನಿಂದಲೇ. ಎಲೈ, ಸರ್ವವ್ಯಾಪಿಯಾಗಿ ಪ್ರಸರಿಸುವ ಕಿರಣವುಳ್ಳವನೇ, ಅಂಧಕಾರ ಸಮೂಹವೆಂಬ ಬಟ್ಟೆಗಳನ್ನು ಧ್ವಂಸ ಮಾಡುವವನೇ, ನಿನಗೆ ನಮಸ್ಕಾರ.

೪. ಪರಿಶುದ್ಧನೂ, ಶುದ್ಧವೂ ಪುಣ್ಯಕರವೂ ಆದ ಕರ್ಮ ಸ್ವರೂಪನೂ ಅನೇಕ ವಿಧವಾದ ಮನೋರಥಗಳ ವಿಷಯವನ್ನು ಪೂರ್ತಿಗೊಳಿಸುವವನೂ, ಹೊಳೆಯುವ ಮತ್ತು ಪರಿಶುದ್ಧವಾದ ಕಿರಣಗಳುಳ್ಳವನೂ,, ಸಕಲ ಲೋಕಗಳಿಗೂ ಹಿತವನ್ನುಂಟುಮಾಡುವವನೂ, ಆದ ನಿನಗೆ ನಮಸ್ಕಾರವು.

೫. ದೇವನೇ, ನೀನು ಉತ್ಪತ್ತಿರಹಿತನು. ಸ್ವರ್ಗ, ಮರ್ತ್ಯ ಪಾತಾಳವೆಂಬ ಮೂರು ಲೋಕಗಳಲ್ಲಿಯೂ, ಸೃಷ್ಟಿ, ಸ್ಥಿತಿ, ಲಯ ಸಂಹಾರಗಳನ್ನು ಮಾಡುತ್ತಾ ಮೂರು ಲೋಕಗಳಿಗೂ, ಉತ್ಪತ್ತಿ ಕಾರಣನೂ ಆಗಿರುವೆ. ಎಲೈ, ಸೂರ್ಯದೇವನೇ, ಪಂಚಭೂತಗಳ ಸ್ವರೂಪನೂ, ಗೋವುಗಳಿಗೆ, ಅಥವಾ ಕಿರಣಗಳಿಗೆ ಅಧಿಪತಿಯೂ, ಪುಣ್ಯ ಸ್ವರೂಪನೂ, ನೀನೇ ಆಗಿರುವೆ. ಮಹಾ ದಯಾಶಾಲಿಯಾದ ಸೂರ್ಯಭಗವಂತನೇ, ಸರ್ವ ಸಮರ್ಥನಾದ ನಿನಗೆ ವಂದನೆ.

ವಿವಸ್ವತೇ ಜ್ಞಾನಭೃದಂತರಾತ್ಮನೇ ।
ಜಗತ್ಪ್ರತಿಷ್ಠಾಯ ಜಗದ್ಧಿತೈಷಿಣೇ ॥
ಸ್ವಯಂಭುವೇ ಲೋಕಸಮಸ್ತಚಕ್ಷುಷೇ ।
ಸುರೋತ್ತಮಾಯಾಮಿತತೇಜಸೇ ನಮಃ ॥ ೬ ॥

ಕ್ಷಣಮುದಯಾಚಲಮೌಲಿಮಣಿಃ ಸುರಗಣವಂದ್ಯೋ ಪಿಹಿತೋ ಜಗತಃ ।
ತ್ವಮುರುಮಯೂಖಸಹಸ್ರವಪುಃ ಜಗತಿ ವಿಭಾಸಿ ತಮಾಂಸಿ ನುದನ್ ॥೭॥

ತವ ತಿಮಿರಾಸವಪಾನಮದಾತ್ ಭವತಿ ವಿಲೋಹಿತವಿಗ್ರಹತಾ ।
ಮಿಹಿರ ವಿಭಾಸಿ ಯತಃ ಸುತರಾಂ ತ್ರಿಭುವನಭಾವನತೀಕ್ಷ್ಣಕರೈಃ ॥ ೮ ॥

---

೬. ಎಲೈ, ಸುರಶ್ರೇಷ್ಠನೇ, ಯಾರಿಗೂ ಗೋಚರನಾಗದಂತೆ ಎಲ್ಲ ಪ್ರಾಣಿಗಳಲ್ಲಿಯೂ, ನೀನಡಗಿರುವೆ; ಜ್ಞಾನಿಗಳ ಅಂತಃಕರಣವೇ ನೀನು; ಜಗತ್ತನ್ನು ರಕ್ಷಿಸುವವನೂ, ಲೋಕಗಳಿಗೆ ಹಿತವನ್ನುಂಟುಮಾಡುವವನೂ, ನೀನೇ ಆಗಿರುವೆ; ನೀನು ಉತ್ಪತ್ತಿರಹಿತನು, ಸಮಸ್ತಲೋಕಗಳೇ ನಿನ್ನ ಕಣ್ಣುಗಳು, ತೇಜಸ್ವಿಯಾದ ದೇವನೇ, ನಿನಗೆ ಪ್ರಣಾಮ.

೭. ಸೂರ್ಯದೇವನೇ, ನೀನು ಒಂದು ಮುಹೂರ್ತ ಉದಯಾಚಲ ಪರ್ವತದ ಶಿಖರಕ್ಕೆ ರತ್ನಪ್ರಾಯನಾಗಿರುವೆ. ದೇವತೆಗಳೆಲ್ಲರೂ ನಿನಗೆ ನಮಸ್ಕರಿಸುವರು. ಯಾವಾಗಲೂ ಜಗತ್ತಿಗೆ ಹಿತವನ್ನುಂಟು ಮಾಡುತ್ತಿರುವೆ. ನೀನು ತೀಕ್ಷ್ಣವಾದ ಸಹಸ್ರ ಕಿರಣಗಳಿಂದ ಕೂಡಿದ ಶರೀರವುಳ್ಳವನು. ಪ್ರಪಂಚದ ಕತ್ತಲೆಯನ್ನೆಲ್ಲಾ ಹೋಗಲಾಡಿಸುತ್ತ ನೀನು ಪ್ರಕಾಶಿಸುತ್ತಿರುವೆ.

೮. ಮಿಹಿರಪ್ರಭುವೇ; ನೀನು ಮೂರುಲೋಕಗಳನ್ನು ನಿನ್ನ ತೀಕ್ಷ್ಣವಾದ ಕಿರಣಗಳಿಂದ ಕಾಪಾಡುತ್ತಾ, ಕತ್ತಲೆ ಎಂಬ ಮದ್ಯವನ್ನು ಪಾನಮಾಡುವುದರಿಂದ, ನಿನ್ನ ಶರೀರವು ಅದರಿಂದ ಮತ್ತವಾಗಿ ಕೆಂಪಾಗಿ ಕಾಣುತ್ತಿರುವುದು.

ರಥಮಧಿರುಹ್ಯ ಸಮಾವಯುವ್ಯೈಃ ಪರಿವಿಧಿಕಲ್ಪಿತಭೂರುಚಿರಂ ।
ಸತತಮಖಿನ್ನಹಯೈಃ ಭಗವನ್ ಚರಸಿ ಜಗತ್ಸ್ಥಿತಯೇಽವಿರತಮ್ ॥ ೯ ॥

ಅಮೃತಸುಧಾಧಿರಸೇನ ಸಮಂ ಸುರಗಣಭೂತಗಣೇನ ಸಮಮ್ ।
ಪ್ರಣಿಪತಿತೈಕಪದತ್ರಿತಯಂ ಶುಕಸಮವರ್ಣಹಯಪ್ರಥಿತಮ್ ॥ ೧೦ ॥

ತವ ಪದಪಾಂಸುಪವಿತ್ರತಮಂ ಹ್ಯಭಿರತವತ್ಸಲ ಮಾಂ ಪ್ರಣತಂ ।
ತ್ರಿಭುವನಪಾವನ ಪಾಹಿ ರವೇ ವಿವಿಧಗದಾರ್ತಿಯುತಂ ಸತತಂ ॥ ೧೧ ॥

ಇತಿ ಶ್ರೀ ಸಾಂಬಪುರಾಣೇ ತ್ರಯೋದಶೋಽಧ್ಯಾಯಃ.

---

೯. ಭಗವಂತನೆ, ನಿನ್ನ ರಥವನ್ನು ಯಾವಾಗಲೂ ದುಃಖ (ಕ್ಲೇಶ) ವನ್ನೇ ಹೊಂದದಿರುವ ಮತ್ತು ಒಂದೇ ಸಮನಾದ ಆಕೃತಿಯುಳ್ಳ ಕುದುರೆಗಳು ಎಳೆಯುತ್ತಿರುವುವು. ನೀನು, ಸುತ್ತಲೂ ಮಂಡಪದಂತೆ ರಚಿಸಿ, ಮಧ್ಯಭಾಗದಲ್ಲಿ ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ಸ್ಥಾನವನ್ನು ರಚಿಸಿರುವ ಸುಂದರವಾದ ಆ ರಥದಲ್ಲಿ ಕುಳಿತು, ಯಾವಾಗಲೂ ಎಡಬಿಡದೆ, ಜಗದ್ರಕ್ಷಣೆಗಾಗಿಯೇ ಸಂಚರಿಸುತ್ತಿರುವೆ.

೧೦. ಎಲೈ ದೇವದೇವನೇ, ನೀನು, ಹಾಲು, ಮತ್ತು ಅಮೃತ ಇವೇ ಮೊದಲಾದ ರಸಪದಾರ್ಥಗಳಿಗೆ ಸಮಾನವಾದ ಗುಣವುಳ್ಳ ಮತ್ತು, ದೇವಗಣ, ಭೂತಗಣಗಳಿಂದ ಕೂಡಿರುವ ರಥದಲ್ಲಿ ಪ್ರಕಾಶಿಸುತ್ತಿರುವೆ. ಮೂರು ಲೋಕಗಳೂ ಏಕಕಾಲದಲ್ಲಿ ನಿನ್ನನ್ನು ನಮಸ್ಕರಿಸುತ್ತಿರುವುವು. ಗಿಣಿಯಬಣ್ಣಕೆ, ಸಮಾನವಾದ ಅಂದರೆ ಹಸುರಾದ ಕುದುರೆಗಳಿಂದ ಕೂಡಿ ಪ್ರಕಾಶಮಾನನಾಗಿರುವೆ.

೧೧. ರವಿದೇವನೆ, ನಿನ್ನ ಪಾದದೂಳಿಯು ಪರಮಪವಿತ್ರವಾದುದು. ಭಕ್ತವತ್ಸಲನಾದ ಸ್ವಾಮಿಯೇ, ಮೂರು ಲೋಕಗಳನ್ನು ಪಾವನಗೊಳಿಸುವ ಸಾಮರ್ಥ್ಯವುಳ್ಳ ನೀನು, ಅನೇಕ ರೋಗ ರುಜಿನಗಳಿಂದ ಕೂಡಿ ನಮಸ್ಕಾರ ಮಾಡುತ್ತಿರುವ ನನ್ನನ್ನು ರಕ್ಷಿಸು, ಎಂದು ವಿಶ್ವಕರ್ಮನು ಭಗವಂತನಾದ ರವಿಯನ್ನು ಬಗೆಬಗೆಯಿಂದ ಸ್ತೋತ್ರಮಾಡಿದನು.

ಇಲ್ಲಿಗೆ ಸಾಂಬಪುರಾಣದಲ್ಲಿನ ಹದಿಮೂರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಚತುರ್ದಶೋಽಧ್ಯಾಯಃ

---

॥ ಶ್ರೀ ಸಾಂಬ ಉವಾಚ ॥

ಭೂಯೋಽಪಿ ಕಥಯ ತ್ವಂ ಮಾಂ ಕಥಾಂ ಸೂರ್ಯಸಮಾಗತಾಂ ।
ನ ತೃಪ್ತಿಮಧಿಗಚ್ಛಾಮಿ ಕಥಾಂ ಶೃಣ್ವನ್ನಿಮಾಂ ಶುಭಾಂ ॥ ೧ ॥

॥ ನಾರದ ಉವಾಚ ॥

ಆದಿತ್ಯಸ್ಯ ಕಥಾಂ ದಿವ್ಯಾಂ ಸರ್ವಪಾಪಪ್ರಣಾಶಿನೀಂ ।
ವಕ್ಷ್ಯಾಮಿ ಕಥಿತಾಂ ಪೂರ್ವಂ ಬ್ರಹ್ಮಣಾ ಲೋಕಭಾವಿನಾ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯ.

೧. ಸಾಂಬನು, ಪುನಃನಾರದನನ್ನು ಕುರಿತು, "ಮಹಾಮುನಿಯೇ, ಈ ಸೂರ್ಯಭಗವಂತನ ಕಥೆಯನ್ನು ಎಷ್ಟು ಕೇಳಿದರೂ ತೃಪ್ತಿಯೇ ಆಗುವುದಿಲ್ಲ ವಾದುದರಿಂದ, ನೀನು ನನಗೆ ಸೂರ್ಯಸಂಬಂಧವಾದ ಕಥೆಯನ್ನೂ ಇನ್ನೂ ಉಪದೇಶಿಸಬೇಕು" ಎಂದು ಪ್ರಾರ್ಥಿಸಿದನು.

೨. ಇದನ್ನು ಕೇಳಿ, ನಾರದನು, ಸಾಂಬನೇ, ಲೋಕಸೃಷ್ಟಿಕರ್ತನಾದ ಬ್ರಹ್ಮನು ಹಿಂದೆ ಹೇಳಿರುವ, ಮತ್ತು ಸಕಲಪಾಪಗಳನ್ನೂ ಹೋಗಲಾಡಿಸುವ ಸೂರ್ಯನ ದಿವ್ಯವಾದ ಕಥೆಯನ್ನು ನಿನಗೆ ಹೇಳುವೆನು ಕೇಳು, ಎಂದನು.

ಋಷಯಃ ಪರಿಪೃಚ್ಛಂತಿ ಬ್ರಹ್ಮಲೋಕೇ ಪಿತಾಮಹಮ್ ।
ತಾಪಿತಾಃ ಸೂರ್ಯಕಿರಣೈಃ ಋಷಯೋ ಜ್ಞಾನಮೋಹಿತಾಃ ॥ ೩ ॥

॥ ಋಷಯ ಊಚುಃ ॥

ಕೋಽಯಂ ದೀಪ್ತೋ ಮಹಾತೇಜಾಃ ವಹ್ನಿರಶ್ಮಿಸಮಪ್ರಭಃ ।
ಏತದ್ವೇದಿತುಮಿಚ್ಛಾಮಃ ಪ್ರಭವೋಽಸ್ಯ ಕುತಃ ಪ್ರಭೋ ॥ ೪ ॥

॥ ಬ್ರಹ್ಮೋವಾಚ ॥

ತತೋ ಭೂತೇಷು ಸರ್ವೇಷು ನಷ್ಟೇ ಸ್ಥಾವರಜಂಗಮೇ ।
ಪ್ರವೃತ್ತೇ ಗುಣಹೇತುತ್ವೇ ಪೂರ್ವಂ ಬುದ್ಧಿರಜಾಯತ ॥ ೫ ॥

ಅಹಂಕಾರಸ್ತತೋ ಜಾತೋ ಮಹಾಭೂತಪ್ರವರ್ತಕಃ ।
ವಾಯ್ವಗ್ನಿಜಲಖಂಭೂಮಿಸ್ತತಸ್ತ್ವಂಡಮಜಾಯತ ॥ ೬ ॥

---

೩. ಸೂರ್ಯನ ತೀಕ್ಷ್ಣಕಿರಣಗಳಿಂದ ಹೆಚ್ಚಾಗಿ ತಾಪಗೊಂಡ ಜ್ಞಾನಿಗಳಾದ ಋಷಿಗಳು ಬ್ರಹ್ಮಲೋಕಕ್ಕೆ ತೆರಳಿ, ಅಲ್ಲಿ ಪಿತಾಮಹನಾದ ಬ್ರಹ್ಮನನ್ನು, ಮುಂದೆ ಹೇಳುವಂತೆ ಪ್ರಾರ್ಥಿಸುತ್ತಿದ್ದರು.

೪. ಋಷಿಗಳು ಬ್ರಹ್ಮನನ್ನು ಕುರಿತು, ಪ್ರಭುವೇ, ಉರಿಯುತ್ತಿರುವ ಸ್ವಭಾವವುಳ್ಳವನೂ, ಮಹಾತೇಜಸ್ವಿಯೂ, ಬೆಂಕಿಗೆ ಸಮಾನವಾದ ಕಾಂತಿಯುಳ್ಳವನೂ ಆಗಿ ಅಂತರಿಕ್ಷದಲ್ಲಿ ಸಂಚರಿಸುತ್ತಿರುವ ಈ ಮಹಾಪುರುಷನಾರು? ಉದಯಿಸಿದ ಬಗೆ ಹೇಗೆ? ಇವೆಲ್ಲವನ್ನೂ ತಿಳಿಯಲಪೇಕ್ಷಿಸುತ್ತೇವೆ. ಆದುದರಿಂದ ಸರ್ವಸಮರ್ಥನಾದ ನೀನು ನಮಗೆ ತಿಳಿಯಬೇಕು" ಎಂದು ಕೇಳಿಕೊಂಡರು.

೫. ಆಗ ಬ್ರಹ್ಮನು ಹೀಗೆಂದನು " ಋಷಿಗಳಿರಾ, ಸ್ಥಾವರಜಂಗಮಾತ್ಮಕವಾದ ಸಕಲಭೂತಗಳು ನಾಶವಾಗಲಾಗಿ, ಗುಣನಿಮಿತ್ತಕವಾದ ಪ್ರವೃತ್ತಿಯಲ್ಲಿ ಮೊದಲು ಬುದ್ಧಿಯು ಹುಟ್ಟಿತು.

೬. ಅನಂತರ ಈ ಬುದ್ಧಿಯಿಂದ, ಪೃಥಿವ್ಯಪ್ತೇಜೋವಾಯುರಾಕಾಶಗಳೆಂಬ ಪಂಚಮಹಾಭೂತಗಳ ಪ್ರವೃತ್ತಿಗೆ ಕಾರಣವಾದ ಅಹಂಕಾರವು ಹುಟ್ಟಿತು. ಇದರಿಂದ ಪಂಚಭೂತಗಳೂ ಅವುಗಳಿಂದ ಅಂಡವೂ ಉಂಟಾದುವು.

ತಸ್ಮಿಂಸ್ತ್ವಂಡೇ ಇಮೇ ಲೋಕಾಃ ಸಪ್ತ ವೈ ಸಂಪ್ರತಿಷ್ಠಿತಾಃ ।
ಪೃಥಿವೀಂ ಸಪ್ತಭಿರ್ದ್ವೀಪೈಃ ಸಮುದ್ರೈಶ್ಚೈವ ಸಪ್ತಭಿಃ ॥ ೭ ॥

ತತ್ರ ಚಾವಸ್ಥಿತಾಹ್ಯಾಸನ್ ಅಹಂ ವಿಷ್ಣುರ್ಮಹೇಶ್ವರಃ ।
ವಿಮೂಢಾಸ್ತಮಸಾ ಸರ್ವೇ ಪ್ರಧ್ಯಾಯನ್ನೀಶ್ವರಂ ಪರಂ ॥ ೮ ॥

ತತೋಽಚಿಂತ್ಯಂ ಮಹತ್ತೇಜಃ ಪ್ರಾದುರ್ಭೂತಂ ತಮೋನುದಂ ।
ಧ್ಯಾನಯೋಗೇನ ಚಾಽಸ್ಮಾಭಿಃ ವಿಜ್ಞಾತಃ ಸವಿತಾ ತದಾ ॥ ೯ ॥

ಜ್ಞಾತ್ವಾ ಚ ಪರಮಾತ್ಮಾನಂ ಸರ್ವ ಏವ ಪೃಥಕ್ ಪೃಥಕ್ ।
ದಿವ್ಯಾಭಿಸ್ಸ್ತುತಿಭಿರ್ದೇವಾಸ್ತಂ ಸ್ತೋತುಮುಪಚಕ್ರಮುಃ ॥ ೧೦ ॥

---

೭-೮. ಆ ಅಂಡದಲ್ಲಿ ಈ ಸಪ್ತಲೋಕಗಳು ಹುಟ್ಟಿದುವು. (ಅವು ಯಾವುವೆಂದರೆ, ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ" ಎಂಬುವು) ಅನಂತರ, ಭೂಲೋಕವನ್ನು, ಏಳು ದ್ವೀಪಗಳಿಂದಲೂ (ಅಂದರೆ, "ಜಂಬೂದ್ವೀಪ, ಪ್ಲಕ್ಷದ್ವೀಪ, ಕುಶದ್ವೀಪ, ಕ್ರೌಂಚದ್ವೀಪ ಶಾಕದ್ವೀಪ, ಶಾಲ್ಮಲಿದ್ವೀಪ, ಪುಷ್ಕರದ್ವೀಪ" ಇವುಗಳು ಸಪ್ತದ್ವೀಪಗಳು) ಕ್ಷೀರ ಸಮುದ್ರವೇ ಮೊದಲಾದ ಸಪ್ತ(ಏಳು) ಸಮುದ್ರಗಳಿಂದಲೂ ವಿಭಾಗಿಸಿ ಅಲ್ಲಿ, ನಾನೂ, ವಿಷ್ಣುವೂ, ಮಹೇಶ್ವರನೂ, ವಾಸಿಸತೊಡಗಿದೆವು. ಈರೀತಿಯಾದಮೇಲೆ ನಾವೆಲ್ಲರೂ ಕತ್ತಲೆಯಿಂದ ಮೂಢರಾಗಿ ಪರಬ್ರಹ್ಮನನ್ನು ಧ್ಯಾನಮಾಡಿದೆವು.

೯. ಆಗ, ಯೋಚಿಸಲು ಸಾಧ್ಯವಾಗದೇ ಇರುವ, ಕತ್ತಲೆಯನ್ನು ನಾಶ ಮಾಡುವ ಮಹಾತೇಜಸ್ಸೊಂದು ಉದಯಿಸಿತು. ನಾವೆಲ್ಲರೂ ಧ್ಯಾನಯೋಗದಿಂದ ನೋಡಲಾಗಿ ಅದೇ ಸೂರ್ಯನೆಂದು ತಿಳಿಯಿತು.

೧೦. ಎಲ್ಲರೂ ಪರಮಾತ್ಮನೆಂದು ತಿಳಿದನಂತರ ಪ್ರತ್ಯೇಕ ಪ್ರತ್ಯೇಕವಾಗಿ ದಿವ್ಯವಾದ ಸ್ತುತಿವಚನಗಳಿಂದ ಸ್ತೋತ್ರಮಾಡಲುಪಕ್ರಮಿಸಿದರು.

ಆದಿದೇವೋಽಸಿ ದೇವಾನಾಂ ಐಶ್ವರ್ಯಾಚ್ಚ ತ್ವಮೀಶ್ವರಃ ।
ಆದಿಕರ್ತಾಸಿ ಭೂತಾನಾಂ ದೇವದೇವೋ ದಿವಾಕರಃ ॥ ೧೧ ॥

ಜೀವನಃ ಸರ್ವಭೂತಾನಾಂ ದೇವಗಂಧರ್ವರಕ್ಷಸಾಂ ।
ಮುನಿಕಿನ್ನರಸಿದ್ಧಾನಾಂ ತಥೈವೋರಗಪಕ್ಷಿಣಾಂ ॥ ೧೨ ॥

ತ್ವಂ ಬ್ರಹ್ಮಾ ತ್ವಂ ಮಹಾದೇವ ಸ್ತ್ವಂ ವಿಷ್ಣುಸ್ತ್ವಂ ಜಗತ್ಪತಿಃ ।
ವಾಯುರಿಂದ್ರಶ್ಚ ಸೋಮಶ್ಚ ವಿವಸ್ವಾನರುಣಸ್ತಥಾ ॥ ೧೩ ॥

ತ್ವಂ ಕಾಲಃ ಸೃಷ್ಟಿಕರ್ತಾ ಚ ಹಂತಾ ಭರ್ತಾ ಪ್ರಭುಸ್ತಥಾ ।
ಸರಿತಃ ಸಾಗರಾಃ ಶೈಲಾ ವಿದ್ಯುದಿಂದ್ರಧನೂಂಷಿ ಚ ॥ ೧೪ ॥

ಪ್ರಲಯಃ ಪ್ರಭವಶ್ಚೈವ ವ್ಯಕ್ತಾಽವ್ಯಕ್ತಃ ಸನಾತನಃ ।
ಈಶ್ವರಾತ್ಪರತೋ ವಿದ್ಯಾ ವಿದ್ಯಾಯಾಃ ಪಶವಃ ಶಿವಃ ॥ ೧೫ ॥

---

೧೧-೧೨. ಆದೇನೆಂದರೆ ; ಪರಮಾತ್ಮನೇ, ನೀನು ದೇವತೆಗಳಿಗೆಲ್ಲಾ ಆದಿ ದೇವನೆನಿಸಿರುವೆ. ಐಶ್ವರ್ಯಶಾಲಿಯಾದುದರಿಂದ ನಿನ್ನನ್ನು ಈಶ್ವರನೆಂದು ಕರೆಯುವರು. ಸಕಲ ಭೂತಗಳಿಗೂ ಆದಿಕಾರಣನಾಗಿರುವೆ. ನೀನೇ ದೇವೋತ್ತಮನು. ಮತ್ತೂ ದಿವಾಕರನು. ಸಕಲ ಭೂತಗಳಿಗೂ, ದೇವ ಗಂಧರ್ವ ರಾಕ್ಷಸರುಗಳಿಗೂ, ಮಹರ್ಷಿ, ಕಿನ್ನರ, ಸಿದ್ಧರಿಗೂ, ಸರ್ಪಗಳು ಪಕ್ಷಿಗಳೇ ಮೊದಲಾದ ಸಕಲ ಸತ್ವಗಳಿಗೂ ನೀನೇ ಜೀವನಪ್ರದನಾಗಿರುವೆ.

೧೩. ಬ್ರಹ್ಮನೂ, ವಿಷ್ಣುವೂ, ಮಹೇಶ್ವರನೂ ನೀನೇ ಆಗಿರುವೆ, ನೀನೇ ಸಕಲ ಪ್ರಪಂಚಗಳಿಗೂ ಒಡೆಯನು. ವಾಯು, ಇಂದ್ರ, ಚಂದ್ರ, ವಿವಸ್ವಾನ್, ಮತ್ತೂ ಅರುಣನೂ ನೀನಲ್ಲದೆ, ಬೇರೆಯಲ್ಲ.

೧೪-೧೬. ಪ್ರಭುವೇ, ನೀನೇ ಯಮಸ್ವರೂಪನು, ಸಕಲ ಲೋಕಗಳ ಸೃಷ್ಟಿ, ಸ್ಥಿತಿ, ನಾಶಮಾಡುವವನೂ, ಸರ್ವಸಮರ್ಥನೂ ನೀನೇ. ನದಿಗಳು, ಸಾಗರಗಳು, ಬೆಟ್ಟಗಳು, ಮಿಂಚು, ಗುಡುಗು, ಸಿಡಿಲುಗಳೂ ಇವೆಲ್ಲವೂ ನಿನ್ನ ಸ್ವರೂಪವೇ. ಪ್ರಲಯವನ್ನುಂಟುಮಾಡುವವನೂ, ಸೃಷ್ಟಿಕಾರ್ಯವನ್ನೆಸಗುವವನೂ

ಶಿವಾತ್ಪರತರೋ ದೇವಸ್ತ್ವಮೇವ ಪರಮೇಶ್ವರಃ ॥ ೧೬ ॥
ಸರ್ವತಃ ಪಾಣಿಪಾದಸ್ತ್ವಂ ಸರ್ವತೋಕ್ಷಿಶಿರೋಮುಖಃ ।
ಸರ್ವತಃ ಶ್ರುತಿಮಾನ್ಲೋಕೇ ಸರ್ವಮಾವೃತ್ಯ ತಿಷ್ಠಸಿ ॥ ೧೭ ॥

ಸಹಸ್ರಾಂಶುಃ ಸಹಸ್ರಾಸ್ಯಃ ಸಹಸ್ರಚರಣೇಕ್ಷಣಃ ।
ಭೂತಾದಿಃ ಭೂರ್ಭುವಸ್ಸ್ವಶ್ಚ ಮಹಃ ಸತ್ಯಂ ತಪೋ ಜನಃ ॥ ೧೮ ॥

ಪ್ರದೀಪ್ತಂ ದೀಪನಂ ದಿವ್ಯಂ ಸರ್ವಲೋಕಪ್ರಕಾಶನಮ್ ।
ದುರ್ನಿರೀಕ್ಷ್ಯಂ ಸುರೇಂದ್ರಾಣಾಂ ಯದ್ರೂಪಂ ತಸ್ಯ ತೇ ನಮಃ ॥ ೧೯ ॥

---

ಆಶ್ರಯಭೇದಗಳಿಂದ ಜನಗಳ ದೃಷ್ಟಿಗೆ ಗೋಚರನಾಗುವವನೂ, ಕೆಲವುವೇಳೆ ಗೋಚರನಾಗದೇ ಇರುವವನೂ, ಪುರಾತನನೂ, ನೀನೇ ಆಗಿರುವೆ. ಈಶ್ವರನಿಗಿಂತಲೂ ವಿದ್ಯಾ ಅಥವಾ ಜ್ಞಾನವು ಶ್ರೇಷ್ಠವಾದದ್ದು, ವಿದ್ಯೆಗಿಂತಲೂ ಶಿವನು ಶ್ರೇಷ್ಠನು, ಅಂತಹ ಶಿವನಿಗಿಂತಲೂ ನೀನೇ ಶ್ರೇಷ್ಠನಾದುದರಿಂದ ಎಲೈ ದೇವನೇ, ನೀನೇ ಪರಮೇಶ್ವರನು.

೧೭. ಸ್ವಾಮಿಯೇ, ನೀನು ಎಲ್ಲ ಕಡೆಯಲ್ಲಿಯೂ ಪಾಣಿ (ಕೈ) ಪಾದ (ಕಾಲು) ಗಳುಳ್ಳವನು. ಎಲ್ಲ ಕಡೆಯಲ್ಲೂ ಕಣ್ಣು, ತಲೆ ಮತ್ತು ಮುಖಗಳುಳ್ಳವನು ಲೋಕಗಳೆಲ್ಲದರಲ್ಲೂ ಕಿವಿಗಳುಳ್ಳವನೂ ಆಗಿ ಸಕಲ ಪ್ರಪಂಚವನ್ನೂ ಆವರಿಸಿಕೊಂಡು ಪ್ರಕಾಶಿಸುತ್ತಿರುವೆ.

೧೮. ದೇವದೇವನೆ, ನೀನು ಸಹಸ್ರಕಿರಣಗಳುಳ್ಳವನು. ನಿನಗೆ ಸಾವಿರ ಮುಖಗಳೂ, ಸಹಸ್ರ ಕಾಲುಗಳೂ ಮತ್ತು ಸಾವಿರ ಕಣ್ಣುಗಳೂ, ಇರುವುವು. ಪಂಚಭೂತಗಳಿಗೂ ನೀನೇ ಆದಿಯಾಗಿರುವವನು. ಭೂಃ, ಭುವಃ, ಸ್ವಃ, ಮಹಃ, ಸತ್ಯಂ, ತಪಃ, ಜನಃ, ಎಂಬ ಸಪ್ತಲೋಕಗಳೂ ನೀನೇ ಆಗಿರುವೆ.

೧೯. ಪ್ರಜ್ವಲಿಸುವುದೂ, ಬೆಳಕನ್ನುಂಟುಮಾಡುವುದೂ, ಕಾಂತಿಯುಳ್ಳದ್ದೂ, ಎಲ್ಲಾ ಲೋಕಗಳನ್ನೂ ಪ್ರಕಾಶಪಡಿಸುವುದೂ ಆದ ನಿನ್ನ ರೂಪವು, ದೇವಶ್ರೇಷ್ಠರಿಂದಲೂ ನೋಡಲಸಾಧ್ಯವಾಗಿರುವುದು. ದೇವದೇವನೇ, ಇಂತಹ ತೇಜೋರೂಪಿಯಾದ ನಿನಗೆ ನಮಸ್ಕಾರ.

ಸುರಸಿದ್ಧಗಣೈರ್ಜುಷ್ಟಂ ಭೃಗ್ವತ್ರಿಪುಲಹಾದಿಭಿಃ ।
ಸ್ತುತಂ ಪರಮಮವ್ಯಕ್ತಂ ಯದ್ರೂಪಂ ತಸ್ಯ ತೇ ನಮಃ ॥ ೨೦ ॥

ವೇದ್ಯಂ ವೇದವಿದಾಂ ನಿತ್ಯಂ ಸರ್ವಜ್ಞಾನಸಮನ್ವಿತಮ್ ।
ಸರ್ವದೇವಾದಿದೇವಸ್ಯ ಯದ್ರೂಪಂ ತಸ್ಯ ತೇ ನಮಃ ॥ ೨೧ ॥

ವಿಶ್ವಕೃದ್ವಿಶ್ವಭೂತಿಶ್ಚ ವೈಶ್ವಾನರಸುರಾರ್ಚಿತಂ ।
ವಿಶ್ವಸ್ಥಿತಮಚಿಂತ್ಯಂ ಚ ಯದ್ರೂಪಂ ತಸ್ಯ ತೇ ನಮಃ ॥ ೨೨ ॥

ಪರಂ ವೇದಾತ್ಪರಂ ಯಜ್ಞಾತ್ ಪರಂ ಲೋಕಾತ್ಪರಂ ದಿವಃ ।
ಪರಮಾತ್ಮೇತಿ ವಿಖ್ಯಾತಂ ತದ್ರೂಪಂ ಯಸ್ಯ ತೇ ನಮಃ ॥ ೨೩ ॥

---

೨೦. ದೇವದೇವನೇ, ದೇವತೆಗಳೂ, ಸಿದ್ಧರೂ ಗುಂಪು ಗುಂಪಾಗಿ ನಿನ್ನ ರೂಪನ್ನು ಪ್ರೀತಿಯಿಂದ ಸೇವೆಮಾಡುತ್ತಿರುವರು. ಉತ್ಕೃಷ್ಟವೂ, ಅಗೋಚರವೂ ಆದ ನಿನ್ನ ರೂಪನ್ನು, ಭೃಗು, ಅತ್ರಿ ಮತ್ತು ಪುಲಹ ಇವರೇ ಮೊದಲಾದ ಋಷಿಗಳೂ ಸ್ತೋತ್ರಮಾಡುತ್ತಿರುವರು, ಇಂತಹ ರೂಪವನ್ನು ಧರಿಸಿರುವ ನಿನಗೆ ನಮಸ್ಕಾರ.

೨೧. ವೇದಾಧ್ಯಯನ ಮಾಡಿದವರಿಗೆ, ಸರ್ವಜ್ಞಾನ ಸಂಪನ್ನವಾದ ನಿನ್ನ ರೂಪವು ಯಾವಾಗಲೂ ತಿಳಿಯುವುದು. ಎಲ್ಲಾ ದೇವತೆಗಳಿಗೂ ದೇವನೆನಿಸಿರುವ ದೇವದೇವನೇ, ಇಂತಹ ರೂಪವನ್ನು ಧರಿಸಿರುವ, ನಿನಗೆ ನಮಸ್ಕಾರ.

೨೨. ಆದಿದೇವನೇ, ಪ್ರಪಂಚವನ್ನು ಸೃಷ್ಟಿಸುವುದೂ, ಪ್ರಪಂಚಕ್ಕೆ ಐಶ್ವರ್ಯವನ್ನುಂಟುಮಾಡುವುದೂ ಆದ ನಿನ್ನ ರೂಪವು ಅಗ್ನಿಯೇ ಮೊದಲಾಗ ದೇವತೆಗಳಿಂದ ಪೂಜಿಸಲ್ಪಡುತ್ತಿರುವುದು. ಪ್ರಪಂಚದಲ್ಲೇ ಇದ್ದುಕೊಂಡು ನಿನ್ನ ರೂಪವು ಯೋಚಿಸಲೂ ಅಸಾಧ್ಯವೆನಿಸಿರುವುದು. ಇಂತಹ ರೂಪಯುಕ್ತನಾದ ಪ್ರಭುವೇ, ನಿನಗೆ ನಮಸ್ಕಾರ.

೨೩. ಮಹಾಮಹಿಮನೆ, ನಿನ್ನ ರೂಪವು, ವೇದಗಳಿಗಿಂತಲೂ ಉತ್ಕೃಷ್ಟವಾದದ್ದು. ಯಜ್ಞಗಳಿಗಿಂತಲೂ ಶ್ರೇಷ್ಠವೆನಿಸಿರುವುದು. ಲೋಕಗಳಿಗಿಂತಲೂ ಮತ್ತೂ ಸ್ವರ್ಗಕ್ಕಿಂತಲೂ ಮಿಗಿಲೆನಿಸಿ ಪರಮಾತ್ಮನೆಂದು ಪ್ರಸಿದ್ಧಿಗೊಂಡ, ಆ ರೂಪಧರಿಸಿರುವ ನಿನಗೆ ನಮಸ್ಕಾರ.

ಅವಿಜ್ಞೇಯಮನಾಲಕ್ಷ್ಯಮಧ್ಯಾತ್ಮಗತಿಚಾವ್ಯಯಂ ।
ಅನಾದಿನಿಧನಂ ಚೈವ ಯದ್ರೂಪಂ ತಸ್ಯ ತೇ ನಮಃ ॥ ೨೪ ॥

ನಮೋ ನಮಃ ಕಾರಣಕಾರಣಾಯ ।
ನಮೋ ನಮಃ ಪಾಪವಿಮೋಚನಾಯ॥
ನಮೋ ನಮೋ ವಂದಿತವಂದಿತಾಯ ।
ನಮೋ ನಮುಸ್ತಾಪವಿನಾಶನಾಯ ॥ ೨೫ ॥

ನಮೋ ನಮಃ ಸರ್ವವರಪ್ರದಾಯ ನಮೋ ನಮಃ ಸರ್ವಧನಪ್ರದಾಯ ।
ನಮೋ ನಮಃ ಸರ್ವಸುಖಪ್ರದಾಯ ನಮೋ ನಮಃ ಸರ್ವಮತಿಪ್ರದಾಯ॥

ಶ್ರುತ್ವಾ ಸ ಭಗವಾನ್ದೇವಃ ತೈಜಸಂ ರೂಪಮಾಸ್ಥಿತಃ ।
ಉವಾಚ ವಾಚಂ ಕಲ್ಯಾಣೀಂ ತೇ ವರೋ ವಃ ಪ್ರದೀಯತಾಂ ॥ ೨೭ ॥

---

೨೪. ತಿಳಿಯಲು ಅಸಾಧ್ಯವೂ, ಆತ್ಮಜ್ಞಾನಸ್ವರೂಪವೂ, ನಾಶರಹಿತವೂ, ಆದ್ಯಂತ ರಹಿತವೂ ಆದ ರೂಪವನ್ನು ಧರಿಸಿದ ಪ್ರಭುವೇ, ನಿನಗೆ ನಮಸ್ಕಾರ.

೨೫. ಪರಮಾತ್ಮನು ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣರಾದ ಬ್ರಹ್ಮ ವಿಷ್ಣುಮಹೇಶ್ವರರಿಗೂ ಕಾರಣಸ್ವರೂಪನು. ಇಂತಹಪ್ರಭುವಿಗೆ ನಮಸ್ಕಾರವು. ಪಾಪವಿನಾಶಕನಾದ ದೇವನಿಗೆ ಪ್ರಣಾಮವು. ಇತರರಿಂದ ನಮಸ್ಕರಿಸಲ್ಪಡತಕ್ಕ ದೇವತೆಗಳೂ ನಮಸ್ಕಾರವನ್ನಾರಿಗೆ ಮಾಡುವರೋ ಅಂತಹ ಸೂರ್ಯದೇವನಿಗೆ ವಂದನೆ. ದುಃಖವನ್ನು ದೂರಮಾಡುವ ಮಹಾಪುರುಷನಿಗೆ ನಮಸ್ಕಾರ.

೨೬. ಸಕಲ ವರಗಳನ್ನು ನೀಡುವವನೂ, ಸಕಲೈಶ್ವರ್ಯಪ್ರದನೂ, ಸರ್ವಸುಖಗಳನ್ನುಂಟುಮಾಡುವವನೂ ಮತ್ತೂ ಎಲ್ಲಾ ತರಹಬುದ್ಧಿಯನ್ನು ಉತ್ಪತ್ತಿಮಾಡುವವನೂ ಆದ ಪರಮಾತ್ಮನಿಗೆ ವಂದನೆಗಳು." ಎಂದು ನಾನಾ ಪರಿಯಿಂದ ಸ್ತೋತ್ರಮಾಡಿದರು.

೨೭. ಬ್ರಹ್ಮವಿಷ್ಣು ಮಹೇಶ್ವರರು ಈ ರೀತಿ ತನ್ನನ್ನು ಸ್ತೋತ್ರಮಾಡಲು ಅದನ್ನು ಕೇಳಿ ಪರಮಾತ್ಮನು ಸಂತೋಷಗೊಂಡನು. ಅನಂತರ ತೈಜಸರೂಪವನ್ನು ಧರಿಸಿರುವ ದೇವನು ಬ್ರಹ್ಮಾದಿಗಳನ್ನು ಕುರಿತು, "ನಿಮಗೆ ಯಾವ ವರಗಳನ್ನು ಕೊಡಲಿ" ಎಂಬ ಮಂಗಳಕರವಾದ ಮಾತನ್ನಾಡಿದನು.

॥ ಬ್ರಹ್ಮೋವಾಚ ॥

ತವಾಽತಿತೈಜಸಂ ರೂಪಂ ನ ಕಶ್ಚಿತ್ಸೋಢುಮುತ್ಸಹೇತ್ ।
ಸಹನೀಯಂ ಭವತ್ವೇತದ್ಧಿತಾಯ ಜಗತಃ ಪ್ರಭೋ ॥ ೨೮ ॥

ಏವಮಸ್ತ್ವಿತಿ ಸೋಽಪ್ಯುಕ್ತ್ವಾ ಭಗವಾನ್ ದಿನಕೃದ್ವಿಭುಃ ।
ಲೋಕಾನಾಂ ಕಾರ್ಯಸಿಧ್ಯರ್ಥಂ ಘರ್ಮವರ್ಷಹಿಮಪ್ರದಃ ॥ ೨೯ ॥

ಅತಃ ಸಾಂಖ್ಯಾಶ್ಚ ಯೋಗಾಶ್ಚ ಯೇ ಚಾನ್ಯೇ ಮೋಕ್ಷಕಾಂಕ್ಷಿಣಃ ।
ಧ್ಯಾಯಂತಿ ಧ್ಯಾನಿನೋ ನಿತ್ಯಂ ಹೃದಯಸ್ಥಂ ದಿವಾಕರಮ್ ॥ ೩೦ ॥

ಸರ್ವಲಕ್ಷಣಹೀನೋಽಪಿ ಯುಕ್ತೋ ವಾ ಸರ್ವಪಾತಕೈಃ ।
ಸರ್ವಮಂತರತೇ ಪಾಪಂ ದೇವಮರ್ಕಂ ಸಮಾಶ್ರಿತಃ ॥ ೩೧ ॥

---

೨೮. ಇದನ್ನು ಕೇಳಿ ಬ್ರಹ್ಮನು, "ಪ್ರಭುವೇ, ನಿನ್ನ ಅತ್ಯಂತ ತೇಜೋಮಯವಾದ ರೂಪವನ್ನು ಯಾರೂ ಸಹಿಸಲಾರರು. ಆದುದರಿಂದ ಜಗತ್ಕಲ್ಯಾಣಕ್ಕೋಸ್ಕರ ನಿನ್ನ ತೇಜಸ್ಸನ್ನು ಜನಗಳು ಸಹಿಸಲು ಸಾಧ್ಯವಾಗುವಂತೆ ಅನುಗ್ರಹಿಸೆಂದು" ಕೇಳಿದನು.

೨೯. ಪರಮಾತ್ಮನು ಹಾಗೆಯೇ ಆಗಲೆಂದು ಹೇಳಿ, ಅನಂತರ ಸರ್ವಸಮರ್ಥನಾದ ಭಗವಂತನು, ಲೋಕಗಳ ಕಾರ್ಯಸಿದ್ಧಿಗೋಸ್ಕರ, ಬಿಸಿಲು, ಮಳೆ, ಮತ್ತು ಹಿಮಗಳನ್ನುಂಟುಮಾಡುವವನಾದನು.

೩೦. ಆದುದರಿಂದಲೇ, ಸಾಂಖ್ಯರೂ, ಯೋಗಿಗಳೂ, ಬೇರೇ ಕೆಲವು ಮಂದಿ ಮೋಕ್ಷಾಪೇಕ್ಷಿಗಳೂ ಮತ್ತೂ ಜ್ಞಾನಿಗಳೂ ಸಹ ಅನವರತವೂ ಮನಸ್ಸಿನಲ್ಲಿರುವ ಸೂರ್ಯಭಗವಂತನನ್ನು ಧ್ಯಾನಮಾಡುತ್ತಾರೆ.

೩೧. ಸೂರ್ಯದೇವನನ್ನು ಮರೆ ಹೊಕ್ಕವನು ಅಥವಾ ಸೇವಿಸುವವನು ಸಕಲ ಲಕ್ಷಣಗಳಿಂದ ಬಿಡಲ್ಪಟ್ಟಿದ್ದಾಗ್ಯೂ, ಮತ್ತೂ ಸಕಲ ಪಾಪಗಳಿಂದ ಕೂಡಿದವನಾದರೂ, ಅವನು ಎಲ್ಲಾ ಪಾಪಗಳನ್ನು ಸೂರ್ಯಪರಮಾತ್ಮನ ದಯೆಯಿಂದ ಕಳೆದುಕೊಳ್ಳುತ್ತಾನೆ.

**ಅಗ್ನಿಹೋತ್ರಂ ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ।**
**ಭಾನೋರ್ಭಕ್ತೇರ್ನಮಸ್ಕಾರಾತ್ಕಲಾಂ ನಾರ್ಹಂತಿ ಷೋಡಶೀಂ ॥ ೩೨ ॥**

**ತೀರ್ಥಾನಾಂ ಪರಮಂ ತೀರ್ಥಂ ಮಂಗಲಾನಾಂ ಚ ಮಂಗಲಂ ।**
**ಪವಿತ್ರಾಣಾಂ ಪವಿತ್ರಂ ಚ ಪ್ರಪದ್ಯೇಽಹಂ ದಿವಾಕರಮ್ ॥ ೩೩ ॥**

**ಬ್ರಹ್ಮಾದ್ಯೈಃ ಸಂಸ್ತುತಂ ದೇವೈಃ ಯೇ ನಮಸ್ಯಂತಿ ಭಾಸ್ಕರಮ್ ।**
**ಸರ್ವಕಿಲ್ಬಿಷಮುಕ್ತಾಸ್ತೇ ಸೂರ್ಯಲೋಕಂ ವ್ರಜಂತಿ ತೇ ॥ ೩೪ ॥**

**ಇತಿ ಶ್ರೀ ಸಾಂಬಪುರಾಣೇ ಬ್ರಹ್ಮಭಾಷಿತ ಸ್ತವೋನಾಮ**
**ಚತುರ್ದಶೋಽಧ್ಯಾಯಃ.**

---

೩೨. ಅಗ್ನಿಹೋತ್ರಗಳೂ, ವೇದಗಳೂ, ಬಹುದಕ್ಷಿಣೆಗಳಿಂದ ಕೂಡಿದ ಯಜ್ಞಗಳೂ ಸಹ ಸುಕೃತಪ್ರಾಪ್ತಿಯಲ್ಲಿ ಸೂರ್ಯನಭಕ್ತಿಪೂರ್ವಕ ನಮಸ್ಕಾರಗಳ ಹದಿನಾರನೆಯ ಒಂದು ಅಂಶವನ್ನೂ ಸಹ ಹೋಲಲಾರವು.

೩೩. ಸಕಲತೀರ್ಥಗಳಿಗಿಂತಲೂ ಉತ್ಕೃಷ್ಟವಾದ ತೀರ್ಥವೆನಿಸಿದುದೂ, ಮಂಗಳಕಾರ್ಯಗಳಲ್ಲೆಲ್ಲಾ ಅತ್ಯಂತ ಮಂಗಳ ಸ್ವರೂಪವೂ, ಪವಿತ್ರವಾದ ಪದಾರ್ಥಗಳಲ್ಲೆಲ್ಲಾ ಅತ್ಯಂತ ಪವಿತ್ರವೂ ಆದ ಸೂರ್ಯನನ್ನು ನಾನು ಹೊಂದಿ ಭಜಿಸುವೆನೆಂದು, ನಾರದನು ಕೃಷ್ಣಾತ್ಮಜನಾದ ಸಾಂಬನಿಗೆ ತಿಳಿಸಿದನು.

೩೪. ನಾರದನು, ಎಲೈ ಸಾಂಬನೇ, ಯಾರು ಬ್ರಹ್ಮವಿಷ್ಣುಮಹೇಶ್ವರರೇ ಮೊದಲಾದ ದೇವತೆಗಳಿಂದಲೂ ಸಹ ಸ್ತೋತ್ರ ಮಾಡಲ್ಪಟ್ಟನೋ, ಅಂತಹ ಸೂರ್ಯಭಗವಂತನನ್ನು, ಯಾವಾಗಲೂ ಯಾರು ನಮಸ್ಕಾರಮಾಡುವರೋ ಅಂತಹವರು ಸಕಲಪಾಪಗಳಿಂದಲೂ ಕೂಡ ಬಿಡಲ್ಪಟ್ಟವರಾಗಿ ಕೊನೆಯಲ್ಲಿ ಸೂರ್ಯಲೋಕವನ್ನು ಸೇರುವರು.

ಇಲ್ಲಿಗೆ ಸಾಂಬಪುರಾಣದಲ್ಲಿನ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚದಶೋಽಧ್ಯಾಯಃ



॥ ಸಾಂಬ ಉವಾಚ ॥

ಶರೀರಲಿಖನಂ ಭಾನೋಃ ಕಥಂ ನ್ವೈ ಕತಿ ವ್ರೋದಿತಃ ।
ದೇವೈರ್ವಾ ಋಷಿಭಿರ್ವಾಪಿ ತನ್ಮಮಾಖ್ಯಾತುಮರ್ಹಸಿ ॥ ೧ ॥

॥ ನಾರದ ಉವಾಚ ॥

ಬ್ರಹ್ಮಲೋಕೇ ಸುಖಾಸೀನಂ ಬ್ರಹ್ಮಾಣಂ ಸಸುರಾಸುರಂ ।
ಋಷಯಶ್ಚೋಪಸಂಗಮ್ಯ ಚೇದಮೂಚುಃ ಸಮಾಹಿತಾಃ ॥ ೨ ॥

---

## ಹದಿನೈದನೆಯ ಅಧ್ಯಾಯ.

೧. ಸಾಂಬನು, ನಾರದರನ್ನು ಕುರಿತು, "ಮಹರ್ಷಿಯೇ, ಸೂರ್ಯನ ರೂಪಪರಿವರ್ತನದ ವಿಷಯದಲ್ಲಿ, ದೇವತೆಗಳೂ ಅಥವಾ ಋಷಿಗಳು ಯಾವ ರೀತಿಯಲ್ಲಿ ಎಷ್ಟೆಷ್ಟು ಬಗೆಯಿಂದ ನಡೆದು ಕೊಂಡರೆಂಬುದನ್ನು, ನನಗೆ, ಹೇಳಲು ನೀನೇ ಸಮರ್ಥನಾಗಿದ್ದೀಯೆ ; ಆದುದರಿಂದ ದಯೆಯಿಟ್ಟು ತಿಳಿಸಬೇಕು" ಎಂದು ಬೇಡಿಕೊಂಡನು.

೨. ಆಗ ನಾರದನು, ಸಾಂಬನನ್ನು ಕುರಿತು, "ಅಯ್ಯಾ, ಸಾಂಬನೆ, ಹಿಂದೆ ಬ್ರಹ್ಮಲೋಕದಲ್ಲಿ, ದೇವತೆಗಳು ಮತ್ತೂ ರಾಕ್ಷಸರೊಡನೆ ಬ್ರಹ್ಮನು ಸುಖವಾಗಿ ಕುಳಿತಿರುವಾಗ ಅವನ ಸಮೀಪಕ್ಕೆ ಸಕಲ ಋಷಿಗಳು ತೆರಳಿ, ಸಾವಧಾನ ಮನಸ್ಸಿನಿಂದ, ಆ ಬ್ರಹ್ಮನನ್ನು ಕುರಿತು ಹೀಗೆ ಪ್ರಾರ್ಥಿಸಿದರು.

ಭಗವನ್ ಅದಿತೇಃ ಪುತ್ರೋ ಯ ಏಷ ದಿವಿ ರಾಜತೇ ।
ಮಾರ್ತಂಡ ಇತಿ ವಿಖ್ಯಾತಸ್ತಿಗ್ಮತೇಜಾ ಮಹಾತಪಾಃ ॥ ೩ ॥

ಅಸ್ಯ ತೇಜೋಭಿರಖಿಲಂ ಜಗತ್ಸ್ಥಾವರಜಂಗಮಮ್ ।
ಕ್ಲಿಶ್ಯಮಾನಮನಾಕ್ರಂದಮುಪೇಕ್ಷಸಿ ಕಥಂ ಪ್ರಭೋ ॥ ೪ ॥

ವಯಮಪ್ಯಾಹಿತಾತಂಕಾಸ್ತೇಜಸಾ ಸಂಪ್ರಮೋಹಿತಾಃ ।
ದಿವಿ ಭುವ್ಯಂತರಿಕ್ಷೇ ಚ ಶರ್ಮ ನೋಪಲಭಾಮಹೇ । ॥ ೫ ॥

ಏವಮುಕ್ತಸ್ತು ಭಗವಾನ್ ಉವಾಚ ಕಮಲಾಸನಃ ।
ತಮೇವ ಶರಣಂ ದೇವಂ ಗಚ್ಛಾಮಃ ಸಹಿತಾ ವಯಮ್ ॥ ೬ ॥

ತತಸ್ತಮುದಯೋದಗ್ರಂ ಶೈಲರಾಜಾವತಂಸಕಂ ।
ಸಪ್ರಜಾಪತಯಃ ಸರ್ವೇ ಸಂಸ್ತೋತುಮುಪಚಕ್ರಮುಃ ॥ ೭ ॥

---

೩-೪. ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಸ್ವಾಮಿಯೇ, ಅಂತರಿಕ್ಷದಲ್ಲಿ ಪ್ರಕಾಶಿಸುತ್ತಾ ಮಾರ್ತಂಡನೆಂದು ಪ್ರಸಿದ್ಧಿಪಡೆದು, ತೀಕ್ಷ್ಣಕಿರಣಗಳುಳ್ಳವನೂ, ಮಹಾತೇಜಸ್ವಿಯೂ ಆದ ಈ ಅದಿತಿಯಮಗನ ತೇಜಸ್ಸಿನಿಂದ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವು, ದುಃಖಗೊಂಡು, ಬಳಲಿ, ಗೋಳಿಡುತ್ತಿದೆ· ಪ್ರಭುವೇ, ಹೀಗಿದ್ದರೂ ನೀನು ಏಕೆ ಉದಾಸೀನನಾಗಿರುವೆಯೋ ತಿಳಿಯದು.

೫. ನಾವೂ ಆತಂಕಗೊಂಡು ಇವನ ತೇಜಸ್ಸಿನಿಂದ ಮೂರ್ಛೆಗೊಂಡವರಾಗಿ, ಸ್ವರ್ಗ, ಭೂಮಿ ಮತ್ತು ಅಂತರಿಕ್ಷಗಳಲ್ಲಿಯೂ ಶಾಂತಿಯನ್ನು ಪಡೆಯಲಾರದೆ, ದುಃಖಪಡುತ್ತಿರುವೆವು.

೬. ಋಷಿಗಳು ಈರೀತಿ ಹೇಳಿದುದನ್ನು ಕೇಳಿ ಪದ್ಮವನ್ನೇ ಆಸನವಾಗುಳ್ಳ ಬ್ರಹ್ಮನು, ಋಷಿಗಳನ್ನು ಕುರಿತು, ನಾವೆಲ್ಲರೂ ಒಟ್ಟುಗೂಡಿ ಹೋಗಿ ಆ ಮಾರ್ತಾಂಡನನ್ನೇ ಮೊರೆಹೋಗೋಣ ಬನ್ನಿ, ಎಂದು ಹೇಳಿದನು.

೭. ಅನಂತರ ಬ್ರಹ್ಮನೊಡಗೂಡಿದ ಆ ಋಷಿಗಳೆಲ್ಲರೂ, ಉದಯಪರ್ವತದ ತುದಿಯಲ್ಲಿ, ಪರ್ವತರಾಜನ ಶಿರೋಭೂಷಣದಂತೆ ಕಾಣುತ್ತಿರುವ [ ಅಂದರೆ ಉದಯಿಸುತ್ತಿರುವ ] ಆ ಸೂರ್ಯಪರಮಾತ್ಮನನ್ನು, ಸ್ತೋತ್ರಮಾಡಲುಪಕ್ರಮಿಸಿದರು.

॥ ಬ್ರಹ್ಮೋವಾಚ ॥

ನಮೋ ನಮಃ ಸುರವರತಿಗ್ಮತೇಜಸೇ ।
ನಮೋ ನಮಃ ಪ್ರಣತಹಿತಾನುಕಂಪಿನೇ ॥
ನಮೋ ನಮಸ್ತ್ರಿಭುವನಭೂತಭಾವಿನೇ ।
ಕ್ರತುಕ್ರಿಯಾಶುಭಫಲಸಂಪ್ರದಾಯಿನೇ ॥ ೮ ॥

ಶುಭಾಽಶುಭಪ್ರವಿಚಯಕರ್ಮಸಾಕ್ಷಿಣೇ ।
ಸಹಸ್ರಸಂದೀಧಿತಯೇ ನಮೋ ನಮಃ ॥
ಪ್ರಶಸ್ತಸಪ್ತಾಶ್ವಯುತಾಂತಪಕ್ಷಿಣೇ ।
ಧ್ರುವೈಕರಶ್ಮಿಗ್ರಥಿತಾಯ ತೇ ನಮಃ ॥ ೯ ॥

ಸವಾಲಖಿಲ್ಯಾಪ್ಸರಕಿಂನರೋರಗೈಃ ।
ಸಸಿದ್ಧಗಂಧರ್ವಪಿಶಾಚಗುಹ್ಯಕೈಃ ॥
ಸಯಕ್ಷರಕ್ಷೋಗಣಚಾರಣೋತ್ತಮೈಃ ।
ನಮೋ ನಮಃ ಸತ್ಕೃತವಂದಿತಾಯ ತೇ ॥ ೧೦ ॥

---

೮. ಮೊದಲು ಬ್ರಹ್ಮನು ಹೀಗೆ ಸ್ತೋತ್ರಮಾಡಿದನು:— "ಎಲೈ, ದೇವಶ್ರೇಷ್ಠನೇ, ತೀಕ್ಷ್ಣವಾದ ತೇಜಸ್ಸುಳ್ಳ ನಿನಗೆ ನಮಸ್ಕಾರ. ತನ್ನನ್ನು ನಮಸ್ಕರಿಸುವವರಿಗೆ, ಹಿತವನ್ನೂ ಮತ್ತೂ ದಯೆಯನ್ನೂ ತೋರುವ ನಿನಗೆ ನಮಸ್ಕಾರ. ಮೂರುಲೋಕಗಳ ಚರಾಚರಾತ್ಮಕವಾದ ಭೂತಗಳನ್ನೂ ರಕ್ಷಿಸುವ ನಿನಗೆ ನಮಸ್ಕಾರ. ಯಾಗಕರ್ಮಗಳಿಗೆ ಅಪೂರ್ವರೂಪವಾದ ಶುಭಫಲವನ್ನು ಕರುಣಿಸುವ ದೇವನೇ, ನಿನಗೆ ವಂದನೆ.

೯. ದೇವದೇವನೇ, ಶುಭಾಽಶುಭ ವಿಭಾಗ ರೂಪವಾದ ಪುಣ್ಯಾಪಾಪ ಕರ್ಮಗಳಿಗೆ ಸಾಕ್ಷಿಯಾಗಿರುವವನೂ, ಸಹಸ್ರ ಕಿರಣಗಳುಳ್ಳವನೂ ಆದ ನಿನಗೆ ನಮಸ್ಕಾರ. ಶ್ರೇಷ್ಠವಾದ ಏಳು ಕುದುರೆಗಳಿಂದ ಕೂಡಿದವನೂ, ಎಲ್ಲಾಪ್ರಾಣಿಗಳ ಅಂತಃಕರಣದಲ್ಲಿಯೂ ಪಕ್ಷಿಯಂತೆ ಅಡಗಿರುವವನೂ ಮತ್ತೂ ಶಾಶ್ವತವಾದ ಕಿರಣಗಳಿಂದ ಕೂಡಿದವನೂ ಆದ ನಿನಗೆ ನಮಸ್ಕಾರ.

೧೦. ವಾಲಖಿಲ್ಯರೂ, ರಂಭಾದ್ಯಪ್ಸರಸ್ತ್ರೀಯರೂ, ಕಿಂನರ, ನಾಗಗಳೂ, ಸಿದ್ಧರೂ, ಗಂಧರ್ವರೂ, ಪಿಶಾಚಿಗಳೂ, ಗುಹ್ಯರೂ, ಯಕ್ಷಕರೂ, ರಾಕ್ಷಸಗಣಗಳೂ, ಮತ್ತೂ ಶ್ರೇಷ್ಠರಾದ ಚಾರಣರೂ ಸಹ, ನಿನ್ನನ್ನು ಸದಾ ಸತ್ಕರಿಸುತ್ತಾ ನಮಸ್ಕಾರ ಮಾಡುತ್ತಿರುವರು. ಇಂತಹ ದೇವನಿಗೆ ನಮಸ್ಕಾರ.

ಯದಾ ರಸಾಗ್ ಸಂಸೃಜಸೇ ಶರೀರಿಣಾಂ ।
ಗಭಸ್ತಿಭಿರ್ಘರ್ಮಹಿಮಾಂಬುಸರ್ಜನೈಃ ॥
ಜಗಚ್ಚ ಸಂಶೋಷಯಸೇ ಸಸಾಗರಂ ।
ನಮಸ್ಸದಾಽಽಮ್ನಾಯ ಸುತಾಯ ಭಾಸ್ವತೇ ॥ ೧೧ ॥

ಜಡಾಂಧಮೂಕಾನ್ ಬಧಿರಾನ್ಸಕುಬ್ಜಾನ್ ।
ಸದದ್ರುಕುಷ್ಠಾನ್ ಕ್ರಿಮಿಭಿಃ ಪ್ರವದ್ವ್ರಣಾನ್ ॥
ಕರೋಷಿ ತಾನೇವ ಪುನರ್ನವಾನ್ಯದಾ ।
ತದಾ ಮಹಾಕಾರುಣಿಕಾಯ ತೇ ನಮಃ ॥ ೧೨ ॥

ಯದೌದರಂ ಜ್ಯೋತಿರತಿಗ್ಮಕಂ ಸ್ಥಿತಂ ।
ಯದಪ್ಸು ತೇಜೋ ಯದಪೀಹ ಚಕ್ಷುಷಿ ॥
ಅಗ್ನೌ ಯದುಷ್ಣಂ ಭಗಣೇ ಯದಾ ಹಿತಂ ।
ತವೈವ ತದ್ರೂಪಮನೇಕಧಾ ಸ್ಥಿತಂ ॥ ೧೩ ॥

---

೧೧. ಲೋಕದಲ್ಲಿ ಪ್ರಾಣಿಗಳ ಉಪಯೋಗಕ್ಕಾಗಿ ಮೊದಲು ನೀರನ್ನು ಸೃಷ್ಟಿಸಿರುವೆ. ಅನಂತರ, ಬಿಸಿಲು, ಹಿಮ ಮತ್ತು ಮಳೆ ಇವುಗಳನ್ನು ಸುರಿಸುವೆ. ಕಿರಣಗಳಿಂದ, ಸಪ್ತಸಮುದ್ರ ಸಮೇತವಾದ ಭೂಮಂಡಲವನ್ನೇ ನೀನು ಒಣಗಿಸಿ ಬಿಡುವೆ. ತೇಜಸ್ವಿಯೂ, ಯಾವಾಗಲೂ ವೇದಗಳಿಂದ ಸ್ತೋತ್ರಮಾಡಲ್ಪಡುತ್ತಿರುವವನೂ ಆದ ದೇವೋತ್ತಮನೇ, ನಿನ್ನನ್ನು ವಂದಿಸುವೆನು.

೧೨. ಸೋಮಾರಿಗಳೂ, ಕುರುಡರೂ, ಮೂಗರೂ, ಕಿವುಡರೂ, ಕುಜ್ಜರೂ, ( ಕುಳ್ಳರೂ ), ಮೈಯೆಲ್ಲಾ ಒಡೆದು ಬಿರುದು, ಗೋಳಿಡುತ್ತಿರುವವರೂ, ಶ್ವೇತ ರೋಗವುಳ್ಳವರೂ, ಹುಣ್ಣಾಗಿ ಮೈಯೆಲ್ಲಾ ಹುಳುಗಳಿಂದ ಕೂಡಿದವರೂ, ಸಹ ನಿನ್ನಕೃಪೆಯಿಂದ ಅಂತಹ ದೊಡ್ಡ ರೋಗಗಳನ್ನೆಲ್ಲಾ ಕಳೆದುಕೊಂಡು, ರೋಗ ರಹಿತರಾಗಿ ಹೊಸಶರೀರವನ್ನೇ ಹೊಂದುವರು. ಮಹಾದಯಾಶಾಲಿಯಾದ ಸೂರ್ಯಭಗವಂತನೇ, ನಿನಗೆ ಪ್ರಣಾಮಮಾಡುವೆನು.

೧೩. ಎಲೈ ಪರಮಾತ್ಮನೆ, ನೀನು ತೇಜಃಸ್ವರೂಪನು. ಆ ನಿನ್ನ ರೂಪವೇ ಪ್ರತಿಯೊಂದು ಪ್ರಾಣಿಗಳ ಹೊಟ್ಟೆಯಲ್ಲಿಯೂ ತೀಕ್ಷ್ಣತೆಯನ್ನು ಬಿಟ್ಟು ಶಾಂತತೆಯಿಂದಿರುವುದು. ನೀರಲ್ಲಿಯೂ, ಕಣ್ಣುಗಳಲ್ಲಿಯೂ ಇರುವ ತೇಜಸ್ಸೂ, ನಿನ್ನ ಸ್ವರೂಪವೇ ; ಅಗ್ನಿಯಲ್ಲಿರುವ ಸುಡುವ ಸ್ವಭಾವವೂ, ನಕ್ಷತ್ರಸಮೂಹದಲ್ಲಿರುವ ಪ್ರಕಾಶಿಸುವ ಶಕ್ತಿಯೂ ಸಹ ನಿನ್ನದೇ ಆಗಿರುವುದು. ಹೀಗೆ ಅನೇಕ ರೂಪುಗಳಿಂದ ತೋರುತ್ತಿರುವ ದೇವದೇವನೇ, ನಿನಗೆ ನಮಸ್ಕಾರ.

ಸುರದ್ವಿಷಃ ಸಾಗರತೋಯವಾಸಿನಃ ।
ಪ್ರಚಂಡಪಾಶಾಸಿಪರಶ್ವಥಾಯುಧಾಃ ॥
ಸಮುತ್ಥಿತಾ ಯೇ ಭುವಿ ಪಾಪಚೇತಸಃ ।
ಪ್ರಯಾಂತಿ ನಾಶಂ ತವ ದೇವ ದರ್ಶನಾತ್ ॥ ೧೪ ॥

ಸ್ತುತಃ ಸ ಭಗವಾನೇವಂ ಪ್ರಜಾಪತಿಮುಖೈಃ ಸುರೈಃ ।
ಮತ್ವಾ ತೇಷಾಮಭಿಪ್ರಾಯಮುವಾಚ ಭಗವಾನಿದಂ ॥ ೧೫ ॥

ಹಿತಂ ಚೋಪಹಿತಂ ನಿತ್ಯಂ ಗಾಯತ್ರಂ ಯದ್ವಚಃ ಪರಂ ।
ತದ್ವೈ ಬ್ರೂತ ಸುರಾಃ ಕ್ಷಿಪ್ರಂ ಕಿಂ ಮಯಾ ಕ್ರಿಯತಾಂ ಸ್ವಯಂ ॥ ೧೬ ॥

ಲಬ್ಧಾನುಜ್ಞಾಸ್ತತಸ್ತೇತು ಸುರಾಃ ಸಂಹೃಷ್ಟಮಾನಸಾಃ ।

---

೧೪. ದೇವತೆಗಳ ಶತ್ರುಗಳಾದ ರಾಕ್ಷಸರೂ, ಸಾಗರ ಜಲದಲ್ಲಿ ಅಡಗಿ ವಾಸ ಮಾಡುವ ನೀರು ಮನುಷ್ಯರೂ, ಕ್ರೂರವಾದ, ಪಾಶಾಯುಧ, ಕತ್ತಿ, ಪರಶ್ವಥಗಳೆಂಬ ಆಯುಧಗಳನ್ನು ಹಿಡಿದಿರುವವರೂ, ಮತ್ತೂ ಭೂಲೋಕದಲ್ಲಿ ಅವತರಿಸಿ ಮಹಾ ಪಾಪಕಾರ್ಯಗಳನ್ನೆ ಸಗುತ್ತಿರುವವರೂ ಸಹ, ಎಲೈದೇವನೇ, ನಿನ್ನ ದರ್ಶನ ಮಾತ್ರದಿಂದಲೇ ನಾಶಹೊಂದುವರು.

೧೫-೧೬. ಬ್ರಹ್ಮನೇ ಮೊದಲಾದ ದೇವತೆಗಳು ಈ ರೀತಿ ಭಗವಂತನಾದ ಸೂರ್ಯನನ್ನು ಸ್ತೋತ್ರಮಾಡಲು, ಪರಮಾತ್ಮನು ಇವರ ಮನಸ್ಸಿನ ಅಭಿ ಪ್ರಾಯವನ್ನು ತಿಳಿದು, ಎಲೈ ದೇವತೆಗಳಿರಾ, ನಿಮ್ಮೆಲ್ಲರಿಗೂ ಯಾವಾಗಲೂ ಹಿತವನ್ನುಂಟುಮಾಡುವ ಶ್ರೇಷ್ಠವಾದ ಗಾಯತ್ರೀಮಂತ್ರವು ಸನ್ನಿಹಿತವಾಗಿದೆ. ಹಾಗಿದ್ದರೂ, ಈಗ ನನ್ನಿಂದ ನಿಮಗೇನಾಗಬೇಕೆಂಬುದನ್ನು ನೀವು ಜಾಗ್ರತೆಯಾಗಿ ನನಗೆ, ತಿಳಿಸಿರಿ ಎಂದು ಹೇಳಿದನು.

೧೭. ಒಡನೆಯೇ ಸೂರ್ಯಭಗವಂತನಿಂದ, ಅನುಜ್ಞೆಪಡೆದು, ಸಂತೋಷ ಗೊಂಡಮನಸ್ಸುಳ್ಳವರಾಗಿ, ಆ ದೇವತೆಗಳು, ಮನಸ್ಸು, ವಾಕ್, ಕರ್ಮ ಈ ಮೂರುವಿಧವಾದ ಶುದ್ಧಿಯಿಂದಲೂ, ವಿಶ್ವಕರ್ಮನನ್ನು ಪೂಜಿಸಿದರು. [ಪೂಜೆ ಯಲ್ಲಿ ಮೂರು ವಿಧ. ಮಾನಸಿಕಪೂಜೆ, ವಾಚಿಕಪೂಜೆ, ಕಾಯಿಕಪೂಜೆ

ತ್ವಷ್ಟಾರಂ ಪೂಜಯಾಮಾಸುಃ ಮನೋವಾಕ್ಕಾಯಕರ್ಮಭಿಃ ॥ ೧೭ ॥
ತತಸ್ತಂ ತೇಜಸೋ ರಾಶಿಂ ಸರ್ವಲೋಕವಿಧಾನವಿತ್ ।
ಭ್ರಮಿಮಾರೋಪಯಾಮಾಸ ವಿಶ್ವಕರ್ಮಾ ವಿಭಾವಸುಂ ॥ ೧೮ ॥
ಅಮೃತೇ ನಾಭಿಷಿಕ್ತಸ್ಯ ಸ್ತೂಯಮಾನಸ್ಯ ಚಾರಣೈಃ ।
ತೇಜಸಃ ಶಾತನಾಂ ಚಕ್ರೇ ವಿಶ್ವಕರ್ಮಾ ಶನೈಃ ಶನೈಃ ॥ ೧೯ ॥
ಆಜಾನುಲಿಖಿತಸ್ತ್ವಾಸೌ ಸುರಾಸುರಮಹೋರಗೈಃ ।
ನಾಭ್ಯನಂದತ್ಸ ಲಿಖನಂ ತತಸ್ತೇನಾವತಾರಿತಃ ॥ ೨೦ ॥

---

ಎಂದು. ಕೇವಲ ಮನೋಮಾತ್ರದಿಂದಲೇ ಧ್ಯಾನಾದಿಗಳಿಂದ ಮಾಡುವಪೂಜೆಗೆ ಮಾನಸಿಕಪೂಜೆಯೆಂದು ಹೆಸರು. ತದೇಕ ಮನಸ್ಕನಾಗಿ ಬಾಯಿ ಯಲ್ಲಿಮಂತ್ರೋಚ್ಚಾರಣೆಯಿಂದ ಮಾಡುವ ಆರಾಧನೆಗೆ, ವಾಚಿಕಪೂಜಾ ಎಂದೂ, ಕಾಯಿಕಾಪೂಜೆಯೆಂದರೆ ವಾಚಿಕ ಮತ್ತು ಮಾನಸಿಕಗಳ ಜೊತೆಗೆ, ನಮಸ್ಕಾರವೇ ಮೊದಲಾದಶರೀರ ಸಹಾಯದಿಂದ ಮಾಡುವ ಆರಾಧನೆಯೆಂದೂ ಹೆಸರು. ಒಟ್ಟಿನಲ್ಲಿ ಮಾನಸಿಕಪೂಜೆಯೆಂದರೆ ಜಪಾದಿಗಳೆನ್ನಬಹುದು ; ವಾಚಿಕವೆಂದರೆ ಸ್ತೋತ್ರ ಪಾರಾಯಣವೆಂದು ತಿಳಿಯಬೇಕು. ಕಾಯಿಕವೆಂದರೆ ಸಾಮಾನ್ಯವಾಗಿ ಎಲ್ಲರೂ ಅನುಷ್ಠಾನಮಾಡುವ ಪ್ರಾಣಾಯಾಮ, ನಮಸ್ಕಾರ, ಉತ್ಥಾನ, ಪ್ರದಕ್ಷಿಣ, ಇವುಗಳಿಂದ ಕೂಡಿದ ಪೂಜೆಯೆಂದು ಭಾವಿಸಬೇಕು.)

೧೮. ಸಕಲ ಲೋಕಗಳನ್ನೂ ನಿರ್ಮಾಣಮಾಡುವ ಸಾಮರ್ಥ್ಯವುಳ್ಳ ವಿಶ್ವಕರ್ಮಬ್ರಹ್ಮನು, ತೇಜೋರಾಶಿಯಾದ ಆ ಸೂರ್ಯಭಗವಂತನನ್ನು ಭ್ರಮಿಯಲ್ಲಿ [ತಿರುಗುಸ ಚಕ್ರ] ಏರಿಸಿದನು.

೧೯. ವಿಶ್ವಕರ್ಮನು, ಸೂರ್ಯನನ್ನು, ಭ್ರಮಿಯಲ್ಲಿರಿಸಿದ ಮೇಲೆ, ಅಮೃತದಿಂದ ಅವನಿಗೆ ಅಭಿಷೇಕಮಾಡಿದನು. ಚಾರಣರೆಂಬ ದೇವತೆಗಳು, ಸೂರ್ಯಭಗವಂತನನ್ನು ಹೊಗಳುತ್ತಿದ್ದರು. ಈ ಸಮಯದಲ್ಲಿ ವಿಶ್ವಕರ್ಮನು ಮೆಲ್ಲಮೆಲ್ಲನೆ ಸೂರ್ಯನ ತೇಜಸ್ಸನ್ನು ಕಡೆದನು.

೨೦. ದೇವತೆಗಳೂ, ರಾಕ್ಷಸರೂ, ಮತ್ತು ಪನ್ನಗ ಗಣಗಳೂ ಸಹ ಮೊಳ ಕಾಲು ಪರ್ಯಂತ ಸೂರ್ಯನನ್ನು ಕಡೆದರು. ಇದರಿಂದ ಸೂರ್ಯನಿಗೆ ಸಂತೋಷ ವಾಗಲಿಲ್ಲ. ಆದುದರಿಂದ ಕೊನೆಗೆ ವಿಶ್ವಕರ್ಮನು, ಆದಿತ್ಯನನ್ನು, ಭ್ರಮಿಯಿಂದ ಇಳಿಸಿದನು.

ತತಃಪ್ರಭೃತಿ ದೇವಸ್ಯ ಚರಣೌ ನಿತ್ಯಸಂವೃತೌ ।
ಶಾಪಯದ್ ಹೃದಯಂ ಚೈವ ಯುಕ್ತತೇಜಾಃಭವತ್ತತಃ ॥ ೨೧ ॥

ಶಾತಿತಂ ಚಾಸ್ಯ ಯತ್ತೇಜಶ್ಚಕ್ರಂ ಚೈವ ವಿನಿರ್ಮಿತಂ ।
ತೇನ ವಿಷ್ಣುರ್ಜಘಾನೋಗ್ರಾನ್ ದಾನವಾನತಿತೇಜಸಃ ॥ ೨೨ ॥

ಶೂಲಂ ಶಕ್ತಿಂ ಗದಾಂ ಚಕ್ರಂ ಶರಾಸನಪರಶ್ವಧಾನ್ ।
ದೈವತೇಭ್ಯೋ ದದೌ ಕೃತ್ವಾ ವಿಶ್ವಕರ್ಮಾ ಮಹಾಮತಿಃ ॥ ೨೩ ॥

ಬ್ರಹ್ಮವಕ್ತ್ರೋದ್ಭವಂ ಸ್ತೋತ್ರಂ ಸಂಧ್ಯಯೋರುಭಯೋರ್ಜಪನ್ ।
ಕುಲಂ ಪುನಾತಿ ಪುರುಷೋ ವ್ಯಾಧಿಭಿರ್ನ ಚ ಪೀಡ್ಯತೇ ॥ ೨೪ ॥

---

೨೧, ಅದು ಮೊದಲುಗೊಂಡು ಸೂರ್ಯದೇವನ ಕಾಲುಗಳು ಯಾವಾಗಲೂ ಮರೆಯಾಗಿರುವುವು. ಹೃದಯುವನ್ನೂ ಸಹ ವಿಶ್ವಕರ್ಮನು ಕಡೆದು ಸರಿ ಮಾಡಿದುದರಿಂದ, ಸಾಕಾದಷ್ಟು ತೇಜಸ್ಸು ಮಾತ್ರ ಸೂರ್ಯನಿಗೆ ಉಳಿಯಿತು.

೨೨. ಸೂರ್ಯಪರಮಾತ್ಮನನ್ನು ಕಡೆಯುವುದರಿಂದ ಉಂಟಾದ ತೇಜಸ್ಸಿನಿಂದ ಮಹಾ ವಿಷ್ಣುವಿನ ಸುದರ್ಶನ ಚಕ್ರವು ವಿಶ್ವಕರ್ಮನಿಂದ ಉಂಟಾಯಿತು. ಇದರ ಸಹಾಯದಿಂದಲೇ ವಿಷ್ಣುವು ಮಹಾ ತೇಜಸ್ವಿಗಳೂ ಕ್ರೂರರೂ ಆದ ರಾಕ್ಷಸರನ್ನೆಲ್ಲಾ ಧ್ವಂಸಮಾಡಿದನು.

೨೩. ಅನಂತರ, ಮಹಾ ಮೇಧಾವಿಯಾದ ವಿಶ್ವಕರ್ಮನು, ಕಡೆದುಳಿದಿರುವ ಸೂರ್ಯನ ತೇಜಸ್ಸಿನಿಂದ, ತ್ರಿಶೂಲ, ಶಕ್ತ್ಯಾಯುಧ, ಗದೆ, ಚಕ್ರ, ಬಿಲ್ಲು, ಪರಶ್ವಧ ಮೊದಲಾದ ಆಯುಧಗಳನ್ನು ಮಾಡಿ ದೇವತೆಗಳಿಗೆ ಕೊಟ್ಟನು.

೨೪. ಬ್ರಹ್ಮನ ಮುಖದಿಂದ ಉಂಟಾಗಿರುವ ಈ ಸೂರ್ಯಸ್ತೋತ್ರವನ್ನು ಎರಡು ಸಂಧ್ಯಾಕಾಲಗಳಲ್ಲಿಯೂ, ಜಪಿಸಿದ, ಆ ಪುರುಷರು, ತನ್ನ ವಂಶವನ್ನೇ ಪವಿತ್ರವನ್ನಾಗಿ ಮಾಡುವರಲ್ಲದೇ ಅವರಿಗೆ ಯಾವಾಗಲೂ ರೋಗಾದಿಗಳೂ ಉಂಟಾಗುವುದಿಲ್ಲ.

ಪ್ರಜಾವಾನ್ ಸಿದ್ಧಕರ್ಮಾಚ ಜೀವೇತ್ಸಾಗ್ರಶರಚ್ಛತಂ ।
ಪುತ್ರವಾನ್ ಧನವಾಂಶ್ಚೈವ ಸರ್ವತ್ರೈವಾऽಪರಾಜಿತಃ ॥ ೨೫ ॥
ವಿಭಿನ್ನಪ್ರಾಣಸಂಘಾತಃ ಪವಿತ್ರಂ ಲೋಕಮಾಪ್ನುಯಾತ್ ॥ ೨೬ ॥

ಇತಿ ಶ್ರೀ ಸಾಂಬಪುರಾಣೇ ಬ್ರಹ್ಮಕೃತ ಸ್ತೋತ್ರಂ ನಾಮ
ಪಂಚದಶೋऽಧ್ಯಾಯಃ.

---

ಮತ್ತೂ, ಅವರು ಪೂರ್ಣ ಪರಿವಾರವುಳ್ಳವರಾಗಿಯೂ, ಕರ್ಮಸಿದ್ಧಿಹೊಂದು ವರಾಗಿಯೂ ಆಗಿ ನೂರುವರ್ಷಗಳಪರ್ಯಂತ, ಜೀವಿಸುವರು. ಅಲ್ಲದೇ ಪುತ್ರ ಸಂತಾನವನ್ನೂ, ಐಶ್ವರ್ಯ ಸಂಪತ್ತನ್ನೂ ಪಡೆದು, ಎಲ್ಲಾಕಡೆಗಳಲ್ಲಿಯೂ ಜಯ ಶೀಲರಾಗುವರು.

೨೬. ಈ ಲೋಕದ ವ್ಯಾಪಾರವು ಮುಗಿದಮೇಲೆ, ಪವಿತ್ರವಾದ ಸೂರ್ಯ ಲೋಕವನ್ನು ಹೊಂದಿ ಸುಖಿಯಾಗಿರುವರು." ಎಂದು ನಾರದನು ಸಾಂಬನಿಗೆ ಬ್ರಹ್ಮಕೃತವಾದ ಸೂರ್ಯಸ್ತೋತ್ರವನ್ನು ವಿವರಿಸಿದನು.

ಇಲ್ಲಿಗೆ ಸಾಂಬಪುರಾಣದ ಹದಿನೈದನೆಯ ಅಧ್ಯಾಯವು ಮುಗಿದುದು.

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷೋಡಶೋಽಧ್ಯಾಯಃ

---

॥ ನಾರದ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ದಂಡನಾಯಕಪಿಂಗಲೌ ।
ರಾಜ್ಞಸ್ತ್ರೋಷೌ ತಥಾ ಚಾನ್ಯಾನ್ ಪಾರ್ಶ್ವಸ್ಥಾನ್ ದಿಂಡಿನಾ ಸಹ ॥ ೧ ॥

ಬ್ರಹ್ಮಣಾ ಸಹ ಸಂಗಮ್ಯ ಪುರಾ ದೇವೈರ್ವಿಚಾರಿತಂ ।
ಏಕಃ ಕಾರುಣಿಕಃ ಸೂರ್ಯೋ ದೈತ್ಯೇಭ್ಯೋ ದಾಸ್ಯತೇ ವರಾನ್ ॥ ೨ ॥

---

## ಹದಿನಾರನೆಯ ಅಧ್ಯಾಯ.

೧. ನಾರದರು, ಸಾಂಬನನ್ನು ಕುರಿತು, " ಎಲೈ ಸಾಂಬನೇ, ಇನ್ನು ಮುಂದೆ ದಂಡನಾಯಕ, ಪಿಂಗಲ, ರಾಜ್ಞ, ತೋಷ ಎಂಬುವರ, ಮತ್ತೂ ದಂಡಿಯೊಡನೆ ಸೂರ್ಯನ ಪಾರ್ಶ್ವದಲ್ಲಿರುವವರು ಯಾರೆಂಬುದನ್ನೂ ತಿಳಿಸುವೆನು ಕೇಳು " ಎಂದು ವಿಷಯವನ್ನು ಮುಂದುವರಿಸಿದನು.

೨. ಹಿಂದೆ ಸೂರ್ಯನನ್ನು ಕಡೆಯುವ ಕಾಲದಲ್ಲಿ ರಾಕ್ಷಸರೂ ಸಹ ಬ್ರಹ್ಮನೊಡನೆ ಸೇರಿದ್ದರು. ಪರಮ ದಯಾಳುವಾದ ಸೂರ್ಯನು ಎಲ್ಲರಿಗೂ ಒಬ್ಬನೇ ಆದುದರಿಂದ ತನ್ನ ಭಕ್ತರಾದ ರಾಕ್ಷಸರಿಗೂ ಅವನು ವರವನ್ನು ಕೊಡುವನು.

ತೇ ತು ಲಬ್ಧವರಾ ಭೂತ್ವಾ ಬಾಧಯಂತೇ ದಿವೌಕಸಃ ।
ತಸ್ಮಾತ್ತೇಷಾಂ ವಿಘಾತಾರ್ಥಂ ಭವಾಮಃ ಪ್ರಣತಾ ವಯಮ್ ॥ ೩ ॥

ಅಸ್ಮಾಭಿಃ ಪ್ರತಿರುದ್ಧಾಸ್ತೇ ನ ದ್ರಕ್ಷ್ಯಂತಿ ದಿವಾಕರಂ ।
ಸಂಮಂತ್ರ್ಯೈವಂ ತತಸ್ತ್ವಿಂದ್ರೋ ವಾಮಪಾರ್ಶ್ವೇ ರವೇಃ ಸ್ಥಿತಃ ॥ ೪ ॥

ದಂಡನಾಯಕಸಂಜ್ಞಸ್ತು ಸರ್ವಲೋಕಸ್ಯ ಚ ಪ್ರಭುಃ ।
ಉಕ್ತಶ್ಚ ಸ ತದಾಽರ್ಕೇಣ ತ್ವಂ ಪ್ರಜಾದಂಡನಾಯಕಃ ॥ ೫ ॥

ದಂಡನೀತಿಕರೋ ಯಸ್ಮಾತ್ ತಸ್ಮಾತ್ ತ್ವಂ ದಂಡನಾಯಕಃ ।
ಲಿಖತೇ ಯಃ ಪ್ರಜಾನಾಂ ತು ಸುಕೃತಂ ಯಚ್ಚ ದುಷ್ಕೃತಂ ॥ ೬ ॥

---

೩. ಅವರು ಸೂರ್ಯನ ವರದ ಮಹಿಮೆಯಿಂದ ಕೊಬ್ಬಿ ದೇವತೆಗಳನ್ನು ಪೀಡಿಸುವರು. ಆ ರಾಕ್ಷಸರನ್ನು ನಾಶಪಡಿಸುವುದಕ್ಕೋಸ್ಕರ ನಾವೆಲ್ಲರೂ ಆ ಸೂರ್ಯಪರಮಾತ್ಮನನ್ನೇ ನಮಸ್ಕರಿಸುತ್ತಿರುವೆವು.

೪. ನಾವು ಆ ರಾಕ್ಷಸರನ್ನು ತಡೆದು ಅವರು ಸೂರ್ಯನನ್ನು ನೋಡದಂತೆಯೇ ಮಾಡಬೇಕೆಂದು ಯೋಚಿಸಿ, ದೇವತೆಗಳಿಗೊಡೆಯನಾದ ಇಂದ್ರನು ಸದಾ ಸೂರ್ಯನ ಎಡಪಾರ್ಶ್ವದಲ್ಲಿ ನಿಂತಿರುವಂತೆ ಏರ್ಪಡಿಸಿದೆವು.

೫. ಆ ರೀತಿ ನಿಂತುಕೊಂಡಿರುವ ದೇವೇಂದ್ರನನ್ನು ನೋಡಿ ಸೂರ್ಯನು ಎಲೈ ಇಂದ್ರನೇ, "ನೀನು ಪ್ರಜೆಗಳನ್ನು ರಕ್ಷಿಸುವುದಕ್ಕೋಸ್ಕರ ದಂಡವನ್ನು ಹಿಡಿದು ಸರಿಯಾಗಿ, ದಂಡನೀತಿಯನ್ನನುಸರಿಸಿ ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನೆ ಮುಂತಾದ್ದನ್ನು ಮಾಡುತ್ತಿರುವುದರಿಂದ ನಿನಗೆ ದಂಡನಾಯಕನೆಂದು ಹೆಸರು ಬರಲಿ;" ಎಂದು ಹೇಳಿದನು. ಆದ್ದರಿಂದ ಇಂದ್ರನೇ ದಂಡನಾಯಕನೆನಿಸಿದನು.

೬. ಅಗ್ನಿಯು ಸೂರ್ಯನ ಬಲ ಪಾರ್ಶ್ವದಲ್ಲಿದ್ದುಕೊಂಡು ಪ್ರಜೆಗಳು ಮಾಡುವ ಪುಣ್ಯ ಪಾಪಗಳನ್ನು ಬರೆದುಕೊಳ್ಳುವನು. ಇವನು ಹೊಂಬಣ್ಣವುಳ್ಳವನಾದುದರಿಂದ ಇವನಿಗೆ ಪಿಂಗಳನೆಂದು ಹೆಸರು ಬಂದಿತು.

ಅಗ್ನಿರ್ದಕ್ಷಿಣಪಾರ್ಶ್ವೇ ತು ಪಿಂಗಲತ್ವಾತ್ಸಪಿಂಗಲಃ ।
ಅಶ್ವಿನೌ ಚಾಪಿ ಸೂರ್ಯಸ್ಯ ಪಾರ್ಶ್ವಯೋರುಭಯೋಃ ಸ್ಥಿತೌ ।
ಅಶ್ವರೂಪಾತ್ಸಮುತ್ಪನ್ನೌ ತೇನ ತಾವಶ್ವಿನೌ ಸ್ಮೃತೌ ॥ ೭ ॥

ಪೂರ್ವದ್ವಾರೇ ಸ್ಥಿತೌ ತಸ್ಯ ರಾಜ್ಞಸ್ತ್ರೋಷೌ ಮಹಾಬಲೌ ।
ಕಾರ್ತಿಕೇಯಃ ಸ್ಮೃತೋ ರಾಜ್ಞಃ ತೋಷಶ್ಚಾಪಿ ಹರಃ ಸ್ಮೃತಃ ॥ ೮ ॥

ರಾಜೃದೀಪ್ತೌ ಸ್ಮೃತೋ ಧಾತುಃ ನಕಾರಃ ಪ್ರತ್ಯಯೋಽಸ್ಯ ತು ।
ಸುರಸೇನಾಪತಿತ್ವೇನ ಸಯಸ್ಮಾತ್ ದೀಪ್ಯತೇ ಸದಾ ।
ತಸ್ಮಾಚ್ಚ ಕಾರ್ತಿಕೇಯಸ್ತು ನಾಮ್ನಾ ರಾಜ್ಞ ಇತಿ ಸ್ಮೃತಃ ॥ ೯ ॥

ಸ್ಮೃತಸ್ತುಸಗತೌ ಧಾತುಃ ತಸ್ಯ ಸಃ ಪ್ರತ್ಯಯಃ ಸ್ಮೃತಃ ।

---

೭. ಅಶ್ವಿನೀ ದೇವತೆಗಳಾದ ನಾಸತ್ಯ, ದಸ್ರರೆಂಬುವರೂ ಸೂರ್ಯನ ಎರಡು ಪಕ್ಕದಲ್ಲಿಯೂ ನಿಂತಿರುವರು. ಇವರು ಸೂರ್ಯನು ಅಶ್ವರೂಪಿಯಾಗಿದ್ದಾಗ ಹುಟ್ಟಿದವರಾದ್ದರಿಂದ ಇವರಿಗೆ ಅಶ್ವಿನೀ ದೇವತೆಗಳೆಂದು ಹೆಸರು ಬಂದಿತು. ಇವರು, ದೇವವೈದ್ಯರು.

೮. ಸೂರ್ಯದೇವನ ಮನೆಯ ಪೂರ್ವಬಾಗಿಲಿನಲ್ಲಿ ಮಹಾ ಬಲಶಾಲಿಗಳಾದ, ರಾಜ್ಞ ಮತ್ತು ತೋಷ ಎಂಬಿಬ್ಬರು ನಿಂತುಕೊಂಡಿರುವರು. ಅವರಲ್ಲಿ ಷಣ್ಮುಖನೇ ರಾಜ್ಞನೆಂಬುವನು. ಪರಮೇಶ್ವರನೇ ತೋಷನೆಂಬುವನು.

೯. ರಾಜ್ಞಃ ಎಂಬ ಶಬ್ದವು ದೀಪ್ತ್ಯರ್ಥಕವಾದ ರಾಜೃ ಧಾತುವಿನ ಮೇಲೆ ನ ಎಂಬ ಪ್ರತ್ಯಯದ ಸಂಬಂಧದಿಂದ ಉಂಟಾಗಿದೆ. ಷಣ್ಮುಖನು ದೇವಸೇನೆಗಳಿಗೆಲ್ಲಾ ಅಧಿಪತಿಯಾಗಿ ಪ್ರಕಾಶಿಸುತ್ತಿದ್ದನಾದುದರಿಂದ, ಇವನಿಗೆ ರಾಜ್ಞ ಎಂದು ಹೆಸರು ಬಂದಿತು.

೧೦. ತೋಷ, ಎಂಬ ಪದವು ತುಸಗತೌ ಎಂಬ ಧಾತುವಿನಿಂದ ಹುಟ್ಟಿ ಸಃ ಪ್ರತ್ಯಯವನ್ನು ಹೊಂದಿ ಸಿದ್ಧವಾಗಿದೆ. ಹೆಚ್ಚಾಗಿ ಜ್ಞಾನವುಳ್ಳವನಾದುದರಿಂದ ಶಿವನಿಗೆ ತೋಷವೆಂಬ ಹೆಸರು ಬಂದಿದೆ. "ಶಾಸ್ತ್ರಮಿಚ್ಛೇನ್ಮಹೇಶ್ವರಾತ್, ಜ್ಞಾನ ಮಿಚ್ಛೇನ್ಮಹೇಶ್ವರಾತ್" ಎಂಬ ವೃದ್ಧ ಸಂಪ್ರದಾಯದಂತೆ, ಶಿವನು ಜ್ಞಾನ

ಗಚ್ಛತ್ಯತೀವ ಯಸ್ಮಾದ್ವಾ ರಾಜ್ಞ್ಯಃ ತೋಷೋ ವಿಧೀಯತೇ ॥ ೧೦ ॥
ಖರಂ ಹಿ ದುರತಿಕ್ರಾಂತಂ ಕೃತ್ವಾ ದ್ವಾರಂ ವ್ಯವಸ್ಥಿತೌ ।
ಪಕ್ಷಿಪ್ರೇತಾಧಿಪೌ ನಾಮ್ನಾ ಸ್ಮೃತೌ ಕಲ್ಮಾಷಪಕ್ಷಿಣೌ ॥ ೧೧ ॥

ವರ್ಣಸ್ಯ ಶಬಲಶ್ಚಾತ್ರ ಯಃ ಸಃ ಕಲ್ಮಾಷ ಉಚ್ಯತೇ ।
ಪಕ್ಷೋಽಸ್ಯಾಸ್ತೀತ್ಯತಃ ಪಕ್ಷೀ ಗರುಡಃ ಪರಿಕೀರ್ತಿತಃ ॥ ೧೨ ॥

ಸ್ಥಿತೋ ದಕ್ಷಿಣತಸ್ತಸ್ಯ ಜಾಂದಕಾರಃ ಸಮಾಠರಃ ।
ಜಾಂದಕಾರಶ್ಚಿತ್ರಗುಪ್ತೋ ಮಾಠರಃ ಕಾಲ ಉಚ್ಯತೇ ॥ ೧೩ ॥

---

ಸ್ವರೂಪನೆಂದು ತಿಳಿಯಬೇಕು. [ ಅಥವಾ ರಾಜ್ಞಃ= ಷಣ್ಮುಖನಿಗೆ, ಯಸ್ಮಾತ್ = ಯಾವನಿಂದ, ತೋಷಃ= ಸಂತೋಷವಾಯಿತೋ ಅವನೇ ಪರಮೇಶ್ವರನು. ಷಣ್ಮುಖನಿಗೆ ತಂದೆಯಾದುದರಿಂದಲೂ, ತಂದೆಯಿಂದ ಮಗನಿಗೆ ಸಂತೋಷ ವುಂಟಾಗುವುದು ಸಹಜವೇ ಆಗಿರುವುದರಿಂದ, ಪರಮೇಶ್ವರನಿಗೆ ಈ ಹೆಸರು ಬಂದಿತು. ಅಥವಾ ರಾಜ್ಞಃ= ತೇಜೋಮಯನಾದ ಸೂರ್ಯನಿಗೆ ತೋಷಃ= ಸಂತೋಷವು, ಯಾವನಿಂದ ಉಂಟಾಗುವುದೋ ಅವನು ತೋಷನೆಂದಾದರೂ ಕರೆಯಬಹುದು. ದ್ವಾರಪಾಲಕರಿಂದ ಯಜಮಾನನಿಗೆ ಅಡಚಣೆಗಳೂ ಇಲ್ಲದಂತೆ ಸುಖವು ದೊರೆಯುವುದು. ಅದರಂತೆ ಸೂರ್ಯಪರಮಾತ್ಮನಿಗೆ, ರಾಜ್ಞಃ ತೋಷಃ ಎಂಬ, ಕಾರ್ತಿಕೇಯ, ಶಿವ ಇವರಿಬ್ಬರೂ ದ್ವಾರಪಾಲಕರಾಗಿರುವುದರಿಂದ ಸೂರ್ಯದೇವನು ಬಹುವಾಗಿ ತೃಪ್ತಿಪಟ್ಟನೆಂದು ತಿಳಿಯಬಹುದು..]

೧೧. ದುಷ್ಟರನ್ನು ಒಳಗೆ ಪ್ರವೇಶಿಸದಂತೆ ನೋಡಿಕೊಳ್ಳುತ್ತಾ, ಕಲ್ಮಾಷ ಮತ್ತು ಪಕ್ಷೀ ಎಂಬುವರು ಖರ ಮತ್ತು ದ್ವಾರಿಕ ಎಂಬುವರನ್ನು ಬಾಗಿಲಲ್ಲಿರಿಸಿ ನಿಂತಿದ್ದರೆಂದು ಹಿಂದೆ ತಿಳಿಸಿದೆನಲ್ಲಾ ಅವರೇ ಗರುಡ, ಮತ್ತು ಪ್ರೇತಗಳಿಗೆಲ್ಲಾ ಒಡೆಯನಾದ ಯಮ ಇವರು.

೧೨. ಇವರಿಗೆ, ಈ ರೀತಿ ಹೆಸರು ಬರಲು ಕಾರಣವೇನೆಂಬುದನ್ನು ನಿನಗೆ ಈಗ ಹೇಳುವೆನು ಕೇಳು. ಪ್ರೇತಾಧಿಪತಿಯಾದ ಯಮನ ಬಣ್ಣವು ಚಿತ್ರವರ್ಣವಾದುದರಿಂದ ಅವನಿಗೆ ಕಲ್ಮಾಷ ಎಂತಲೂ, [ಚಿತ್ರವರ್ಣವುಳ್ಳವನು.] ರೆಕ್ಕೆಗಳುಳ್ಳವನಾದುದರಿಂದ ಗರುಡನಿಗೆ ಪಕ್ಷೀ ಎಂದು ಹೆಸರು ಬಂದಿದೆ.

೧೩. ಆ ಸೂರ್ಯನ, ಬಲಗಡೆ, ಜಾಂದಕಾರ ಮತ್ತು ಮಾಠರ ಎಂಬಿಬ್ಬರಿರುವರು. ಅವರಲ್ಲಿ ಜಾಂದಕಾರನು ಚಿತ್ರಗುಪ್ತನು. ಮಾಠರನೇ ಕಾಲಸ್ವರೂಪನಾದ ಯಮನು.

ಯಮಸ್ಯಾಽರ್ಥಕರೋ ನಿತ್ಯಂ ಚಿತ್ರಗುಪ್ತೋ ಮಹಾಮತಿಃ ।
ಅರ್ಥೋ ಜಾಂದ ಇತಿ ಪ್ರೋಕ್ತೋ ಜಾಂದಕಾರಸ್ತತಸ್ತು ಸಃ ॥ ೧೪ ॥

ದಕ್ಷಿಣಸ್ಯಾಂ ನಿವಾಸೋಽಸ್ಯ ದಿಶಿ ಯಸ್ಮಾತ್ತು ನಿತ್ಯಶಃ ।
ಧಾತುರ್ಮಠ ನಿವಾಸೇತಿ ಕಾಲಸ್ತೇನ ತು ಮಾಠರಃ ॥ ೧೫ ॥

ಪ್ರಾಪ್ನುಯಾನಕ್ಷುತಾಯೌತು ರವೇಃ ಪಶ್ಚಿಮತಃ ಸ್ಥಿತೌ ।
ಕ್ಷುತಾಪೋ ವರುಣೋ ಜ್ಞೇಯಃ ಪ್ರಾಪ್ನುಯಾನಸ್ತು ಸಾಗರಃ ॥ ೧೬ ॥

ಉತ್ತರೇಣ ಸ್ಥಿತೋಽರ್ಕಸ್ಯ ಕುಬೇರಃ ಸವಿನಾಯಕಃ ।
ಕುಬೇರೋ ಧನದೋ ಜ್ಞೇಯೋ ಹಸ್ತಿರೂಪೋ ವಿನಾಯಕಃ ॥ ೧೭ ॥

---

೧೪. ಮಹಾ ಬುದ್ಧಿಶಾಲಿಯಾದ ಚಿತ್ರಗುಪ್ತನು ಯಮನಿಗೆ ಕೆಲಸವನ್ನು ನಿತ್ಯವೂ ಮಾಡಿಕೊಡುತ್ತ ಸಹಾಯಕನಾಗಿರುವನು. ಜಾಂದ ಎಂದರೆ ಅರ್ಥ ಅಂದರೆ ಪ್ರಯೋಜನವೆಂತಲೂ ಅದನ್ನು ಮಾಡಿಕೊಡುವನಾದುದರಿಂದ ಇವನಿಗೆ (ಚಿತ್ರಗುಪ್ತನಿಗೆ) ಜಾಂದಕಾರನೆಂದೂ ಹೆಸರು ಬಂದಿತು.

೧೫. ಮಾಠರ ಶಬ್ದವು ಮಠನಿವಾಸೇ ಎಂಬ ಧಾತುವಿನಿಂದ ಉಂಟಾಗಿದೆ. ನಿವಾಸೆ, ಎಂದರೆ, ವಾಸಮಾಡುವುದೆಂದರ್ಥ. ಯಮನು ಯಾವಾಗಲೂ ದಕ್ಷಿಣ ದಿಕ್ಕಿನಲ್ಲಿ ವಾಸಮಾಡುವನಾದ್ದರಿಂದ, ಅವನಿಗೆ ಮಾಠರ ಎಂದು ಹೆಸರು ಬಂದಿದೆ.

೧೬. ಸೂರ್ಯನ ಪಶ್ಚಿಮ ದಿಕ್ಕಿನಲ್ಲಿ ಪ್ರಾಪ್ನುಯಾನ ಮತ್ತು ಕ್ಷುತಾಪ ರೆಂಬ ಇಬ್ಬರಿರುವರು. ಅವರಲ್ಲಿ ಕ್ಷುತಾಪನು ವರುಣನು, ಪ್ರಾಪ್ನುಯಾನನೇ ಸಾಗರನು. ಎಂದು ತಿಳಿಯಬೇಕು

೧೭. ಸೂರ್ಯನ ಉತ್ತರಭಾಗದಲ್ಲಿ ಗಣಪತಿಯೊಡನೆ ಕುಬೇರನಿರ ವನು. ಅವರಲ್ಲಿ ಮಹಾ ಪದ್ಮಾದಿ ನವ ನಿಧಿಗಳಿಗೂ, ಸಕಲೈಶ್ವರ್ಯಗಳಿಗೂ ಒಡೆಯನಾದ ಧನದನೆಂಬುವನೇ ಕುಬೇರನಾಗಿರುವನು. ಆನೆಯ ಮುಖವುಳ್ಳ ಗಣಪತಿಯೇ, ವಿನಾಯಕನಾಗಿರುವನು.

ರೇವಂತಶ್ಚೈವ ದಿಂಡಿಶ್ಚ ದ್ವಾವೇವ ಪೂರ್ವತಃ ಸ್ಥಿತೌ ।
ದಿಂಡಿಜ್ಞೇಯಸ್ತಯೋ ರುದ್ರೋ ರೇವಂತಸ್ತನಯೋ ರವೇಃ ॥ ೧೮ ॥

ಇತ್ಯೇತೇಽನುಚರಾಃ ಪ್ರೋಕ್ತಾಃ ಸಂಖ್ಯಾ ಚೈಷಾಂ ನಿಬೋಧ ಮೇ ।
ಮಾಠರೋ ಜಾಂದಕಾರಶ್ಚ ಧನದೋಽಥ ವಿನಾಯಕಃ ॥ ೧೯ ॥

ಪ್ರಾಪ್ಯಯಾನಕ್ಷುತಾಪೌ ತು ದ್ವೌ ಚ ಕಲ್ಮಾಷಪಕ್ಷಿಣೌ ।
ಅಶ್ವಿನೌ ತು ತತೋ ಜ್ಞೇಯೌ ದಂಡನಾಯಕಪಿಂಗಲೌ ॥ ೨೦ ॥

ಸಖರದ್ವಾರಿಕೌ ಜ್ಞೇಯೌ ರಾಜ್ಞಸ್ತೋಷೌ ತತಃ ಸ್ಮೃತೌ ।
ರೇವಂತಶ್ಚೈವ ದಿಂಡಿಶ್ಚ ಹೀತ್ಯೇತೇಽನುಚರಾಃ ಸ್ಮೃತಾಃ ॥ ೨೧ ॥

---

೧೮. ರೇವಂತ ಮತ್ತು ದಿಂಡಿ ಎಂಬಿಬ್ಬರು ಸೂರ್ಯನ ಪೂರ್ವಭಾಗದಲ್ಲಿ ರುವರು. ಇವರಲ್ಲಿ ರುದ್ರನೇ ದಿಂಡಿ ಎಂದೂ, ರೇವಂತನು ಸೂರ್ಯನ ಮಗ ನೆಂದೂ ತಿಳಿಯಬೇಕು.

೧೯-೨೦. ಓ ಸಾಂಬನೇ, ಇನ್ನು ಮುಂದೆ, ಸೂರ್ಯನ ಅನುಚರರಲ್ಲಿ ಶ್ರೇಷ್ಠನೂ, ಮತ್ತು ಅಂತರಿಕ್ಷದಲ್ಲಿ ಬಟ್ಟೆಯಿಲ್ಲದೇ ನಗ್ನನಾಗಿ - ಸಂಚರಿಸುತ್ತಿ ರುವ ದಿಂಡಿ ಎಂಬುವನೇ ರುದ್ರನೆಂದೂ ತಿಳಿಯುವನಾಗು. ಅವನು ಆ ರೀತಿ ನಡೆಯುತ್ತಿರುವುದಕ್ಕೆ ಕಾರಣವನ್ನು ಮುಂದೆ ತಿಳಿಸುವೆನು. ಎಂದು ನಾರದನು ಅನುಚರರ ಹೆಸರನ್ನೆಲ್ಲಾ ಹೇಳಿದನು.

೨೧. ಅಯ್ಯಾ, ಸಾಂಬನೇ, ೧) ಮಾಠರ ೨) ಜಾಂದಕಾರ ೩) ಧನದ ೪) ವಿನಾಯಕ ೫) ಪ್ರಾಪ್ಯಯಾನ ೬) ಕ್ಷುತಾಪ ೭) ಕಲ್ಮಾಷ ೮) ಪಕ್ಷೀ ೯) ನಾಸತ್ಯಾ ೧೦) ದಸ್ರ ೧೧) ದಂಡನಾಯಕ ೧೨) ಪಿಂಗಲ ೧೩) ಖರ ೧೪) ದ್ವಾರಿಕ ೧೫) ರಾಜ್ಞ ೧೬) ತೋಷ ೧೭) ರೇವಂತ ೧೮) ದಂಡಿ ಎಂಬ ಈ ಹದಿನೆಂಟು ಮಂದಿಯೂ ಸೂರ್ಯನ ಪಾರ್ಶ್ವದಲ್ಲಿ ಸಂಚರಿಸುವರೆಂದು ತಿಳಿ.

ದಶಾಷ್ಟೌ ಚ ಸಮಾಖ್ಯಾತಾಃ ಸಂಕ್ಷೇಪಾತ್ಸಂಖ್ಯಯಾ ಪುನಃ ।
ಇತಿ ತೇ ನಾಮಭಿಸ್ಸ್ತುತ್ಯೈರ್ದಾನವಾರ್ಥೇ ವಿನಾಯಕಾಃ ।
ಪರಿವಾರ್ಯ ಸ್ಥಿತಾಃ ಸೂರ್ಯಂ ನಾನಾಪ್ರಹರಣಾಯುಧಾಃ ॥ ೨೨ ॥

ಸ್ವರೂಪಾಶ್ಚಾನ್ಯರೂಪಾಶ್ಚ ವಿರೂಪಾಃ ಕಾಮರೂಪಿಣಃ ।
ಪರಿವಾರ್ಯ ಸ್ಥಿತಾಃ ಸೂರ್ಯಂ ಭಾನುರೂಪಾಶ್ಚ ದೇವತಾಃ ॥ ೨೩ ॥

ಋಚೋ ಯಜೂಂಷಿ ಸಾಮಾನಿ ವಾಙ್ಮಯೋಕ್ತಾನಿ ಯಾನಿ ತು ।
ನಾನಾರೂಪೈಃ ಸ್ಥಿತಾನ್ಯೇವ ರವೇಸ್ತಾನಿ ಸಮಂತತಃ ॥ ೨೪ ॥

॥ ನಾರದ ಉವಾಚ ॥

ವಕ್ಷ್ಯಾಮ್ಯಥಾತಃ ಪುನರೇವ ದಿಂಡಿಂ ಸೂರ್ಯಸ್ಯ ಸರ್ವಪ್ರವರಂ ಪ್ರಧಾನಂ ।
ವ್ಯೋಮ್ನ್ಯವಸಂಸ್ತಿಷ್ಠತಿ ಯಸ್ತು ನಗ್ನಃ ಸೋಽಪ್ಯುಚ್ಯತೇ ರುದ್ರ ಇಹಾಪಿ ದಿಂಡೀ ॥ ೨೫ ॥

---

೨೨-೨೩. ಈ ರೀತಿ ನಾನು ಹೇಳಿದ ಸ್ತೋತ್ರಾರ್ಹವಾದ ಹೆಸರುಗಳಿಂದ ಕೂಡಿದವರಾಗಿ ರಾಕ್ಷಸರನ್ನು ತಡೆಯಲು, ದೇವತೆಗಳು, ತಮ್ಮ ನಿಜರೂಪದಿಂದಲೂ ಮತ್ತು ಬೇರೆ ಬೇರೆ ವೇಷದಿಂದಲೂ ಸಹ ಸೂರ್ಯನ ಸುತ್ತಲೂ ಅನೇಕ ಆಯುಧಗಳನ್ನು ಹಿಡಿದು ಸಂಚರಿಸುತ್ತಿರುವರು. ಇವರೆಲ್ಲರೂ ಸೂರ್ಯನ ತೇಜೋರೂಪರಾದ ದೇವತೆಗಳು.

೨೪. ವಾಗ್ರೂಪವಾದ ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳೂ ಸಹ ಅನೇಕ ರೂಪವನ್ನು ಧರಿಸಿ ಸೂರ್ಯನ ಸುತ್ತಲೂ ಇರುವುವು.

೨೫. ಓ ಸಾಂಬನೇ, ಇನ್ನು ಮುಂದೆ, ಸೂರ್ಯನ ಅನುಚರರಲ್ಲಿ ಶ್ರೇಷ್ಠನೂ, ಪ್ರಧಾನನೂ ಮತ್ತು ಅಂತರಿಕ್ಷದಲ್ಲಿ ಬಟ್ಟೆಯಿಲ್ಲದೇ ನಗ್ನನಾಗಿ ಸಂಚರಿಸುತ್ತಿರುವ ದಿಂಡಿ ಎಂಬುವನೇ ರುದ್ರನೆಂದು ತಿಳಿಯುವನಾಗು. ಅವನು ಆ ರೀತಿ ಹೆಸರುಪಡೆಯುತ್ತಿರುವುದಕ್ಕೆ ಕಾರಣವನ್ನು ಮುಂದೆ ತಿಳಿಸುವೆನು. ಎಂದು ಆ ವಿಷಯವನ್ನೂ ವಿವರಿಸಿದನು

ಛಿತ್ವಾ ಪುರಾ ಬ್ರಹ್ಮಶಿರಃ ಕಿಲಾಽಸೌ ।
ಪ್ರಗೃಹ್ಯ ತಚ್ಚಾಸ್ಯ ಶಿರಃ ಕಪಾಲಂ ॥
ಬಹೂದಕಂ ಪುಷ್ಪಫಲೈರುಪೇತಂ ।
ನಗ್ನೋ ಯಯೌ ದಾರುವನಂ ಋಷೀಣಾಂ ॥ ೨೬ ॥

ದೃಷ್ಟ್ವಾ ತು ತಂ ಭೈಕ್ಷ್ಯಕರಂ ಸುರೇಶಂ ।
ಕ್ಷುಬ್ಧಾಃ ಸ್ತ್ರಿಯೋ ಮುಕ್ತವಸ್ತ್ರಾಃ ಪ್ರಯಾತಾಃ ॥
ಯೋಷಿತ್ಸು ತಾಸು ಕ್ಷುಭಿತಾಸು ಸರ್ವೇ ।
ಜಘ್ನುರ್ಹರಂ ತೇ ಮುನಯಃ ಸುರುಷ್ಟಾಃ ॥ ೨೭ ॥

ಸಹನ್ಯಮಾನೋ ಮುನಿಭಿಸ್ತು ಸರ್ವೈಃ ।
ಗೃಹೀತಲೋಷ್ಟೈಃ ಋಷಿದಂಡಕಾಷ್ಟೈಃ ॥
ವಿಹಾಯ ತಂ ದೇಶಮಜಃ ಸ್ವರೂಪೀ ।
ತತೋ ರವೇರ್ಲೋಕಮಥಾಽಽಜಗಾಮ ॥ ೨೮ ॥

---

೨೬. ರುದ್ರನು, ಪೂರ್ವದಲ್ಲಿ ಬ್ರಹ್ಮನ ಐದು ತಲೆಗಳಲ್ಲೊಂದನ್ನು ಕತ್ತರಿಸಿ ಆ ತಲೇ ಬುರುಡೆಯ ಕಪಾಲವನ್ನು ಕೈಯಲ್ಲಿ ಹಿಡಿದುಕೊಂಡು, ಅನೇಕ ಪುಷ್ಪಗಳೂ ಮತ್ತು ಪುಣ್ಯತೀರ್ಥಗಳೂ ಉಳ್ಳ ಋಷಿವನವೆಂಬ ಕಾಡಿಗೆ ಈ ಬ್ರಹ್ಮಹತ್ಯಾ ದೋಷ ನಿವಾರಣೆಗಾಗಿ ಬಟ್ಟೆ ಬರೆಗಳೇನನ್ನೂ ಧರಿಸದೆ ನಗ್ನನಾಗಿ ಪ್ರವೇಶಿಸಿದನು.

೨೭. ಈ ರೀತಿ ಪರಮೇಶ್ವರನು ನಗ್ನನಾಗಿ ಕಪಾಲವನ್ನು ಹಿಡಿದು ಭಿಕ್ಷೆಗಾಗಿ ಬಂದಿರುವುದನ್ನು ನೋಡಿ. ಋಷಿಪತ್ನಿಯರೆಲ್ಲ ನಗ್ನನಾಗಿದ್ದ ಪರಮೇಶ್ವರನ ರೂಪಕ್ಕೆ ಮರುಳಾಗಿ ಮೋಹಗೊಂಡು, ವಸ್ತ್ರಗಳಿಲ್ಲದೇ ಇವನ ಸಮೀಪಕ್ಕೆ ಬಂದರು. ಹೀಗೆ ತಮ್ಮ ಹೆಂಗಸರೆಲ್ಲರೂ, ಕ್ಷೋಭೆಗೊಂಡು ವಸ್ತ್ರ ರಹಿತರಾಗಿರುವುದನ್ನು ನೋಡಿ ಅಲ್ಲಿಯ ಎಲ್ಲಾ ಋಷಿಗಳೂ ಕೋಪಗೊಂಡು ಪರಮೇಶ್ವರನನ್ನು ಹೊಡೆದರು.

೨೮. ಮಹರ್ಷಿಗಳೆಲ್ಲರೂ, ಹೀಗೆ ಕೋಪಗೊಂಡು ಒಣಗಿದ ಕಡ್ಡಿ ಮತ್ತು ತಮ್ಮ ದಂಡಗಳಿಂದಲೂ ಮಣ್ಣು ಹೆಂಟೆಗಳಿಂದಲೂ ಸಹ ಮಹೇಶ್ವರನನ್ನು ಚನ್ನಾಗಿ ಹೊಡೆಯಲು, ಅನಂತರ ಹರನೂ ನಿತ್ಯನೂ ಆದ ಪರಮೇಶ್ವರನು ತನ್ನ ಅದೇ ಸ್ವರೂಪದಿಂದ ಸೂರ್ಯಲೋಕಕ್ಕೆ ಓಡಿಬಂದನು.

ಆಗಚ್ಛಮಾನಂ ಪ್ರವದಾಸ್ಸಮೂಚುಃ ।
ದೇವೇಶ ನಿತ್ಯಂ ಭ್ರಮಸೇ ಕಿಮರ್ಥಂ ।
ಸ ತ್ವಾ ಹತಾನ್ಪಾಪವಿಮೋಚನಾರ್ಥಂ ।
ಭ್ರಮಾಮಿ ತೀರ್ಥಾನಿ ಸುರಾಲಯಾಂಶ್ಚ ॥ ೨೯ ॥

ತೇ ಭೂಯ ಊಚುಃ ಪ್ರವರಾಸ್ತಮೇವಂ ।
ಅತ್ರೈವ ತಿಷ್ಠಸ್ವ ರವೇಃ ಪುರಸ್ತಾತ್ ॥
ಶುದ್ಧಿಂ ತವೈವೈಷ ಕರಿಷ್ಯತೀಹ ।
ಶುದ್ಧಸ್ತತೋ ಯಾಸ್ಯಸಿ ರುದ್ರಲೋಕಮ್ ॥ ೩೦ ॥

ಇತ್ಯೇವಮುಕ್ತಃ ಪ್ರವರೈಃ ಸರುದ್ರಃ ।
ತತ್ರೈವ ತಸ್ಥೌ ರವಿಲೋಕನಾಥಮ್ ॥
ನಗ್ನೋ ಜಟೀ ಯುಷ್ಟಿಕಪಾಲಪಾಣೀ ।
ರೂಪೇಣ ಚೈನಾಪ್ರತಿಮಸ್ತ್ರಿಲೋಕೇ ॥ ೩೧ ॥

---

೨೯. ಹೀಗೆ ಸೂರ್ಯಲೋಕಕ್ಕೆ ಬರುತ್ತಿರುವ ಮಹೇಶ್ವರನನ್ನು ನೋಡಿ ದೇವತೆಗಳು, ಎಲೈ ದೇವತೆಗಳೊಡೆಯನಾದ ಶಿವನೆ; ಯಾವಾಗಲೂ ಏತಕ್ಕೋಸ್ಕರ ನೀನು ಈ ರೀತಿ ಸಂಚಾರಮಾಡುತ್ತಿರುವೆ, ಎಂದು ಕೇಳಲು, ಆಗ ಹರನು ಅವರನ್ನು ಕುರಿತು ಪ್ರಾಣಿ ಹಿಂಸೆ ಅಂದರೆ ಬ್ರಹ್ಮಹತ್ಯ ಮಾಡಿದ ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ, ಪುಣ್ಯ ತೀರ್ಥಗಳನ್ನೂ, ದೇವಾಲಯಗಳನ್ನೂ ಸಂಚರಿಸುತ್ತಿರುವೆನೆಂದು ಹೇಳಿದನು.

೩೦. ಅನಂತರ, ಸೂರ್ಯನ ಅನುಚರರಾದ ಆ ದೇವತೆಗಳೆಲ್ಲರೂ, ಪುನಃ ಮಹೇಶ್ವರನನ್ನು ಕುರಿತು, ಎಲೈ ದೇವನೇ, ನೀನು ಇಲ್ಲಿಯೇ ತೇಜೋಮಯನಾದ ಸೂರ್ಯನ ಮುಂದುಗಡೆ ವಾಸಮಾಡು. ಭಗವಂತನಾದ ಸೂರ್ಯನು ನಿನ್ನನ್ನು ಶುದ್ಧನನ್ನಾಗಿ ಮಾಡಿ ನಿನಗುಂಟಾಗಿರುವ ಬ್ರಹ್ಮಹತ್ಯಾ ದೋಷವನ್ನು ಕಳೆದು ನಿನ್ನನ್ನು ಪಾವನನನ್ನಾಗಿ ಮಾಡುವನು. ಅನಂತರ ನೀನು ನಿನ್ನ ರುದ್ರಲೋಕಕ್ಕೆ ತೆರಳುವೆ ಎಂದು ಹೇಳಿದರು.

೩೧. ಸೂರ್ಯನ ಅನುಚರರಾದ ದೇವತೆಗಳು ಹಾಗೆ ಹೇಳಿದುದನ್ನು ಕೇಳಿ ರುದ್ರನು ಅದರಂತೆಯೇ ಸೂರ್ಯ ಲೋಕದಲ್ಲಿ ನಿಂತನು. ನಗ್ನನೂ ಜಟಾಧಾರಿಯೂ, ದಂಡ ಮತ್ತು ಕಪಾಲಗಳನ್ನು ಕೈಗಳಲ್ಲಿ ಹಿಡಿದಿರುವವನೂ, ಮೂರು ಲೋಕಗಳಲ್ಲಿಯೂ ಅತ್ಯಂತ ಸುಂದರನೂ ಎನಿಸಿದ ಮಹೇಶ್ವರನು ಆಗ ಸೂರ್ಯನ ಮುಂದುಗಡೆ ನೆಲಸಿದನು.

ತುಷ್ಟಾವ ದೇವಂ ಸವಿತಾ ತದಾಽಽಹ ।
ಪ್ರೀತೋಽಸ್ಮಿ ತಂ ವಾಗಮೃತಾತ್ತವಾಹಂ ॥
ಮದ್ದರ್ಶನಾದೇವ ಭವಾನ್ ವಿಶುದ್ಧೋ ।
ದಿಂಡೀ ಚ ನಾಮ್ನಾ ಭವಿತಾಽಸಿ ಲೋಕೇ ॥ ೩೨ ॥

ಸ್ಥಾನಂ ವ್ರಜಸ್ವ ತ್ವಮತೀವ ಪುಣ್ಯಂ ।
ಪಾಪಾಪಹಂ ಲೌಕಿಕನಾಮಧೇಯಂ ।
ತ್ಯಕ್ತ್ವಾ ಕಪಾಲಂ ಪ್ರವಿಶುದ್ಧಮೂರ್ತಿಃ ।
ಮಯಾ ಸಹ ಸ್ಥಾಸ್ಯಸಿ ತತ್ರ ನಿತ್ಯಂ ॥ ೩೩ ॥

ಅಷ್ಟಾದಶೈತೇ ಪ್ರವರಾಸ್ತು ಭಾನೋಃ ।
ಚತುರ್ದಶಾನ್ಯೇ ಚ ರವೇರಥಸ್ತಾತ್ ॥
ದೇವೌ ಚ ತೌ ದ್ವೌ ತು ಋಷಿಪ್ರಧಾನೌ ।
ಗಂಧರ್ವಸರ್ಪಾವಮಿತಪ್ರಭಾವೌ ॥ ೩೪ ॥

---

೩೨. ಅನಂತರ ಪರಮೇಶ್ವರನು ಸೂರ್ಯದೇವನನ್ನು ಸ್ತೋತ್ರಮಾಡಿದನು. ಸೂರ್ಯಪರಮಾತ್ಮನು ಆ ಸ್ತೋತ್ರದಿಂದ ಸಂತೋಷಗೊಂಡು, ಶಿವನನ್ನು ಕುರಿತು, " ರುದ್ರನೇ ನಿನ್ನ ಬಾಯಿಂದ ಹೊರಟ ಅಮೃತಸ್ವರೂಪವಾದ ಸ್ತೋತ್ರದಿಂದ ಪ್ರಸನ್ನನಾಗಿರುವೆನು. ನನ್ನ ದರ್ಶನ ಮಾತ್ರದಿಂದಲೇ, ನಿನ್ನ ಬ್ರಹ್ಮಹತ್ಯಾದಿ ದೋಷಗಳೆಲ್ಲವೂ ನಾಶವಾಗಿ ನೀನು ಪರಿಶುದ್ಧನಾಗಿರುವೆ. ಇನ್ನು ಮುಂದೆ ನೀನು ಲೋಕದಲ್ಲಿ ದಿಂಡೀ ಎಂಬ ಹೆಸರಿನಿಂದ ಕರೆಯಲ್ಪಡುವೆ, " ಎಂದು ಹೇಳಿದನು.

೩೩. ಸೂರ್ಯನು, ಹೀಗೆ ಹೇಳಿ ಪುನಃ ರುದ್ರನನ್ನು ಕುರಿತು, " ಶಿವನೇ, ಇನ್ನು ಮುಂದೆ ನೀನು ಅತ್ಯಂತ ಪುಣ್ಯಕರವೂ, ಲೋಕದಲ್ಲಿ ಪಾಪವನ್ನು ನಾಶಮಾಡತಕ್ಕದ್ದಾದುದರಿಂದ, ಲೌಕಿಕವಾದ ಹೆಸರಿನಿಂದ ಕೂಡಿದುದೂ ಆದ ಸ್ಥಾನವನ್ನು ( ಅಂದರೆ ಸೂರ್ಯನ ಸಮೀಪದಲ್ಲೆ ಅದು ಒಂದು ಸ್ಥಾನವೆಂದು ತಿಳಿಯಬೇಕು) ಹೊಂದು. ಇನ್ನುಮೇಲೆ ಕಪಾಲವನ್ನು ಬಿಟ್ಟುಬಿಡುವೆ. ಪರಿಶುದ್ಧ ಸ್ವರೂಪನಾದ ನೀನು ನನ್ನೊಡನೆಯೇ ಯಾವಾಗಲೂ ಇರುವವನಾಗುವೆ, " ಎಂದು ಹೇಳಿದನು.

೩೪-೩೫. ಅಯ್ಯ ಸಾಂಬನೇ, ಹಿಂದೆ ಹೇಳಿದ, ಮಾಠರ, ಚಾಂದಕಾರ ಮೊದಲಾದ ಹದಿನೆಂಟು (18) ಮಂದಿಯೂ ಸೂರ್ಯನ ಅನುಚರರೆನಿಸಿ ಮೇಲು

ಯಕ್ಷಾ ಚ ಯೌ ದ್ವಾ ಚ ನಿಶಾಚರಾ ತು ।
ನೃತ್ಯೇ ಚ ಯೇ ದ್ವೇऽಪ್ಸರಸಾಂ ವರಿಷ್ಠೇ ॥
ವಸಂತಿ ಯೇಹಾರ್ಕಿಷು ಖೇऽಪ್ಸು ಸೂರ್ಯೇ ।
ತೇಷಾಂ ಸಮೀತಿಶ್ಚತುರುತ್ತರಾಣಾಂ ॥ ३४ ॥

ಇತಿ ಶ್ರೀ ಸಾಂಬಪುರಾಣೇ ಷೋಡಶೋऽಧ್ಯಾಯಃ.

---

ಭಾಗದಲ್ಲಿ ವಾಸಿಸುತ್ತಿರುವರು. ಸೂರ್ಯನ ಕೆಳಗಡೆ ಇವರಲ್ಲದೆ ಇನ್ನೂ ಹದಿನಾಲ್ಕು (14) ಮಂದಿ ಅನುಚರರಿರುವರು. ಅವರಾರೆಂಬುದನ್ನು ಹೇಳುವೆನು ಕೇಳು ; ಇಬ್ಬರು ದೇವತೆಗಳೂ, ಇಬ್ಬರು ಋಷಿಶ್ರೇಷ್ಠರೂ, ಇಬ್ಬರು ಗಂಧರ್ವರೂ, ಇಬ್ಬರು ನಾಗರೂ, ಇಬ್ಬರು ಯಕ್ಷರೂ, ಇಬ್ಬರು ರಾಕ್ಷಸರೂ, ನಾಟ್ಯದಲ್ಲಿ ನಿಪುಣರಾದ ಇಬ್ಬರು ಅಪ್ಸರ ಸ್ತ್ರೀಯರೂ ಹೀಗೆ ಒಟ್ಟು ಹದಿನಾಲ್ಕುಮಂದಿ ಸೂರ್ಯನ ಕೆಳಭಾಗದಲ್ಲಿ ವಾಸಮಾಡುವರು. ಇದಲ್ಲದೇ ಇನ್ನೂ ನಾಲ್ಕು ಮಂದಿ ಅಂತರಿಕ್ಷದಲ್ಲಿಯೂ, ಜಲದಲ್ಲಿಯೂ ಇದ್ದುಕೊಂಡು ಸೂರ್ಯನ ಸಮೀಪದಲ್ಲಿ ವಾಸಿಸುವರು." ಎಂದು ನಾರದನು ಸಾಂಬನನ್ನು ಕುರಿತು ಹೇಳಿದನು.

ಇಲ್ಲಿಗೆ ಸಾಂಬಪುರಾಣದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತದಶೋಽಧ್ಯಾಯಃ

---

॥ ನಾರದ ಉವಾಚ ॥

ದಿಂಡಿಪ್ರೋಕ್ತಮಿದಂ ಚಾಪಿ ಶೃಣು ಸಾಂಬ ಮಹಾಸ್ತವಮ್ ।
ಪ್ರಣಮ್ಯ ಶಿರಸಾ ದೇವಮುದಯಸ್ಥಂ ದಿವಾಕರಮ್ ॥ ೧ ॥

ಭಕ್ತ್ಯಾ ಭಾನುಂ ಪ್ರಪದ್ಯೇಽಹಂ ಸರ್ವಪಾಪ ಪ್ರಣಾಶನಂ ।
ದೇವದಾನವಯಕ್ಷಾಣಾಂ ಗ್ರಹಾಣಾಂ ಜ್ಯೋತಿಷಾಮಪಿ ॥ ೨ ॥

---

## ಹದಿನೇಳನೆಯ ಅಧ್ಯಾಯ.

೧. ನಾರದನು, ಸಾಂಬನನ್ನು ಕುರಿತು "ಅಯ್ಯ ಸಾಂಬನೆ, ದಿಂಡಿಯು ಸೂರ್ಯಪರಮಾತ್ಮನನ್ನು ಪೂಜಿಸಿ, ಸ್ತುತಿಮಾಡಿದ ಮಹಾಸ್ತೋತ್ರವನ್ನು ಹೇಳುವೆನು. ನೀನು ಉದಯಿಸುತ್ತಿರುವ, ಸೂರ್ಯಪರಮಾತ್ಮನಿಗೆ, ತಲೆಬಗ್ಗಿ ನಮಸ್ಕಾರಮಾಡಿ ಶ್ರದ್ಧೆಯಿಂದ ಕೇಳು " ಎಂದನು.

೨-೩. ಸಕಲಪಾಪಗಳನ್ನೂ ನಾಶಮಾಡುವ ಸೂರ್ಯನನ್ನು ನಾನು ಧ್ಯಾನಿಸುವೆನು. ದೇವತೆಗಳು, ರಾಕ್ಷಸರು, ಯಕ್ಷರು, ತೇಜೋರೂಪಿಗಳಾದ ಗ್ರಹಗಳೂ ಇವರೆಲ್ಲರಿಗಿಂತ ಅಧಿಕ ತೇಜಸ್ವಿಯಾಗಿರುವ, ಸರ್ವ ಸಮರ್ಥನಾದ ಸೂರ್ಯನನ್ನು ನಾನು ಮರೆಹೊಗುವೆನು. ಎಂದು ಮುಕ್ಕಣ್ಣನಾದ ಶಿವನು (ದಿಂಡಿ) ಸ್ತೋತ್ರಮಾಡಿ, ಅನಂತರ ಧ್ಯಾನ ಮಗ್ನನಾದನು.

ತೇಜಸೋsಭ್ಯಧಿಕಂ ದೇವಂ ವ್ರಜಾಮಿ ಶರಣಂ ಪ್ರಭುಂ ।
ಏವಮುಕ್ತ್ವಾ ವಿರೂಪಾಕ್ಷೋ ಧ್ಯಾನಾಸಕ್ತೋ ಬಭೂವ ಹ ॥ ೩ ॥

ಧ್ಯಾನಾತ್ಸಂಸ್ಮೃತ್ಯ ಮನಸಾ ಪೌರಾಣೀಮಾತ್ಮನಸ್ತನುಂ ।
ವಾಗ್ಭಿಸ್ತುಷ್ಟಾವ ತಂ ದೇವಂ ತಮೋಘ್ನಂ ರಶ್ಮಿಮಾಲಿನಂ ॥ ೪ ॥

ದಿವಿ ಸ್ಥಿತಂ ಮಯೂಖಾಗ್ರ್ಯೈಃ ದ್ಯೋತಯಂತಂ ದಿಶೋ ದಶ ।
ವಸುಧಾಮಂತರಿಕ್ಷಂ ಚ ವ್ಯಾಪ್ತವಂತಂ ಮರೀಚಿಭಿಃ ॥ ೫ ॥

ಆದಿತ್ಯಂ ಭಾಸ್ಕರಂ ಸೂರ್ಯಂ ಸವಿತಾರಂ ದಿವಾಕರಂ ।
ಪೂಷಾಣಮರ್ಯಮಾಣಂ ಚ ಸ್ವರ್ಭಾನುಂ ದೀಪ್ತತೇಜಸಂ ॥ ೬ ॥

---

೪. ಅತಿ ಪುರಾತನವಾದ, ಪರಮಾತ್ಮನ ಶರೀರವನ್ನು ಧ್ಯಾನದಿಂದ ಮನಸ್ಸಿನಲ್ಲಿ ನೆನೆಸಿಕೊಂಡು, ಅಂಧಕಾರವನ್ನು ನಾಶಮಾಡುವವನೂ ಮತ್ತು ತೇಜೋರೂಪಗಳಾದ ಕಿರಣಗಳಿಂದ ಕೂಡಿದವನೂ ಆದ ಸೂರ್ಯದೇವನನ್ನು ಈ ಮಾತುಗಳಿಂದ ಸ್ತೋತ್ರಮಾಡಿದನು.

೫-೧೦. " ಎಲೈ ಸೂರ್ಯನೇ, ನೀನು ಅಂತರಿಕ್ಷದಲ್ಲಿ ಇದ್ದುಕೊಂಡು ನಿನ್ನ ಕಿರಣಗಳ ರಾಶಿಯಿಂದ ಹತ್ತು ದಿಕ್ಕುಗಳನ್ನೂ ಪ್ರಕಾಶಪಡಿಸುವೆ. ನಿನ್ನ ಕಿರಣಗಳು ಭೂಮಿಯಲ್ಲಿಯೂ ಮತ್ತು ಅಂತರಿಕ್ಷದಲ್ಲಿಯೂ ವ್ಯಾಪಿಸಿವೆ. ಆದಿತ್ಯನೂ, ಭಾಸ್ಕರನೂ, ಸೂರ್ಯನೂ, ಸವಿತೃವೂ, ದಿವಾಕರನೂ, ಪೂಷಣನೂ, ಅರ್ಯಮಣನೂ, ಸ್ವರ್ಭಾನುವೂ, ಹೊಳೆಯುತ್ತಿರುವ ಕಿರಣಗಳುಳ್ಳವನೂ ಸಹ ನೀನೇ ಆಗಿರುವೆ. ಅಂತಹ ನಿನ್ನನ್ನು ನಾನು ಧ್ಯಾನ ಮಾಡುವೆನು.

ಎಲೈ ದೇವನೇ, ಕೃತ, ತ್ರೇತ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಕಾಲಪರಿಮಾಣಗಳಿಗೂ, ನೀನೇ ಅವಧಿಯಾಗಿರುವೆ. ಕಾಲಾಗ್ನಿ (ಪ್ರಳಯಾಗ್ನಿ) ಸ್ವರೂಪನೂ, ನೋಡಲು ಸಾಧ್ಯವಿಲ್ಲದವನೂ, ಪ್ರಳಯಕಾಲದಲ್ಲಿ ಯಮಸ್ವರೂಪನೂ, ಯೋಗಗಳಿಗೆಲ್ಲ ಒಡೆಯನೂ, ನಾಶವಿಲ್ಲದವನೂ, ಮತ್ತು ರಕ್ತ (ಕೆಂಪು) ಹಳದಿ, ಬಿಳುಪು, ಮತ್ತು ಕಪ್ಪು ಬಣ್ಣಗಳಿಂದ ಕೂಡಿದವನೂ ಆಗಿರುವ ನಿನ್ನನ್ನು ಸ್ತೋತ್ರಮಾಡುವೆನು

ಚತುರ್ಯುಗಾಂತಂ ಕಾಲಾಗ್ನಿಂ ದುಷ್ಪ್ರೇಕ್ಷ್ಯಂ ಪ್ರಲಯಾಂತಕಂ ।
ಯೋಗೇಶ್ವರಮನಂತಂ ಚ ರಕ್ತಂ ಪೀತಂ ಸಿತಾಽಸಿತಂ ॥ ೭ ॥

ಋಷೀಣಾಮಗ್ನಿಹೋತ್ರೇಷು ಯಜ್ಞವೇದೇಷು ಸಂಸ್ಥಿತಂ ।
ಅಕ್ಷರಂ ಪರಮಂ ಗುಹ್ಯಂ ಮೋಕ್ಷದ್ವಾರಂ ಸುರೋತ್ತಮಮ್ ॥ ೮ ॥

ಛಂದೋಭಿರಶ್ವರೂಪೈಶ್ಚ ಸಕೃದ್ಯುಕ್ತೈರ್ವಿಹಂಗಮೈಃ ।
ಉದಯಾಸ್ತಮನೇ ಯುಕ್ತಂ ಸದಾ ಮೇರೋಃ ಪ್ರದಕ್ಷಿಣಂ ॥ ೯ ॥

ಅಮೃತೀಭೂತಸತ್ಯಂ ಚ ಪುಣ್ಯತೀರ್ಥಂ ಪೃಥಗ್ವಿಧಂ ।
ವಿಶ್ವಸ್ಥಿತಿಮಚಿಂತ್ಯಂ ಚ ಪ್ರಪನ್ನೋಽಸ್ಮಿ ಪ್ರಭಾಕರಂ ॥ ೧೦ ॥

---

ಋಷಿಗಳು ಆಚರಿಸುವ ಅಗ್ನಿಹೋತ್ರವೇ ಮೊದಲಾದ ಕರ್ಮಗಳಲ್ಲಿಯೂ, ಯಾಗಗಳಲ್ಲಿಯೂ, ನಾಲ್ಕುವೇದಗಳಲ್ಲಿಯೂ, ನೀನೇ ನೆಲಸಿರುವೆ. ನೀನು ನಾಶ ರಹಿತನು. ನೀನೇ ಪರಮಪುರುಷನು. ರಹಸ್ಯನಾಗಿರುತ್ತಾ ಮತ್ತೊಬ್ಬರಿಗೆ ಗೋಚರನಾಗದಿರುವವನೂ, ಮೋಕ್ಷಕ್ಕೆ ಬಾಗಿಲಿನಂತಿರುವವನೂ, ದೇವತೆಗಳಲ್ಲಿ ಶ್ರೇಷ್ಠನೂ ನೀನೇ ಆಗಿರುವೆ. ಇಂತಹ ನಿನ್ನನ್ನು ಮೊರೆಹೊಗುವೆನು.

ಅಂತರಿಕ್ಷದಲ್ಲಿ ಸಂಚರಿಸುವ ಸಾಮರ್ಥ್ಯವುಳ್ಳ ಛಂದೋರೂಪವಾದ ಕುದುರೆಗಳಿಂದ ಕೂಡಿದವನೂ, ಉದಯ ಮತ್ತು ಅಸ್ತ ಇವುಗಳನ್ನು ತೋರ್ಪಡಿಸುತ್ತಾ ಯಾವಾಗಲೂ ಮೇರುಪರ್ವತವನ್ನು ಪ್ರದಕ್ಷಿಣೆಮಾಡುತ್ತಿರುವವನೂ ಆಗಿರುವ ನಿನ್ನನ್ನು ವಂದಿಸುವೆನು.

ಅಮೃತಸ್ವರೂಪನೂ, ಸತ್ಯಮೂರ್ತಿಯೂ, ಅನೇಕ ವಿಧವಾದ ಮತ್ತೂ ಪುಣ್ಯಕರವಾದ ತೀರ್ಥಗಳ ಸ್ವರೂಪವುಳ್ಳವನೂ, ಜಗದ್ರಕ್ಷಕನೂ, ಯೋಚನೆ ಮಾಡಲುಸಾಧ್ಯವಿಲ್ಲದ ಮಹಿಮೆಯುಳ್ಳವನೂ ಆದ ತೇಜೋಮಯವಾದ ಕಿರಣಗಳುಳ್ಳ ಸೂರ್ಯಪರಮಾತ್ಮನಿಗೆ ನಾನು ನಮಿಸುವೆನು.

ತ್ವಂ ಬ್ರಹ್ಮಾ ತ್ವಂ ಮಹಾದೇವಃ ತ್ವಂ ವಿಷ್ಣುಸ್ತ್ವಂ ಪ್ರಜಾಪತಿಃ ।
ವಾಯುರಾಕಾಶಮಾಪಶ್ಚ ಪೃಥಿವೀಗಿರಿಸಾಗರಾಃ ॥ ೧೧ ॥

ಗ್ರಹನಕ್ಷತ್ರಚಂದ್ರಾರ್ಕಾಽವನಯುಸ್ತ್ವಂ ಮಹೌಷಧಂ ।
ವ್ಯಕ್ತಾಽವ್ಯಕ್ತೇಷು ಭೂತೇಷು ಧರ್ಮಾಽಧರ್ಮಪ್ರವರ್ತಕಃ ॥ ೧೨ ॥

ದರ್ಶನಾದೇವ ತೇ ದೇವ ಮುಕ್ತೋಽಹಂ ಬ್ರಹ್ಮಹತ್ಯಯಾ ।
ದಿವ್ಯಂ ಪಶ್ಯಾಮಿ ತೇ ರೂಪಂ ಪ್ರಕಾಶಂ ಜ್ಞಾನಚಕ್ಷುಷಾ । ೧೩ ॥

ಸ್ರವದ್ಭಿರಿವ ದೀಪ್ತಾಭಿಃ ಗೋಭಿರ್ಲೋಕಾನ್ ಪ್ರಕಾಶಯನ್ ।
ಧಾರಯನ್ ದೃಶ್ಯಸೇ ವಾಪಿ ವಿಭೂತಿಂ ಪಾರಮೇಶ್ವರೀಂ ॥ ೧೪ ॥

---

೧೧. ನೀನೇ ಬ್ರಹ್ಮನು. ಮಹಾದೇವ, ವಿಷ್ಣು, ಪ್ರಜಾಪತಿ, ವಾಯು, ಆಕಾಶ, ನೀರು, ಪೃಥಿವೀ, ಬೆಟ್ಟಗಳು, ಮತ್ತೂ ಸಾಗರಗಳೂ, ಇವೆಲ್ಲವೂ ನಿನ್ನ ಸ್ವರೂಪವೇ.

೧೨. ಗ್ರಹಗಳೂ, ನಕ್ಷತ್ರಗಳೂ, ಚಂದ್ರಸೂರ್ಯರೂ, ಭೂಮಿಯೂ ಸಹ ನಿನ್ನ ಸ್ವರೂಪವೇ ಆಗಿರುವುದು. ದೇವನೇ, ನೀನೇ ಮಹೌಷಧ ಸ್ವರೂಪನು. ಕಣ್ಣಿಗೆ ಗೋಚರವಾಗುವ, ಮತ್ತು ಗೋಚರವಾಗದೇ ಇರುವ ಸಕಲ ಭೂತ ಗಳಲ್ಲಿಯೂ ಅಡಗಿ, ಧರ್ಮ ಮತ್ತು ಅಧರ್ಮಕಾರ್ಯಗಳನ್ನು ಉಂಟುಮಾಡು ವವನೂ ನೀನೇ ಆಗಿರುವೆ.

೧೩. ಎಲೈ ಸೂರ್ಯದೇವನೇ, ನಿನ್ನ ದರ್ಶನದಿಂದಲೇ ನಾನು ಬ್ರಹ್ಮ ಹತ್ಯಾದೋಷದಿಂದ ಬಿಡಲ್ಪಟ್ಟಿರುವೆನು. ಈಗ ನಿನ್ನ ದಿವ್ಯವಾದ ಮತ್ತು ತೇಜೋ ಮಯವಾದ ರೂಪವನ್ನು ಜ್ಞಾನನೇತ್ರದಿಂದ ನೋಡುವೆನು.

೧೪. ಕೆಳಗೆ ಸುರಿಯುತ್ತಿರುವುವೋ ಎಂಬಂತೆ ಹೊಳೆಯುತ್ತಿರುವ ಕಿರಣಗಳಿಂದ ಮೂರು ಲೋಕಗಳನ್ನೂ ಪ್ರಕಾಶಪಡಿಸುತ್ತಾ ಪರಮೇಶ್ವರನ ಐಶ್ವರ್ಯವನ್ನು ಧರಿಸಿ ಬೆಳಗುತ್ತಾ ಜನಗಳ ಕಣ್ಣಿಗೆ ನೀನು ಕಾಣುತ್ತಿರುವೆ." ಎಂದು ಸ್ತೋತ್ರಮಾಡಿದನು.

ಏವಂ ಸ್ತುತಃ ಸ ದೇವೇಶಸ್ತುಷ್ಟಃ ಪ್ರೋವಾಚ ತಂ ಹರಂ ।
ಜ್ಞಾನಮೈಶ್ವರ್ಯಮೋಹೌ ಚ ಕ್ಷರಾಽಕ್ಷರವಿಕಲ್ಪನಾ ॥ ೧೫ ॥

ಮಹತ್ವಂ ಸೂಕ್ಷ್ಮತಾ ಚೈವ ಸರ್ವಭೂತೇಷ್ವವಸ್ಥಿತಿಃ ।
ಸರ್ವಂ ತತ್ತುಲ್ಯಮಸ್ಮಾಕಂ ಅಹಂ ಯತ್ರ ಭವಾನಪಿ ॥ ೧೬ ॥

ಬ್ರಾಹ್ಮೀ ಮಾಹೇಶ್ವರೀ ಚೈವ ವೈಷ್ಣವೀ ಚೈವ ಯಾ ತನುಃ ।
ಏಕಃ ಸ ಪುರುಷೋ ಭೂತ್ವಾ ಕಾರಣಾದುದ್ವಹಸ್ಥಿತೀಃ ॥ ೧೭ ॥

ಏತದ್ಜ್ಞಾತ್ವಾ ಮಹಾಜ್ಞಾನಂ ಜ್ಞಾತ್ವಾ ಮಾಮಾತ್ಮನಸ್ತನುಂ ।
ಅತ್ರೈವ ದೇವ ತಿಷ್ಠ ತ್ವಂ ವಿಮುಕ್ತೋ ಬ್ರಹ್ಮಹತ್ಯಯಾ ॥ ೧೮ ॥

---

೧೫-೧೬. ರುದ್ರನಿಂದ ಈ ರೀತಿ ಸ್ತೋತ್ರಮಾಡಲ್ಪಟ್ಟ ಸೂರ್ಯನು, ಸಂತೋಷಗೊಂಡು ಶಿವನನ್ನು ಕುರಿತು, ಜ್ಞಾನ, ಮೋಕ್ಷ, ನಿತ್ಯಾನಿತ್ಯವಿವೇಕ, ಮಹತ್ವ ಮತ್ತು ಸೂಕ್ಷ್ಮತೆ, ಮತ್ತೂ ಸಕಲ ಭೂತಗಳಲ್ಲಿ ನೆಲಸಿರುವಿಕೆ, ಇವೆಲ್ಲವೂ ನಮ್ಮಿಬ್ಬರಲ್ಲಿಯೂ ಸಮನಾಗಿದೆ. ಈ ವಿಷಯದಲ್ಲಿ " ನಾನೇ, ನೀನೆಂದೂ, ನೀನೇ ನಾನೆಂದೂ " ತಿಳಿಯುವವನಾಗು.

೧೭. ಬ್ರಾಹ್ಮೀ (ಬ್ರಹ್ಮಸಂಬಂಧವಾದುದು) ಮಾಹೇಶ್ವರೀ (ಶಿವನ ಸಂಬಂಧವಾದುದು) ವೈಷ್ಣವೀ (ವಿಷ್ಣುವಿಗೆ ಸೇರಿದುದು) ಈ ಮೂರು ಶರೀರಗಳೂ, ಒಬ್ಬನೇ ಆದ ಪರಮಪುರುಷನ ರೂಪಾಂತರವು. ಆದುದರಿಂದ ನೀನು ಆಯಾಯಾ ನಿಮಿತ್ತಗಳಿಗನುಸಾರವಾದ ಸ್ಥಿತಿಯನ್ನು ಹೊಂದುವವನಾಗು. ಎಂದು ಹೇಳಿ, ಅನಂತರ ಮುಂದೆ ಹೀಗೆ ಆಶ್ವಾಸನವಿತ್ತನು.

೧೮. ಎಲೈ ರುದ್ರನೇ, ಉತ್ತಮವಾದ ಜ್ಞಾನವನ್ನು ಸಂಪಾದಿಸಿ, ನನ್ನನ್ನು (ಸೂರ್ಯನನ್ನು) ಪರಮಾತ್ಮನ ಸ್ವರೂಪವೆಂದು ತಿಳಿದು, ಇಲ್ಲಿಯೇ ಬ್ರಹ್ಮ ಹತ್ಯಾ ಪಾಪ ನಿರ್ಮುಕ್ತನಾಗಿ ವಾಸಿಸು." ಎಂದು ಸೂರ್ಯ ಪರಮಾತ್ಮನು ಮಹಾ ದೇವನನ್ನು ಕುರಿತು ಹೇಳಿದನು.

ಅವಿಮುಕ್ತ ಇಹಾಗತ್ಯ ಮುಕ್ತಸ್ತ್ವಂ ಪಾಪ್ಮನಾ ಯಥಾ ।
ಅವಿಮುಕ್ತಂ ತಥಾ ನಾಮ್ನಾ ಕ್ಷೇತ್ರಮೇತದ್ಭವಿಷ್ಯತಿ ॥ ೧೯ ॥

ಯೇ ಕ್ರೋಶಪರಿಮಾಣೇ ತು ಹ್ಯಸ್ಮಿನ್ ಕ್ಷೇತ್ರೇ ನರಾಃ ಸ್ಥಿತಾಃ ।
ಆವಯೋಃ ಪ್ರಣಮಿಷ್ಯಂತಿ ತೇ ಭವಿಷ್ಯಂತ್ಯಕಲ್ಮಷಾಃ ॥ ೨೦ ॥

ಪಠನ್ ಶೃಣ್ವನ್ ತಥಾ ಚೇಮಂ ಪುಣ್ಯಂ ಸಂವಾದಮಾವಯೋಃ ।
ಕಿಲ್ಬಿಷಾಚ್ಚ ವಿಮುಚ್ಯೇತ ಮುಚ್ಯತೇ ಚ ಮಹಾಭಯಾತ್ ॥ ೨೧ ॥

ಚಕ್ಷುಃ ಪೀಡಾಂ ಮನಃ ಪೀಡಾಂ ಗ್ರಹಪೀಡಾಂ ತಥೈವ ಚ ।
ಶಮಯೇದೇಕಜಪ್ಯೇನ ದುಃಸ್ವಪ್ನಂ ಶಮಯೇತ್ತಥಾ ॥ ೨೨ ॥

ಇತಿ ಶ್ರೀ ಸಾಂಬಪುರಾಣೇ ಮಾಹೇಶ್ವರ ಸ್ತೋತ್ರಂ ನಾಮ
ಸಪ್ತದಶೋಽಧ್ಯಾಯಃ.

---

೧೯. ಮತ್ತು ನೀನು ಇಲ್ಲಿಗೆ ಬರುವಾಗ ಪಾಪ ವಿಮುಕ್ತನಾಗದೆ, ಬಂದ ಮೇಲೆ ಪಾಪದಿಂದ ದೂರನಾಗಿರುವುದರಿಂದ ಈ ಸ್ಥಳಕ್ಕೆ ಅವಿಮುಕ್ತ ಕ್ಷೇತ್ರವೆಂದು ಹೆಸರುಂಟಾಗುವುದು.

೨೦. ಯಾರು ಈ ಕ್ಷೇತ್ರದಿಂದ ಒಂದು ಕ್ರೋಶ (ಹರಿದಾರಿ) ಪರಿಮಾಣ ಭೂಭಾಗದಲ್ಲಿ ನೆಲಸಿರುವರೋ, ಯಾರು ನಮ್ಮಿಬ್ಬರಿಗೂ (ಸೂರ್ಯ ಮತ್ತು ದಿಂಡಿ ರೂಪಧಾರಿಯಾದ ರುದ್ರ.) ನಮಸ್ಕಾರ ಮಾಡುವರೋ ಅವರ ಎಲ್ಲಾ ಪಾಪಗಳೂ ನಾಶವಾಗಿ ಪರಿಶುದ್ಧರಾಗುವರು.

೨೧. ಯಾರು ನಮ್ಮಿಬ್ಬರ ಈ ಪರಸ್ಪರ ಸಂವಾದವನ್ನು ಓದುವರೋ, ಮತ್ತು ಕೇಳುವರೋ, ಅವರು ಸಕಲ ಪಾಪಗಳಿಂದಲೂ ಬಿಡಲ್ಪಟ್ಟವರಾಗಿ ಮಹಾ ಭಯಗಳಿಂದಲೂ ಪಾರಾಗುವರು.

೨೨. ಈ ಸಂವಾದವನ್ನು ಒಂದೇ ಸಲ ಪಾರಾಯಣ ಮಾಡುವುದರಿಂದ ನೇತ್ರ ಪೀಡೆಗಳೂ, ಮನಸ್ಸಿನ ಆತಂಕಗಳೂ, ಮತ್ತು ದುಷ್ಫಲಪ್ರದವಾದ ಕೆಟ್ಟ ಸ್ವಪ್ನವೂ ಸಹ ನಾಶವಾಗುವುದು, ಎಂದು ಪುನಃ ಸೂರ್ಯನು ಶಿವನಿಗೆ ಹೇಳಿದನು.

ಇಲ್ಲಿಗೆ ಸಾಂಬಪುರಾಣದ ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟಾದಶೋಽಧ್ಯಾಯಃ

---

॥ ನಾರದ ಉವಾಚ ॥

ಅತೋ ವ್ಯೋಮ ಪ್ರವಕ್ಷ್ಯಾಮಿ ಯತ್ರೋತ್ಪನ್ನಂ ಯಥಾ ಚ ಯತ್ ।
ಅಂಡೈರ್ಹಿರಣ್ಯಗರ್ಭಸ್ಯ ಯದಲ್ಪಂ ಗರ್ಭಸಂಜ್ಞಿತಂ ॥ ೧ ॥

ತತ್ರೋತ್ಪನ್ನಮಿದಂ ವ್ಯೋಮ ಕಪಾಲೇದ್ಯೋಮಹೀಮಯೇ ।
ಅಥೋಲ್ಬಣಃ ಕಾಂಚನಮಯಶ್ಚತುರಸ್ರೋಽಚ್ಛ್ರಿತೋ ಮಹಾನ್ ॥ ೨ ॥

---

## ಹದಿನೆಂಟನೆಯ ಅಧ್ಯಾಯ.

೧-೨. ಅಯ್ಯಾ ಸಾಂಬನೇ, ಇದುವರೆವಿಗೆ ನಿನಗೆ ಸೂರ್ಯನ ಅನುಚರರನ್ನೂ ಅವರ ರೂಪಾಂತರವನ್ನು ತಿಳಿಸಿದೆನು. ಇನ್ನು ಮುಂದೆ ಅಂತರಿಕ್ಷದ ಉತ್ಪತ್ತಿ ಮತ್ತು ಸ್ವರೂಪವೇನೆಂಬುದನ್ನು ಹೇಳುವೆನು ಕೇಳು ಎಂದು ನಾರದರು ಹೀಗೆಂದರು. ಹಿರಣ್ಯಗರ್ಭನ ಗರ್ಭಸ್ಥಾನವಾದ ಅಂಡದಲ್ಲಿನ ಎರಡು ಕಪಾಲಗಳೂ ಸ್ವರ್ಗ ಮತ್ತು ಭೂಮಿಯ ವಿಕಾರವಾದವುಗಳು. ಅದರಲ್ಲಿಯೇ ಈ ಅಂತರಿಕ್ಷವು ಹುಟ್ಟಿತು ಅನಂತರ;

ಪ್ರಕಾಶಮಾನವಾಗಿಯೂ, ನಾಲ್ಕುಕಡೆಗಳಲ್ಲಿಯೂ ಕಿರಣಗಳಿಂದ ಕೂಡಿದುದೂ, ಆಕಾರದಲ್ಲಿ ದೊಡ್ಡದೆನಿಸಿರುವುದೂ ಆಗಿರುವ ಸ್ವರ್ಣಮಯವಾದ ಮೇರು ಪರ್ವತವು ಆವಿರ್ಭವಿಸಿತು. ಅದಕ್ಕೆ ನಾಲ್ಕು ಶಿಖರಗಳಿರುವುವು. ಯಾವಾಗಲೂ ದೇವತೆಗಳಿಗೆ ಅದು ಆಶ್ರಯವಾಗಿದೆ.

ಉತ್ಪನ್ನಃ ಸ ಚತುಃಶೃಂಗೋ ಮೇರುರ್ದ್ರ್ಯೇವತ ಸಂಶ್ರಯಃ ।
ದಿಕ್ಪದ್ಮಪತ್ರಾ ಪೃಥಿವೀ ಮೇರುಸ್ತಸ್ಯಾಶ್ಚ ಕರ್ಣಿಕಾ ॥ ೩ ॥

ಯುಗಾಕ್ಷಕೋಟಿವಿನ್ಯಸ್ತಂ ತತ್ರ ಕೃತ್ವಾರಥಂ ರವಿಃ ।
ಸರ್ವೈರ್ದೇವೈಃ ಪರಿವೃತಃ ತಸ್ಯಯಾತಿ ಪ್ರದಕ್ಷಿಣಂ ॥ ೪ ॥

ತಸ್ಮಿನ್ಮೇರೌ ತ್ರಯಸ್ತ್ರಿಂಶದ್ವಸಂತೇ ಯಾಜ್ಞಿಕಾಃ ಸುರಾಃ ।
ರುದ್ರಾ ಏಕಾದಶ ಜ್ಞೇಯಾಃ ಆದಿತ್ಯಾ ದ್ವಾದಶೈವ ತು ॥ ೫ ॥

ತಥೈವ ವಸವೋಽಹ್ಯಷ್ಟಾವಶ್ವಿನೌ ಚೈವ ಯಾಜ್ಞಿಕೌ ।
ವಸೂನ್ ವದಂತಿ ಹಿ ಪಿತೄನ್ ರುದ್ರಸ್ತ್ವೇವ ಪಿತಾಮಹಾನ್ ॥ ೬ ॥

---

೩. ಭೂಮಿಯೆಂಬ ಕಮಲಕ್ಕೆ ಹತ್ತುದಿಕ್ಕುಗಳೆಂಬುದೆ ದಳಗಳು. ಮೇರು ಪರ್ವತವೇ ಆ ಪದ್ಮಪುಷ್ಪಕ್ಕೆ ಕುಸುಮವು ( ಹೂವಿನ ಮಧ್ಯದಲ್ಲಿರುವ ಮೃದುವಾದ ಭಾಗ) ಅಂದರೆ ಮೇರುಪರ್ವತವು ಭೂಮಿಯ ಮಧ್ಯದಲ್ಲಿರುವುದೆಂದು ತಿಳಿಯಬೇಕು.

೪. ಸೂರ್ಯನು ನೊಗ ಮತ್ತು ಅಚ್ಚು ಇವುಗಳಿಂದ ನಿರ್ಮಿತವಾಗಿರುವ ರಥದಲ್ಲಿ ಕುಳಿತು, ಸಕಲದೇವತೆಗಳಿಂದಲೂ ಸುತ್ತುವರಿಯಲ್ಪಟ್ಟವನಾಗಿ ಆ ಮೇರು ಪರ್ವತವನ್ನು ಪ್ರದಕ್ಷಿಣೆಮಾಡುತ್ತಾನೆ.

೫. ಆ ಮೇರುಪರ್ವತದಲ್ಲಿ, ಹನ್ನೊಂದುಜನ ರುದ್ರರೂ, ಹನ್ನೆರಡು ಮಂದಿ ಸೂರ್ಯರೂ, ಎಂಟುಮಂದಿ ವಸುಗಳೂ, ಇಬ್ಬರು ಅಶ್ವಿನೀ ದೇವತೆಗಳೂ, ಒಟ್ಟು ಮೂವತ್ತುಮೂರು ಮಂದಿ (33) ದೇವತೆಗಳು, ವಸಂತಕಾಲದಲ್ಲಿ ಯಜ್ಞ ಮಾಡುವವರೂ ನೆಲಸಿರುವರು.

೬-೭. ವಸುಗಳನ್ನು ಪಿತೃಗಳೆಂದೂ, ರುದ್ರರನ್ನು ಪಿತಾಮಹರೆಂದೂ, ಆದಿತ್ಯರನ್ನು ಪ್ರಪಿತಾಮಹರೆಂದೂ, ಮತ್ತೂ ಅಶ್ವಿನೀದೇವತೆಗಳನ್ನು ಪರಮಾತ್ಮನ ಶರೀರವೆಂದೂ ಹೇಳುವರು. ಋತು, ಸಂವತ್ಸರ ಇವುಗಳಿಗೆ ಸಂಬಂಧಪಟ್ಟ ಪಿತೃಗಳನ್ನೂ ಪುನಃ ಹೇಳುವೆನು ಕೇಳು ಎಂದು ನಾರದರು ಸಾಂಬನಿಗೆ ದೇವತಾ ಭೇದಗಳ ಸ್ವರೂಪವನ್ನು ವಿವರಿಸಿದರು.

ಪ್ರಪಿತಾಮಹಾಂಶ್ಚಾದಿತ್ಯಾನ್ ಅಶ್ವಿನಾವಾತ್ಮನಸ್ತನಂ ।
ಪಿತ್ರ್ಯಾನ್ ಭೂಯಃ ಪ್ರವಕ್ಷ್ಯಾಮಿ ಋತುಸಂವತ್ಸರಾರ್ತವಾನ್ ॥ ೭ ॥

ಅತೋ ಯಜ್ಞಭುಜಾಮೇಷಾಂ ಪೃಥಙ್ನಾಮಾನಿ ಮೇ ಶೃಣು ।
ಅಜೈಕಪಾದಹಿರ್ಬುಧ್ನ್ಯಃ ಸ್ರಷ್ಟಾ ರುದ್ರಶ್ಚ ವೀರ್ಯವಾನ್ ॥ ೮ ॥

ಹರಶ್ಚೈವಾಽಥ ಶರ್ವಶ್ಚ ತ್ರ್ಯಂಬಕಶ್ಚಾಪರಾಜಿತಃ ।
ವೃಷಾಕಪಿಶ್ಚ ಶಂಭುಶ್ಚ ಕಪರ್ದೀ ರೈವತಸ್ತಥಾ ॥ ೯ ॥

ಈಶ್ವರೋ ಭುವನಸ್ಯೇತಿ ರುದ್ರಾ ಏಕಾದಶ ಸ್ಮೃತಾಃ ।
ಆದಿತ್ಯಾನಾಂತು ನಾಮಾನಿ ವಿಷ್ಣುಃ ಶಕ್ರಶ್ಚ ವೀರ್ಯವಾನ್ ॥ ೧೦ ॥

ಅರ್ಯಮಾ ಚೈವ ಧಾತಾ ಚ ಮಿತ್ರೋಽಥ ವರುಣಸ್ತಥಾ ।
ವಿವಸ್ವಾನ್ ಸವಿತಾ ಚೈವ ಪೂಷಾ ತ್ವಷ್ಟಾ ತಥೈವ ಚ ॥ ೧೧ ॥

---

ಎಲೈ ಸಾಂಬನೇ, ಈಗ ಹಿಂದೆ ಹೇಳಿದ, ಪಿತೃ, ಪಿತಾಮಹ, ಪ್ರಪಿತಾಮಹ ಮತ್ತು ಅಶ್ವಿನೀ ದೇವತೆಗಳು ಇವರು ಯಜ್ಞಪುರುಷರೆಂದು ತಿಳಿಸಿದೆನು. ಈಗ ಇವರ ಪ್ರತ್ಯೇಕವಾದ ಹೆಸರುಗಳನ್ನು ವಿವರವಾಗಿ ತಿಳಿಸುವೆನು ಲಾಲಿಸು, ಎಂದು ನಾರದರು ಪುನಃ ಸಾಂಬನಿಗೆ ಹೇಳಿದರು.

೮-೯. ನಿತ್ಯನೂ ಒಂದು ಪಾದವುಳ್ಳವನೂ ಆದ ಅಹಿರ್ಬುಧ್ನ (1) ಮೊದಲನೆಯುವನು. ಸ್ರಷ್ಟಾ, ವೀರ್ಯವಂತನೆಂಬ ನಾಮಾಂತರಗಳುಳ್ಳ ರುದ್ರನು (2) ಎರಡನೆಯುವನು. ಹರ, (3) ಶರ್ವ (4) ತ್ರ್ಯಂಬಕ, (5) ಅಪರಾಜಿತ, (6) ವೃಷಾಕಪಿ, (7) ಶಂಭು, (8) ಕಪರ್ದೀ, (9) ರೈವತ (10) ಈಶ್ವರ, (11) ಮೊದಲಾದ ಈ ಹನ್ನೊಂದುಮಂದಿಯೂ ಜಗದ್ರಕ್ಷಕರಾದ ಏಕಾದಶ ರುದ್ರರೆನಿಸುವರು.

೧೦-೧೧. ಈಗ ದ್ವಾದಶಾದಿತ್ಯರ ಹೆಸರನ್ನು ಹೇಳುವೆನು ಕೇಳು. (1) ವಿಷ್ಣು, (2) ಶಕ್ರ, (3) ಅರ್ಯಮಾ, (4) ಧಾತಾ, (5) ಮಿತ್ರ, (6) ವರುಣ, (7) ವಿವಸ್ವಾನ್, (8) ಸವಿತಾ, (9) ಪೂಷಾ, (10) ತ್ವಷ್ಟಾ, (11) ಅಂಶುಮಾನ್, (12) ಭಗಃ, ಈ ರೀತಿ ಮಹಾ ತೇಜಸ್ವಿಗಳಾದ, ಇವರೇ ದ್ವಾದಶಾದಿತ್ಯರು.

ಅಂಶುರ್ಭಗಶ್ಚಾತಿತೇಜಾಃ ಆದಿತ್ಯಾ ದ್ವಾದಶ ಸ್ಮೃತಾಃ ।
ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾಽನಿಲೋಽನಲಃ ॥ ೧೨ ॥
ಪ್ರತ್ಯೂಷಶ್ಚ ಪ್ರಭಾತಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ।
ನಾಸತ್ಯಶ್ಚೈವ ದಸ್ರಶ್ಚ ಸ್ಮೃತೌ ದ್ವಾವಶ್ವಿನಾವಪಿ ।
ವಿಶ್ವೇದೇವಾನ್ ಪ್ರವಕ್ಷ್ಯಾಮಿ ನಾಮಭಿಸ್ತನ್ನಿಬೋಧ ಮೇ ॥ ೧೩ ॥
ಕ್ರತುರ್ದಕ್ಷೋ ವಸುಃ ಸತ್ಯಃ ಕಾಲಃ ಕಾಮೋ ಧುರಿಸ್ತಥಾ ।
ಲೋಚನಶ್ಚಾದ್ರ್ರವಶ್ಚೈವ ಪುರೂರವ ಇಮೇ ದಶ ॥ ೧೪ ॥
ವರ್ತಮಾನಾ ಇಮೇ ದೇವಾ ಶೃಣು ಮನ್ವಂತರೇ ಭವಾನ್ ।
ಯಾಮ್ಯಾಶ್ಚ ತುಷಿತಾಶ್ಚೈವ ತಥೈವ ವಶವರ್ತಿನಃ ॥ ೧೫ ॥
ಸತ್ಯಾಶ್ಚ ಭೂತರಜಸಃ ಸಾಧ್ಯಾಶ್ಚ ತದನಂತರಂ ।
ಉಕ್ತಮನ್ವಂತರೇಷ್ವೇವ ದೇವಾ ದ್ವಾದಶ ದ್ವಾದಶ ॥ ೧೬ ॥

---

೧೨. (1) ಧರ, [2] ಧ್ರುವ, [3] ಸೋಮ, [4] ಆಪಃ, [5] ಅನಿಲ, [6] ಅನಲ, [7] ಪ್ರತ್ಯೂಷ, [8] ಪ್ರಭಾತ, ಈ ಎಂಟುಜನಗಳೇ ಅಷ್ಟವಸುಗಳೆಂದು ಹೇಳಲ್ಪಡುತ್ತಾರೆ.

ನಾಸತ್ಯ ಮತ್ತು ದಸ್ರರೆಂಬುವರೇ ಇಬ್ಬರು ಅಶ್ವಿನೀ ದೇವತೆಗಳೆಂದು ತಿಳಿಯಬೇಕು. ಒಟ್ಟು ಮೇಲೆ ಹೇಳಿದ ಹದಿನೆಂಟು ದೇವತೆಗಳು ಯಜ್ಞ ಪುರುಷರು.

೧೩-೧೪. ಅಯ್ಯ ಸಾಂಬನೇ, ಈಗ ವಿಶ್ವೇದೇವತೆಗಳನ್ನೂ ಅವರ ಹೆಸರನ್ನೂ ತಿಳಿಸುವೆನು, ಕೇಳು. [1] ಕ್ರತು, [2] ದಕ್ಷ, [3] ವಸು [4] ಸತ್ಯ [5] ಕಾಲ, [6] ಕಾಮ, [7] ಧುರಿ, [8] ಲೋಚನ [9], ಆದ್ರ್ರವ, [10] ಪುರೂರವ, ಈ ಹತ್ತು ಜನಗಳೇ ವಿಶ್ವೇದೇವತೆಗಳು.

೧೫-೧೬. ಹಿಂದೆ ಹೇಳಿದ ಹತ್ತು ಜನ ವಿಶ್ವೇದೇವರುಗಳೂ ಈಗ ನಡೆಯುತ್ತಿರುವ ಮನ್ವಂತರದ ದೇವತೆಗಳು. ಕಳೆದ ಮನ್ವಂತರದಲ್ಲಿ [ಸ್ವಾಯಂಭುವ ಸ್ವಾರೋಚಿಷಾದಿ] ಯಾಮ್ಯಾಃ, ತುಷಿತಾ, ವಶವರ್ತಿನಃ, ಸತ್ಯಾಃ, ಭೂತರಜಸ್ಸು ಮತ್ತು ಸಾಧ್ಯಾಃ, ಈ ರೀತಿ ಈ ಆರುಮಂದಿಯೂ ಹನ್ನೆರಡು ಹನ್ನೆರಡು ನಾಮಾಂತರಗಳಿಂದ ಕೂಡಿದವರಾಗಿ, ವಿಶ್ವೇ ದೇವತೆಗಳೆನಿಸಿದ್ದರು.

ಪಾರಾವತಾಸ್ತಥಾತ್ವನ್ಯೇ ಸಾಧ್ಯಾಶ್ಚ ತುಷಿತೈಃ ಸಹ ।
ಸಾಧ್ಯಾನ್ ದೇವಾನ್ ಪ್ರವಕ್ಷ್ಯಾಮಿ ನಾಮಭಿಸ್ತಾನ್ನಿಬೋಧ ಮೇ ॥೧೭॥

ಮನೋಽನುಮಂತಾ ಪ್ರಾಣಶ್ಚ ನರೋ ನಾರಾಯಣ ಸ್ತಥಾ ।
ವೃತ್ತಿಸ್ತಪೋ ಹಯಶ್ಚೈವ ಹಂಸೋ ಧರ್ಮ್ಯಶ್ಚ ವೀರ್ಯವಾನ್ ॥ ೧೮ ॥

ವಿಭುಶ್ಚಾಽಪಿ ಪ್ರಭುಶ್ಚೈವ ಸಾಧ್ಯಾ ದ್ವಾದಶ ಕೀರ್ತಿತಾಃ ।
ಏವಂ ಯಜ್ಞಭುಜೋ ದೇವಾ ನಿತ್ಯಂ ಯಜ್ಞೇ ಪ್ರತಿಷ್ಠಿತಾಃ ॥ ೧೯ ॥

ಅತೀತಾನ್ ವರ್ತಮಾನಾಂಶ್ಚ ಪುನಶ್ಚೈವ ನಿಬೋಧ ಮೇ ।
ಆದಿತ್ಯಾ ಮರುತೋ ರುದ್ರಾಃ ಕಶ್ಯಪಸ್ಯಾತ್ಮಜಾಃ ಸ್ಮೃತಾಃ ॥ ೨೦ ॥

---

ಇವರಲ್ಲದೆ ಹಿಂದಿನ ಮನ್ವಂತರದಲ್ಲಿ ಪಾರಾವತರೆಂಬುವರೂ, ಸಾಧ್ಯರೂ, ತುಷಿತರೂ ವಿಶ್ವೇದೇವತೆಗಳಾಗಿದ್ದರೆಂದು ಕೆಲವರು ಹೇಳುವರು.

೧೭-೧೮. ಎಲೈ ಸಾಂಬನೆ, ಈಗ ಹನ್ನೆರಡು ಸಾಧ್ಯಾ ಎಂಬ ದೇವತೆಗಳನ್ನು ಹೇಳುವೆನು, ಕೇಳು. 1 ಮನೋಽನುಮಂತಾ, 2 ಪ್ರಾಣ, 3 ನರ, 4 ನಾರಾಯಣ, 5 ವೃತ್ತಿ 6 ತಪಃ, 7 ಹಯ 8 ಹಂಸ, 9 ಧರ್ಮ 10 ವೀರ್ಯವಾನ್, 11 ವಿಭು, 12 ಪ್ರಭು, ಇವರೇ ಸಾಧ್ಯನಾಮಕ ದೇವತೆಗಳು.

೧೯. ಹೀಗೆ ಮೇಲೆ ಹೇಳಿದ ಮೂವತ್ತುಮೂರು ದೇವತೆಗಳೂ ಯಜ್ಞಭಾಗವನ್ನು ಅನುಭವಿಸುತ್ತಾ ಯಜ್ಞದಲ್ಲಿಯೇ ಯಾವಾಗಲೂ ನಿರತರಾಗಿರುತ್ತಾರೆ.

೨೦. ಅಯ್ಯಾ ಸಾಂಬನೆ, ಪುನಃ ನಿನಗೆ, ಕಳೆದು ಹೋಗಿರುವವರು, [ಅಂದರೆ ಆಯಾಯ ಮನ್ವಂತರದಲ್ಲಿ ಅಧಿಕೃತರಾಗಿ ಈಗ ಆ ಮನ್ವಂತರವು ಮುಗಿದು ಹೋಗಿ ಬೇರೆ ಬಂದಿರುವುದರಿಂದ ಹಿಂದಿನವರಿಗೆ ಕಳೆದುಹೋಗಿರುವರೆಂದು ಹೇಳಿದೆ.] ಮತ್ತೂ ಈಗ ಇರುವವರೂ ಆಗಿರುವ ದೇವತೆಗಳ ವಿಷಯವನ್ನು ಹೇಳುವೆನು ಕೇಳು, ಹನ್ನೆರಡು ಮಂದಿ ಸೂರ್ಯರೂ, ಏಳುಜನ ವಾಯುಗಳೂ ಹನ್ನೊಂದು ಜನ ರುದ್ರರೂ, ಇವರೆಲ್ಲರೂ, ಕಶ್ಯಪ ಬ್ರಹ್ಮನ ಮಕ್ಕಳು.

ವಿಶ್ವೇ ಚ ವಸವಃ ಸಾಧ್ಯಾ ವಿಜ್ಞೇಯಾ ಧರ್ಮಸೂನವಃ ।
ಏವಂ ಧರ್ಮಸುತಃ ಸೋಮಃ ತೃತೀಯೋ ವಸುರುಚ್ಯತೇ ॥ ೨೧ ॥

ಧರ್ಮೋಽಪಿ ಬ್ರಹ್ಮಣಃ ಪುತ್ರಃ ಪುರಾಣೇ ವಿಶ್ರುತೋ ಮತಃ ।
ಅಥೇಂದ್ರಾಶ್ಚ ಮನೂಂಶ್ಚೈವ ನಾಮಭಿಸ್ತು ನಿಬೋಧ ಮೇ ॥ ೨೨ ॥

ಸ್ವಾಯಂಭುವೋ ಮನುಃ ಪೂರ್ವಂ ತತಃ ಸ್ವಾರೋಚಿಷಃ ಸ್ಮೃತಃ ।
ಔತ್ತಮಿಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ॥ ೨೩ ॥

---

೨೧. ವಿಶ್ವೇದೇವರುಗಳೂ [10 ಮಂದಿ], ಎಂಟು ಮಂದಿ ವಸುಗಳೂ ಹನ್ನೆರಡು ಮಂದಿ ಸಾಧ್ಯಾದೇವತೆಗಳೂ, ಇವರೆಲ್ಲರೂ, ಧರ್ಮಪುರುಷನ ಮಕ್ಕಳು. ಹೀಗೆಯೇ ಧರ್ಮಪುರುಷನ ಮಗನಾದ ಚಂದ್ರನೂ ಮೂರನೆಯ ವಸುವೆಂದು ಕರೆಯಲ್ಪಡುವನು.

ಹಿಂದೆ ಹೇಳಿದ ವಿಶ್ವೆದೇವತೆಗಳೇ ಮೊದಲಾದವರಿಗೆಲ್ಲಾ ತಂದೆಯಾಗಿರುವ ಧರ್ಮಪುರುಷನು ಬ್ರಹ್ಮನ ಮಗನು. ಇವನು ಪುರಾಣದಲ್ಲಿ ಪ್ರಸಿದ್ಧನಾಗಿರುವನು. ಎಂದು ತಿಳಿಯುಬೇಕು.

೨೨-೨೩. ಅಯ್ಯಾ, ಸಾಂಬನೆ, ಈಗ ಇಂದ್ರರ ಮತ್ತು ಮನುಗಳ ಹೆಸರುಗಳನ್ನೂ ಹೇಳುವೆನು ಕೇಳು. ಅದರಲ್ಲಿ ಮೊದಲು ಮನುಗಳ ಹೆಸರನ್ನು ಹೇಳುವೆನು ಎಂದು ಹೇಳಿ ಹೀಗೆಂದನು. ಸ್ವಾಯಂಭುವ ಮನುವು ಮೊದಲನೆಯುವನು. ಅವನ ನಂತರ ಸ್ವಾರೋಚಿಷ ಮನುವು, ಆಮೇಲೆ ಔತ್ತಮಿ ಎಂಬ ಮನುವು. ಅವನಾದಮೇಲೆ ತಾಮಸ ಮನುವು. ಇವನ ನಂತರ ರೈವತ ಮನುವು, ಅನಂತರ ಚಾಕ್ಷುಷ ಮನುವು ಈ ರೀತಿ (1) ಸ್ವಾಯಂಭುವ (2) ಸ್ವಾರೋಚಿಷ, (3) ಔತ್ತಮಿ (4) ತಾಮಸ (5) ರೈವತ (6) ಚಾಕ್ಷುಷ, ಈ ಆರು ಮಂದಿ ಮನುಗಳು ಕಳೆದು ಹೋಗಿರುವರು. ಈಗ ಏಳನೆಯವನಾದ ವೈವಸ್ವತ ಮನುವೇ ಇರುವನು. ಎಂದು ತಿಳಿಯುಬೇಕು.

ಇತ್ಯೇತೇ ಷಡತಿಕ್ರಾಂತಾಃ ಸಪ್ತಮಃ ಸಾಂಪ್ರತೋ ಮನುಃ ।
ವೈವಸ್ವತ ಇತಿ ಜ್ಞೇಯಃ ಭವಿಷ್ಯಾಃ ಸಪ್ತಚಾಽಪರೇ ॥ ೨೪ ॥

ತೇಷಾಮಾದ್ಯೋಽರ್ಕಸಾವರ್ಣಿಃ ಬ್ರಹ್ಮಸಾವರ್ಣಿರೇವ ಚ ।
ತಸ್ಮಾಚ್ಚ ಭವಸಾವರ್ಣಿರ್ಧರ್ಮಸಾವರ್ಣಿರಿತ್ಯತಃ ॥ ೨೫ ॥

ಪಂಚಮೋ ದಕ್ಷಸಾವರ್ಣಿಃ ಪಂಚಸಾವರ್ಣಯಃ ಸ್ಮೃತಾಃ ।
ರೌಚ್ಯೋ ಭೌತ್ಯಶ್ಚ ದ್ವಾವಂತ್ಯಾವಿತ್ಯೇತೇ ಮನವಃ ಸ್ಮೃತಾಃ ॥ ೨೬ ॥

ಇಂದ್ರಸ್ತು ವಿಷ್ಣುರ್ವಿಜ್ಞೇಯೋ ವಿಪಶ್ಚಿತ್ತದನಂತರಂ ।
ಅದ್ಭುತಸ್ತ್ರಿದಿವಶ್ಚೈವ ದಶಮಸ್ತ್ವಿಂದ್ರ ಉಚ್ಯತೇ ॥ ೨೭ ॥

ಸುಶಾಂತಿಶ್ಚ ಸುಕೀರ್ತಿಶ್ಚ ಋತುಧಾಮಾ ದಿವಸ್ಪತಿಃ ।
ಇತಿ ಭೂತಾ ಭವಿಷ್ಯಾಶ್ಚ ಜ್ಞೇಯಾ ಇಂದ್ರಾಶ್ಚತುರ್ದಶ ॥ ೨೮ ॥

---

೨೪-೨೬. ಇವರಲ್ಲದೆ ಇನ್ನೂ ಏಳುಜನ, ಭವಿಷ್ಯನ್ಮನುಗಳಲ್ಲಿ (ಮುಂದೆ ಬರುವ ಮನುಗಳು) ಮೊದಲನೆಯುವನು ಅರ್ಕಸಾವರ್ಣಿ ಎಂಬುವನು. ಎರಡನೆಯವನು ಬ್ರಹ್ಮಸಾವರ್ಣಿಯು. ಮೂರನೆಯವನು ಭವಸಾವರ್ಣಿಯು. ನಾಲ್ಕನೆಯುವನೇ ಧರ್ಮ ಸಾವರ್ಣಿಯು, ಐದನೆಯುವನು ದಕ್ಷಸಾವರ್ಣಿಯು, ಹೀಗೆ ಐದುಮಂದಿ ಸಾವರ್ಣಿಗಳಿರುವರು. ಇವರ ಜೊತೆಗೆ, ರೌತ್ಯ ಮತ್ತ ಭೌತ್ಯರೆಂಬುವರು ಸೇರಿ ಒಟ್ಟು ಏಳುಮಂದಿ ಭವಿಷ್ಯ ಮನುಗಳು ಎಂದು ಹೇಳಲ್ಪಡುವರು.

೨೭-೨೮. ಅಯ್ಯ ಸಾಂಬನೆ, ಇಲ್ಲಿಯುವರೆಗೆ ಮನುಗಳನ್ನೂ ಅವರ ಸಂಖ್ಯೆ ಮತ್ತೂ ಹೆಸರುಗಳನ್ನೂ ತಿಳಿಸಿರುವೆನು. ಇನ್ನು ಇಂದ್ರರ ನಾಮಾಂತರಗಳನ್ನು ಕೇಳೆಂದು ನಾರದರಿಂತೆಂದರು. ಇಂದ್ರ, ವಿಷ್ಣು, ವಿಪಶ್ಚಿತ್, ವಿಭು, ಪ್ರಭು, ಶಿಖೀ, ಮನೋಜವ, ಅದ್ಭುತ, ತ್ರಿದಿವ, ಇಂದ್ರ, ಸುಶಾಂತಿ, ಸುಕೀರ್ತಿ, ಋತುಧಾಮಾ, ದಿವಸ್ಪತಿ, ಇವರೇ ಹದಿನಾಲ್ಕು ಮಂದಿ ಇಂದ್ರರು. ಇವರಲ್ಲಿ ಕೆಲವರು ಅಧಿಕಾರದಿಂದ ನಿವೃತ್ತರಾಗಿರುವರು. ಕೆಲವರು ಮುಂದೆ ಬರುವರು.

ಕಶ್ಯಪೋಽತ್ರಿರ್ವಸಿಷ್ಠಶ್ಚ ಭರದ್ವಾಜೋಽಥ ಗೌತಮಃ ।
ವಿಶ್ವಾಮಿತ್ರೋ ಜಮದಗ್ನಿಶ್ಚ ಸಪ್ತೈತೇ ಋಷಯಃ ಸ್ಮೃತಾಃ ॥ ೨೯ ॥

ಅತಃ ಪರಂ ಪ್ರವಕ್ಷ್ಯಾಮಿ ಮರುತೋಽಗ್ನೀನ್ ಪಿತೄನ್ ಗ್ರಹಾನ್ ।
ಪ್ರವಹೋಽಥಾವಹಶ್ಚೈವೋದ್ವಹಸ್ತು ಸುವಹಸ್ತಥಾ ॥ ೩೦ ॥

ವಿವಾಹೋ ನಿವಹಶ್ಚೈವ ಪರಿವಾಹಸ್ತಥೈವ ಚ ।
ಅಂತರಿಕ್ಷಚರಾಹ್ಯೇತೇ ಪೃಥಙ್ಮಾರ್ಗವಿಚಾರಿಣಃ ॥ ೩೧ ॥

ಮಹೇಂದ್ರೇಣ ಪ್ರಭಿನ್ನಾಂಗಾ ಮರುತಃ ಸಪ್ತಕೀರ್ತಿತಾಃ ॥ ೩೨ ॥

ಶೌರಾಗ್ನಿಃ ಶುಚಿನಾಮಾ ತು ವೈದ್ಯುತಃ ಪಾವಕಃ ಸ್ಮೃತಃ ।
ನಿರ್ಮಥ್ಯ ಪರಮೋಽನ್ಯೋಗ್ನಿಸ್ತ್ರಯಃ ಪ್ರೋಕ್ತಾ ಇಮೇಽಗ್ನಯಃ॥ ೩೩ ॥

---

೨೯. (1) ಕಶ್ಯಪರು (2) ಅತ್ರಿಗಳು (3) ವಸಿಷ್ಠರು (4) ಭರದ್ವಾಜರು (5) ಗೌತಮರು (6) ವಿಶ್ವಾಮಿತ್ರರು (7) ಜಮದಗ್ನಿ ಈ ಏಳುಮಂದಿಯೇ ಸಪ್ತರ್ಷಿಗಳು. ಎಂದು ತಿಳಿಯಬೇಕು.

೩೦-೩೧. ಅಯ್ಯಾ ಸಾಂಬನೆ, ಇನ್ನು ಸಪ್ತವಾಯುಗಳು, ಅಗ್ನಿ ಮತ್ತೂ ಪಿತೃಗಳೂ, ಗ್ರಹಗಳೂ ಇವುಗಳ ವಿಷಯವನ್ನು ತಿಳಿಸುವೆನು. ಕೇಳು.

ಪ್ರವಹ, ಆವಹ, ಉದ್ವಹ, ಸುವಹ, ವಿವಾಹ, ಮತ್ತು ಪರಿವಾಹ ಎಂಬ ಹೆಸರುಳ್ಳ ಈ ಏಳು ಸಪ್ತಮರುತ್ತುಗಳು, ಇವೆಲ್ಲವೂ, ಅಂತರಿಕ್ಷದಲ್ಲಿ ಸಂಚರಿಸುತ್ತಾ, ಬೇರೆ ಬೇರೆ ಮಾರ್ಗಗಳಲ್ಲಿ ಸಂಚರಿಸುವುವು.

೩೨. ಮೊದಲು ವಾಯುವೊಂದೇ ಇದ್ದಿತು. ಅನಂತರ ಇಂದ್ರನು ಅದನ್ನು ಏಳು ರೂಪವಾಗಿ ವಿಭಾಗಮಾಡಿದುದರಿಂದ ಅವು ಪ್ರವಹವೇ ಮೊದಲಾದ ಏಳು ರೂಪಾಂತರಗಳನ್ನು ಹೊಂದಿ ಸಪ್ತ ಮರುತ್ತುಗಳೆಂದು ಕರೆಯಲ್ಪಡುತ್ತಿವೆ.

೩೩. ಸೂರ್ಯನ ಸಂಬಂಧವಾದ ಅಗ್ನಿಗೆ, ಶುಚಿ ಎಂದು ಹೆಸರು. ಮಿಂಚಿನಲ್ಲಿ ತೋರಿಬರುವ ಅಗ್ನಿಯನ್ನು ಪಾವಕನೆಂದು ಕರೆಯುವರು. ಅರಣಿ ಮುಂತಾದ ವೃಕ್ಷಗಳಿಂದ ಕಡೆದು ತೆಗೆಯುವ ಅಗ್ನಿಯು ಪರವಾಗ್ನಿ ಎನಿಸಿ ಕೊಳ್ಳುವುದು. ಈ ರೀತಿ ಅಗ್ನಿಯು ಮೂರು ವಿಧವಾಗಿರುವುದು.

ಅಗ್ನಿನಾಂ ಪುತ್ರಪೌತ್ರಾಶ್ಚ ಚತ್ವಾರಿಂಶತ್ತಥೈವ ಚ ।
ಮರುತಾಮಪಿ ಸರ್ವೇಷಾಂ ವಿಜ್ಞೇಯಾಃ ಸಪ್ತಸಪ್ತಕಾಃ ॥ ೩೪ ॥

ಏವಂ ಸಂವತ್ಸರೋಹ್ಯಗ್ನಿಃ ಋತವಸ್ತಸ್ಯ ಜಜ್ಞಿರೇ ।
ಋತುಪುತ್ರಾಸ್ತ್ವಾರ್ತವಾಃ ಪಂಚ ಇತಿ ಸರ್ಗಃ ಸನಾತನಃ ॥ ೩೫ ॥

ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ ।
ಇದ್ವತ್ಸರಃ ತೃತೀಯಶ್ಚ ಚತುರ್ಥಸ್ತ್ವನುವತ್ಸರಃ ॥ ೩೬ ॥

ಪಂಚಮೋ ವತ್ಸರಸ್ತೇಷಾಂ ವಾಯುಶ್ಚೈವಾಽನುವತ್ಸರಃ ।
ತೇಷು ಸಂವತ್ಸರೋಹ್ಯಗ್ನಿಃ ಸೂರ್ಯಸ್ತು ಪರಿವತ್ಸರಃ ॥ ೩೭ ॥

೩೪. ಮೇಲೆ ಹೇಳಿದ ಮೂರುಮಂದಿ ಅಗ್ನಿಗಳಿಗೆ ಮಕ್ಕಳೂ ಮತ್ತು ಮೊಮ್ಮಕ್ಕಳೂ ಒಟ್ಟುಸೇರಿ ನಲವತ್ತು (೪೦) ಜನ ಗಳಿರುವರು. ಎಲ್ಲಾ ಮರುತ್ತುಗಳಿಗೂ ಏಳೇಳು ಜನ ಮಕ್ಕಳಿರುವರು. ಅಂದರೆ ಮರುತ್ತುಗಳ ಮಕ್ಕಳು ನಲವತ್ತೊಂಬತ್ತು (49) ಜನರೆಂದು ತಿಳಿಯಬೇಕು.

೩೫. ಅಗ್ನಿಯೇ ಸಂವತ್ಸರಸ್ವರೂಪನು. ಋತುಗಳು ಅವನ ಮಕ್ಕಳು. (ಅಂದರೆ ವಸಂತಋತು, ಗ್ರೀಷ್ಮಋತು, ವರ್ಷಋತು, ಶರದೃತು, ಹೇಮಂತಋತು, ಮತ್ತು ಶಿಶಿರಋತು, ಈ ಆರು ಮಂದಿಯೂ ಅಗ್ನಿಸ್ವರೂಪನಾದ ಸಂವತ್ಸರನ ಮಕ್ಕಳು.) ಈ ಋತುಗಳಿಗೆ ಆರ್ತವರೆಂಬ ಐದು ಜನ ಮಕ್ಕಳುಗಳಿದ್ದಾರೆ; ಈ ರೀತಿ ಸೃಷ್ಟಿಕ್ರಮವು ಹಿಂದಿನಿಂದಲೂ ನಡೆದು ಬಂದಿದೆ.

೩೬. ಮೇಲೆ ಹೇಳಿದ ಐದು ಜನಗಳಲ್ಲಿ ಮೊದಲನೆಯವನು ಸಂವತ್ಸರನು. ಎರಡನೆಯವನು ಪರಿವತ್ಸರನು. ಮೂರನೆಯವನು ಇದ್ವತ್ಸರನು. ನಾಲ್ಕನೆಯವನು ಅನುವತ್ಸರನು, ಐದನೆಯವನೇ ವತ್ಸರನು ಎಂದು ತಿಳಿಯಬೇಕು. ಈ ಐದು ಮಂದಿಯಲ್ಲಿ ವಾಯುವೇ ಅನುವತ್ಸರನೆನಿಸುವನು.

೩೭-೩೮. ಅಗ್ನಿಯು ಸಂವತ್ಸರನೆಂದೂ, ಸೂರ್ಯನು ಪರಿವತ್ಸರನೆಂದೂ ಚಂದ್ರ (ಸೋಮ) ನು ಇಡ್ವತ್ಸರನೆಂದೂ, ವಾಯುವು ಅನುವತ್ಸರನೆಂದೂ

ಸೋಮ ಇಡ್ವತ್ಸರಸ್ತೇಷಾಂ ವಾಯುಶ್ಚೈವಾಽನುವತ್ಸರಃ ।
ರುದ್ರಸ್ತು ವತ್ಸರೋ ಜ್ಞೇಯೋ ಪಶ್ಚಾದ್ವಾಯೋರ್ಯುಗಾತ್ಮಕಾಃ ॥ ೩೮ ॥

ಆರ್ತವಾಃ ಪಿತರೋ ಜ್ಞೇಯಾಃ ಯೇ ಜಾತಾ ಋತುಸೂನವಃ ।
ಪಿತಾಮಹಾಸ್ತು ಋತವೋ ಮಾಸಂ ವೈ ಸೋಮಸೂನವಃ ॥ ೩೯ ॥

ಪ್ರಪಿತಾಮಹಾಶ್ಚ ಋತವಃ ಪಶ್ಚಾದ್ವಾ ಬ್ರಹ್ಮಣಃ ಸುತಾಃ ।
ಸೌಮ್ಯಾ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾಶ್ಚ ತೇ ತ್ರಿಧಾ ॥ ೪೦ ॥

ಆದಿತ್ಯಶ್ಚೈವ ಸೋಮಶ್ಚ ಲೋಹಿತಾಂಗೋ ಬುಧಸ್ತಥಾ ।
ಬೃಹಸ್ಪತಿಶ್ಚ ಶುಕ್ರಶ್ಚ ತಥಾ ಚೈವ ಶನೈಶ್ಚರಃ ॥ ೪೧ ॥
ರಾಹುಶ್ಚ ಧೂಮಕೇತುಶ್ಚ ಇತ್ಯೇತೇ ವೈ ನವಗ್ರಹಾಃ ।
ತ್ರೈಲೋಕ್ಯಸ್ಯ ತ್ವಿಮೇ ನಿತ್ಯಂ ಭಾವಾಽಭಾವನಿವೇದಕಾಃ ॥ ೪೨ ॥

---

ಹೇಳಲ್ಪಟ್ಟಿದೆ. (ಹಿಂದೆ ವಾಯುವು ಅನುವತ್ಸರನೆಂದು ತಿಳಿಸಿದ್ದರೂ ಒಟ್ಟು ಎಲ್ಲವನ್ನೂ ತಿಳಿಸುವಾಗ ಪುನಃ ಈಗಲೂ ಹೇಳಿದೆ) ರುದ್ರನು ವತ್ಸರನೆಂದೂ ತಿಳಿಯಬೇಕು. ಈ ಸಂವತ್ಸರಾದಿಗಳಿಂದ ತಿಳಿದುಬರುವ ಯುಗ ಸ್ವರೂಪವು ವಾಯುವಿಗೆ ಸಂಬಂಧಿಸಿದುದು.

೩೯. ಹಿಂದೆ ಋತುಗಳ ಮಕ್ಕಳೆಂದು ಹೇಳಿದ ಆರ್ತವರೇ ಪಿತೃಗಳು. ಋತುಗಳು, ಪಿತಾಮಹರು. ಮಾಸಗಳು ಚಂದ್ರನ ಮಕ್ಕಳು ಎಂದೂ ತಿಳಿಯಬೇಕು.

೪೦. ಋತುಗಳೇ ಪ್ರಪಿತಾಮಹಸ್ವರೂಪರು. ಹಾಗೆಯೇ, ಸೌಮ್ಯಾಃ, ಬರ್ಹಿಷದಃ, ಮತ್ತೂ ಅಗ್ನಿಷ್ವಾತ್ತಾಃ ಎಂಬ ಈ ಮೂವರೂ ಬ್ರಹ್ಮನ ಮಕ್ಕಳು.

೪೧-೪೨. 1. ಆದಿತ್ಯ (ಸೂರ್ಯ) 2. ಸೋಮ (ಚಂದ್ರ) 3. ಲೋಹಿತಾಂಗ (ಕುಜ) ಕೆಂಪುಬಣ್ಣವುಳ್ಳವನಾಗಿರುವುದರಿಂದ ಕುಜನಿಗೆ ಈ ಹೆಸರು ಬಂದಿದೆ. ಇವನನ್ನು ಅಂಗಾರಕನೆಂದೂ ಕರೆಯುವರು.) 4. ಬುಧ 5. ಬೃಹಸ್ಪತಿ (ಗುರು) 6. ಶುಕ್ರ 7. ಶನೈಶ್ಚರ 8. ರಾಹು, 9. ಕೇತು, ಇವರು ನವ ಗ್ರಹಗಳೆಂದು ಕರೆಯಲ್ಪಡುವರು. ಮೂರು ಲೋಕಗಳ ಶುಭಾಽಶುಭ ಫಲವನ್ನು ತಿಳಿಸುವ ಭಾವಽಭಾವ ಫಲಗಳೆಲ್ಲವೂ ಈ ನವಗ್ರಹಗಳ, ದೃಷ್ಟಿ, ಸ್ಥಿತಿ, ಮೊದಲಾದವುಗಳಿಂದಲೇ ತಿಳಿಯಲ್ಪಡುವುವು.

ಆದಿತ್ಯಶ್ಚೈವ ಸೋಮಶ್ಚ ಸ್ಮೃತೌ ದ್ವೌ ಮಂಡಲಗ್ರಹೌ ।
ರಾಹುಶ್ಛಾಯಾಗ್ರಹಶ್ಚೈವ ಶೇಷಾಸ್ತಾರಾಗ್ರಹಾಃ ಸ್ಮೃತಾಃ ॥ ೪೩ ॥

ನಕ್ಷತ್ರಾಧಿಪತಿಃ ಸೋಮೋ ಗ್ರಹರಾಜೋ ದಿವಾಕರಃ ।
ಪಠ್ಯತೇ ವಾಽಗ್ನಿರಾದಿತ್ಯ ಶ್ಚಾಮ್ಮಯಶ್ಚಂದ್ರಮಾಃ ಸ್ಮೃತಃ ॥ ೪೪ ॥

ಆದಿತ್ಯಃ ಪಠ್ಯತೇ ಬ್ರಹ್ಮಾ ವಿಷ್ಣುಸ್ತೇಷಾಂ ಚ ಚಂದ್ರಮಾಃ ।
ಮಾಹೇಶ್ವರಸ್ತು ವಿಜ್ಞೇಯಃ ತೃತೀಯೋಽಂಗಾರಕೋ ಗ್ರಹಃ ॥ ೪೫ ॥

ಕಶ್ಯಪಸ್ಯ ಸುತಃ ಸೂರ್ಯಃ ಸೋಮೋ ಧರ್ಮಸುತಃ ಸ್ಮೃತಃ ।
ದೇವಾಸುರಗುರೂ ದ್ವೌ ತು ಭಾನುಮಂತೌ ಮಹಾಗ್ರಹೌ ॥ ೪೬ ॥

---

೪೩. ಸೂರ್ಯಚಂದ್ರರು ಮಂಡಲಗ್ರಹಗಳು. ರಾಹುವು ಛಾಯಾಗ್ರಹವು. ಉಳಿದ ಕುಜನೇ-ಮೊದಲಾದ ಆರುಗ್ರಹಗಳಿಗೂ ತಾರಾಗ್ರಹಗಳೆಂದು ಹೆಸರು. (ಭೂಲೋಕಕ್ಕೆ ಕುಜಾದಿಗ್ರಹಗಳು ನಕ್ಷತ್ರದಂತೆ ಕಂಡುಬರುತ್ತವಾದ್ದರಿಂದ ಈ ಗ್ರಹಗಳಿಗೆ ತಾರಾಗ್ರಹಗಳೆಂದು ಹೆಸರು.)

೪೪. ಚಂದ್ರನು ನಕ್ಷತ್ರಗಳಿಗೆಲ್ಲಾ ಅಧಿಪತಿಯೆನಿಸುವನು. ಸೂರ್ಯನು ಗ್ರಹಗಳಿಗೆಲ್ಲಾ ಒಡೆಯನು. ಚಂದ್ರನು ಜಲಮಯನಾಗಿರುವನು.

೪೫. ಸೂರ್ಯಗ್ರಹವನ್ನು ಬ್ರಹ್ಮನೆಂದೂ, ಚಂದ್ರಗ್ರಹವನ್ನು ವಿಷ್ಣುವೆಂದೂ ಮೂರನೆಯ ಗ್ರಹವಾದ ಅಂಗಾರಕನನ್ನು ಮಹೇಶ್ವರನೆಂದೂ, ಹೇಳುವರು.

೪೬. ಸೂರ್ಯನು ಕಶ್ಯಪಬ್ರಹ್ಮನ ಮಗನು. ಚಂದ್ರನು ಧರ್ಮಪುರುಷನ ಪುತ್ರನು. ಬೃಹಸ್ಪತಿಯು ದೇವತೆಗಳ ಗುರುವು. ಶುಕ್ರನು ರಾಕ್ಷಸರಿಗೆ ಪೂಜ್ಯನು. ಈ ಇಬ್ಬರೂ ಮಹಾತೇಜಸ್ವಿಗಳು. ಇವರಿಬ್ಬರೂ ಬ್ರಹ್ಮನ ಮಕ್ಕಳು ಎಂದು ತಿಳಿಯಬೇಕು.

ಪ್ರಜಾಪತಿಸುತಾವೇತಾವುಭೌ ಶುಕ್ರಬೃಹಸ್ಪತೀ ।
ಬುಧಃ ಸೋಮಾತ್ಮಜಃ ಶ್ರೀಮಾನ್ ಸೂರ್ಯಪುತ್ರಃ ಶನೈಶ್ಚರಃ ॥ ೪೭ ॥

ಸೈಂಹಿಕೇಯಃ ಸ್ಮೃತೋ ರಾಹುಃ ಕೇತುಶ್ಚ ಬ್ರಹ್ಮಣಃ ಸುತಃ ।
ಸರ್ವೇಷಾಂ ತು ಗ್ರಹಾಣಾಂ ವೈ ಹ್ಯಧಸ್ತಾಚ್ಚರತೇ ರವಿಃ ॥ ೪೮ ॥

ರವೇರೂರ್ಧ್ವಂ ಸ್ಥಿತಃ ಸೋಮಃ ಸೋಮಾನ್ನಕ್ಷತ್ರಮಂಡಲಂ ।
ನಕ್ಷತ್ರೇಭ್ಯೋ ಬುಧಸ್ತೂರ್ಧ್ವಂ ಬುಧಾದೂರ್ಧ್ವಂ ತು ಭಾರ್ಗವಃ ॥ ೪೯ ॥

ತಸ್ಮಾದಂಗಾರಕಶ್ಚೋರ್ಧ್ವಂ ತಸ್ಮಾಚ್ಚೋರ್ಧ್ವಂ ಬೃಹಸ್ಪತಿಃ ।
ತಸ್ಮಾಚ್ಛನೈಶ್ಚರಶ್ಚೋರ್ಧ್ವಂ ತಸ್ಯೋರ್ಧ್ವಂ ಋಷಿಮಂಡಲಂ ॥ ೫೦ ॥

---

೪೭-೪೮. ಬುಧನು ಸೋಮನ (ಚಂದ್ರನ) ಮಗನು. ಸಂಪದ್ಯುಕ್ತನಾದ ಶನೈಶ್ಚರನೇ ಸೂರ್ಯಪುತ್ರನು. ರಾಹುವು ಸಿಂಹಿಕೆಯ ಮಗನು. ಮತ್ತು ಕೇತುವು ಬ್ರಹ್ಮನ ಮಗನು, ಎಂದು ತಿಳಿಯಬೇಕು. ಎಲ್ಲಾ ಗ್ರಹಗಳಿಗಿಂತಲೂ ಅಧೋ ಭಾಗದಲ್ಲಿ ಸೂರ್ಯನು ಸಂಚರಿಸುವನು. ಇನ್ನು ಮುಂದೆ ಗ್ರಹಮಂಡಲದ ಸ್ಥಿತಿಗಳನ್ನು ತಿಳಿಸುವೆನು:—

೪೯. ಸೂರ್ಯಮಂಡಲಕ್ಕಿಂತಲೂ ಮೇಲುಗಡೆ ಚಂದ್ರ ಮಂಡಲವಿರುವುದು. ನಕ್ಷತ್ರ ಮಂಡಲವು, ಚಂದ್ರಮಂಡಲಕ್ಕಿಂತಲೂ ಮೇಲುಗಡೆ ಇರುವುದು. ಬುಧನು ನಕ್ಷತ್ರಮಂಡಲಕ್ಕಿಂತಲೂ ಎತ್ತರದಲ್ಲಿರುವನು. ಶುಕ್ರನು ಬುಧನಿಗಿಂತ ಎತ್ತರದಲ್ಲಿರುವನು.

೫೦. ಅಂಗಾರಕನು ಶುಕ್ರನಿಗಿಂತಲೂ ಮೇಲುಭಾಗದಲ್ಲಿರುವನು. ಅಂಗಾರಕನಿಗಿಂತಲೂ ಬೃಹಸ್ಪತಿಯು ಎತ್ತರದಲ್ಲಿರುವನು. ಶನೈಶ್ಚರನು ಬೃಹಸ್ಪತಿಗಿಂತಲೂ ದೂರದಲ್ಲಿರುವನು. ಋಷಿಮಂಡಲವು (ಸಪ್ತರ್ಷಿಮಂಡಲವು) ಇವನಿಗಿಂತಲೂ ಎತ್ತರದಲ್ಲಿರುವುದು. ಧ್ರುವ ಮಂಡಲವು ಋಷಿಮಂಡಲಕ್ಕಿಂತಲೂ ಅತ್ಯಂತ ಎತ್ತರದಲ್ಲಿರುವುದೆಂದು ತಿಳಿಯಬೇಕು.

ಋಷಿಭ್ಯಶ್ಚ ಧ್ರುವಸ್ಯೋರ್ಧ್ವಮಾಸನಂ ಕಥಿತಂ ಬುಧೈಃ ।
ಆದಿತ್ಯನಿಲಯೋ ರಾಹುಃ ಕದಾಚಿತ್ಸೋಮಮಾರ್ಗಗಃ ॥ ೫೧ ॥

ಸೂರ್ಯಮಂಡಲಸಂಸ್ಥಸ್ತು ಕೇತುರ್ನಿತ್ಯಂ ಪ್ರಸರ್ಪತಿ ।
ನವಯೋಜನಸಾಹಸ್ರೋ ವಿಸ್ತಾರೋ ಭಾಸ್ಕರಸ್ಯ ತು ॥ ೫೨ ॥

ವಿಸ್ತಾರಾತ್ತ್ರಿಗುಣಂ ಚಾಽಸ್ಯ ಪರಿಣಾಹೇನ ಮಂಡಲಂ ।
ದ್ವಿಗುಣಃ ಸೂರ್ಯವಿಸ್ತಾರಾತ್ ವಿಸ್ತಾರಃ ಶಶಿನಃ ಸ್ಮೃತಂ ॥ ೫೩ ॥

ತ್ರಿಗುಣಂ ಮಂಡಲಂ ಚಾಽಸ್ಯ ಯಥೈವ ಸವಿತುಸ್ತಥಾ ।
ಚಂದ್ರತಃ ಷೋಡಶೋ ಭಾಗೋ ಭಾರ್ಗವಸ್ಯ ವಿಧೀಯತೇ ॥ ೫೪ ॥

---

೫೧. ರಾಹುವು ಯಾವಾಗಲೂ ಸೂರ್ಯನ ಸಮೀಪದಲ್ಲಿಯೇ ಇರುವುದು. ಒಂದೊಂದುಸಾರಿ ಚಂದ್ರನ ಮಾರ್ಗಕ್ಕೆ ಹೋಗುವುದೂ ಉಂಟು. (ಇಲ್ಲಿ ಹೇಳಿರುವ ಗ್ರಹಕಕ್ಷಾಕ್ರಮವು ಖಗೋಳ ಶಾಸ್ತ್ರಕ್ಕೆ ಕೆಲವಂಶಗಳಲ್ಲಿ ವಿರುದ್ಧವಾಗಿ ಕಂಡುಬರುತ್ತಿರುವುದು.)

೫೨. ಕೇತುವು ಯಾವಾಗಲೂ ಸೂರ್ಯ ಮಂಡಲದಲ್ಲಿಯೇ ಇರುತ್ತಾ ಅಲ್ಲಿಯೇ ಸಂಚರಿಸುವನು. ಸೂರ್ಯ ಮಂಡಲದ ವ್ಯಾಸವು ಒಂಬತ್ತುಸಾವಿರ (9,000) ಯೋಜನಗಳು.

೫೩. ಸೂರ್ಯಮಂಡಲದ ವಿಸ್ತಾರವು ಅಂದರೆ ಸುತ್ತಳತೆಯು ಸೂರ್ಯನ ವ್ಯಾಸಕ್ಕಿಂತ ಮೂರುಪಾಲು ದೊಡ್ಡದು. ಅಂದರೆ (9,000×3) = (27,000) ಇಪ್ಪತ್ತೇಳುಸಾವಿರ ಯೋಜನಗಳೆಂದು ತಿಳಿಯಬೇಕು ಚಂದ್ರನ ವ್ಯಾಸವು ಸೂರ್ಯನ ವ್ಯಾಸಕ್ಕಿಂತ ಎರಡುಪಾಲು ದೊಡ್ಡದಾಗಿದೆ. ಅಂದರೆ (9,000×2) = (18,000) ಹದಿನೆಂಟುಸಾವಿರ ಯೋಜನಗಳು.

೫೪. ಚಂದ್ರಮಂಡಲದ ವಿಸ್ತಾರವೂ ಸೂರ್ಯಮಂಡಲದ ವಿಸ್ತಾರದಂತೆಯೇ ತನ್ನ ವ್ಯಾಸದ ಮೂರರಷ್ಟಿರುವುದು. ಅಂದರೆ ಚಂದ್ರಮಂಡಲದವಿಸ್ತಾರ 18,000 ಯೋಜನಗಳು ಇದರ ಮೂರರಷ್ಟೆಂದರೆ (18,000×3) = (54,000) ಐವತ್ತುನಾಲ್ಕುಸಾವಿರ ಯೋಜನಗಳೆಂದು ತಿಳಿಯಬೇಕು. ಚಂದ್ರನ ಹದಿನಾರನೆಯ ಒಂದುಭಾಗ ವಿಸ್ತಾರವು ಶುಕ್ರನದು. ಅಂದರೆ (18,000 ÷ 16) = (1,125) ಸಾವಿರದ ನೂರ ಇಪ್ಪತ್ತೈದುಯೋಜನಗಳು.

ಭಾರ್ಗವಾತ್ ಪಾದಹೀನೋ ವೈ ವಿಜ್ಞೇಯಸ್ತು ಬೃಹಸ್ಪತಿಃ ।
ಬೃಹಸ್ಪತೇಃ ಪಾದಹೀನೌ ಕುಜಸೂರ್ಯಾವುದಾಹೃತೌ ॥ ೫೫ ॥

ವಿಸ್ತಾರಮಂಡಲಾಭ್ಯಾಂ ಚ ಪಾದಹೀನಸ್ತಯೋರ್ಬುಧಃ ।
ಬುಧತುಲ್ಯಾನಿ ಋಕ್ಷಾಣಿ ಸರ್ವಹ್ರಸ್ವಾನಿ ಯಾನಿ ತು ॥ ೫೬ ॥

ಯೋಜನಾರ್ಧಪ್ರಮಾಣಾನಿ ತೇಭ್ಯೋ ಹ್ರಸ್ವಂ ನ ವಿದ್ಯತೇ ।
ರಾಹುಃ ಸೂರ್ಯಪ್ರಮಾಣಸ್ತು ಕದಾಚಿತ್ತೋಽಧಿ ಸಮ್ಮಿತಃ ॥ ೫೭ ॥

---

೫೫. ಅಂಗಾರಕ ಮತ್ತು ಶನೈಶ್ಚರ ಇವರು ಬೃಹಸ್ಪತಿಗಿಂತಲೂ ನಾಲ್ಕನೆಯ ಒಂದುಭಾಗ ಕಡಿಮೆ ಪ್ರಮಾಣವುಳ್ಳವರು.

ಬುಧನು, ಅಂಗಾರಕ ಮತ್ತು ಶನೈಶ್ಚರರಿಗಿಂತಲೂ, ತನ್ನ ವ್ಯಾಸದಲ್ಲಿಯೂ ಮತ್ತು ತನ್ನ ಮಂಡಲದ ವಿಸ್ತಾರದಲ್ಲಿಯೂ ನಾಲ್ಕನೇ ಒಂದುಪಾಲು ಕಡಿಮೆ ಪ್ರಮಾಣವುಳ್ಳವನು.

೫೬. ನಕ್ಷತ್ರಗಳು ಸಾಮಾನ್ಯವಾಗಿ ಬುಧನಿಗೆ ಸಮನಾದ ಪ್ರಮಾಣವುಳ್ಳವುಗಳು. ಎಲ್ಲದಕ್ಕಿಂತಲೂ ಚಿಕ್ಕನಕ್ಷತ್ರಗಳೆಂದರೆ ಅರ್ಧಯೋಜನ ಪ್ರಮಾಣಗಳುಳ್ಳವುಗಳೆಂದು ತಿಳಿಯಬೇಕು. ಇದಕ್ಕಿಂತಲೂ ಕಡಿಮೆಯಪ್ರಮಾಣದ ನಕ್ಷತ್ರಗಳೇ ಇಲ್ಲ.

೫೭. ರಾಹುವು ಸೂರ್ಯನ ಪ್ರಮಾಣಕ್ಕೆ ಸಮನಾದ ಪ್ರಮಾಣದಿಂದಿರುವನು. ಇವನು ಛಾಯಾಗ್ರಹವಾದುದರಿಂದಲೂ ಯಾವಾಗಲೂ ಸೂರ್ಯಮಂಡಲದಲ್ಲಿಯೇ ವಾಸಿಸುವುದರಿಂದಲೂ ಇವನಿಗೆ ಬೇರೆ ಪ್ರಮಾಣವಿಲ್ಲವೆಂದೂ ಸೂರ್ಯನ ಪ್ರಮಾಣದಲ್ಲಿಯೇ ಐಕ್ಯವೆಂದೂ ಕೆಲವರು ಹೇಳುವರು.

ಕೇತುವೂ ಛಾಯಾಗ್ರಹವೇ ಆಗಿರುವುದರಿಂದ ಇವನಿಗೂ ನಿಯಮವಾಗಿ ಪ್ರಮಾಣಗಳನ್ನು ಹೇಳಲು ಸಾಧ್ಯವಿಲ್ಲವೆಂದೇ ತಿಳಿಯಬೇಕು.

ತಸ್ಮಾದ್ಗ್ರಹಪ್ರಮಾಣಸ್ತು ಕೇತುಸ್ತ್ವನಿಯತಃ ಸ್ಮೃತಃ ।
ಭೂರ್ಲೋಕೋಽಥ ಭುವರ್ಲೋಕಸ್ಸ್ವರ್ಲೋಕಸ್ತದನಂತರಂ ।
ಮಹರ್ಜನಸ್ತಪಸ್ಸತ್ಯಂ ಸಪ್ತಲೋಕಾಃ ಪ್ರಕೀರ್ತಿತಾಃ ॥ ೫೮ ॥

ಭೂರೂಪಂ ಪಾರ್ಥಿವೋ ಲೋಕೋ ಹ್ಯಂತರಿಕ್ಷಂ ಭುವಃ ಸ್ಮೃತಃ ।
ಸ್ವರಿತ್ಯೇವಂ ದಿವಂ ವಿದ್ಯಾತ್ ಶೇಷಾಸ್ತೂರ್ಧ್ವಂ ಯಥಾಕ್ರಮಮ್ ॥ ೫೯ ॥

ಭೂತಸ್ಯಾಧಿಪತಿಶ್ಚಾಗ್ನಿಃ ತತೋ ಭೂತಪತಿಸ್ತು ಸಃ ।
ನಭಸೋಽಧಿಪತಿರ್ವಾಯುಃ ತೇನ ವಾಯುರ್ನಭಸ್ಪತಿಃ ॥ ೬೦ ॥

ದಿವಸ್ತು ಸೂರ್ಯೋಽಧಿಪತಿಃ ತೇನ ಸೂರ್ಯೋ ದಿವಸ್ಪತಿಃ ।
ಗಂಧರ್ವಾಽಪ್ಸರಸಶ್ಚೈವ ಗುಹ್ಯಕಾಃ ಸಹ ರಾಕ್ಷಸೈಃ ।
ಭೂರ್ಲೋಕವಾಸಿನಃ ಸರ್ವೇಽಪ್ಯಂತರಿಕ್ಷಚರಾನ್ ಶೃಣು ॥ ೬೧ ॥

---

೫೮. ಭೂಲೋಕ, (1) ಭುವರ್ಲೋಕ, (2) ಸ್ವರ್ಲೋಕ, ಅಥವಾ ಸ್ವರ್ಗಲೋಕ (3) ಮಹರ್ಲೋಕ, (4) ಜನಲೋಕ, (5) ತಪೋಲೋಕ (6) ಮತ್ತು ಸತ್ಯಲೋಕ (7) ಇವುಗಳೇ ಸಪ್ತಲೋಕಗಳೆನಿಸುವುವು.

೫೯. ಪಾರ್ಥಿವ ಲೋಕವೇ ಭೂಲೋಕವೆನಿಸುವುದು. ಅಂತರಿಕ್ಷವನ್ನು ಭುವರ್ಲೋಕವೆಂದು ತಿಳಿಯಬೇಕು. ಸ್ವರ್ಗಲೋಕವನ್ನೇ ಸ್ವರ್ಲೋಕವೆನ್ನುವರು. ಉಳಿದ ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕ ಈ ನಾಲ್ಕು ಊರ್ಧ್ವ ಲೋಕಗಳೆನಿಸಿವೆ.

೬೦. ಅಗ್ನಿಯು ಪಂಚಭೂತಗಳಿಗೂ (ಪೃಥಿವಿ, ಅಪ್, ತೇಜಸ್ಸು, ವಾಯು, ಮತ್ತು ಆಕಾಶ, ಇವೇ ಪಂಚಭೂತಗಳು) ಒಡೆಯನಾದುದರಿಂದ, ಅವನಿಗೆ ಭೂತಪತಿಯೆಂದು ಹೆಸರು ಬಂದಿತು. ವಾಯುವು ಅಂತರಿಕ್ಷಕ್ಕೆ ಅಧಿಪತಿಯಾದುದರಿಂದ, ಅವನು ನಭಸ್ಪತಿ ಎನಿಸಿದನು. ಸ್ವರ್ಗಕ್ಕೆ ಅಧಿಪತಿಯು ಸೂರ್ಯನೇ ಆದುದರಿಂದ, ಸೂರ್ಯನಿಗೆ, ದಿವಸ್ಪತಿ, ಎಂದೂ ಹೆಸರಾಯಿತು.

೬೧-೬೩. ಗಂಧರ್ವರೂ, ಅಪ್ಸರ ಸ್ತ್ರೀಯರುಗಳೂ, ಗುಹ್ಯಕರೂ, ಮತ್ತೂ ರಾಕ್ಷಸರೂ ಸಹ ಭೂಲೋಕದಲ್ಲಿಯೇ ವಾಸಿಸುವರು. ಸಪ್ತ ಮರುತ್ತುಗಳೂ

ಮರುತಃ ಸಪ್ತಭಿಃ ಸ್ಕಂಧೈಃ ರುದ್ರಾಸ್ತತ್ರೈವ ಚಾಶ್ವಿನೌ ।
ಆದಿತ್ಯಾ ವಸವಃ ಸ್ವರ್ಗೇ ತತ್ರೈವ ಚ ಗವಾಂ ಗಣಃ ॥ ೬೨ ॥

ಚತುರ್ಥೇ ಚ ಮಹರ್ಲೋಕೇ ತಿಷ್ಠಂತ್ಯಾಕಲ್ಪವಾಸಿನಃ ।
ಪ್ರಜಾನಾಂ ಪತಿಭಿಃ ಸರ್ವೈಃ ಸೇವ್ಯತೇ ಪಂಚಮೋ ಜನಃ ॥ ೬೩ ॥

ಮನುಃ ಸನತ್ಕುಮಾರಾದ್ಯಾ ವೈರಾಜಶ್ಚ ತಪಃಸ್ಥಿತಾಃ ।
ಸತ್ಯ ಸ್ತು ಸಪ್ತಮೋ ಲೋಕೋ ಹ್ಯಪುನರ್ಮಾರ್ಗಗತಾನಿಮಾನ್ ॥ ೬೪ ॥

---

(ವಾಯುಗಳೂ), ಏಕಾದಶ ರುದ್ರರೂ, ಮತ್ತು ಅಶ್ವಿನೀ ದೇವತೆಗಳೂ ಸಹ ಅಂತರಿಕ್ಷದಲ್ಲಿ ಸಂಚರಿಸುವರು. ದ್ವಾದಶಾದಿತ್ಯರೂ, ಅಷ್ಟವಸುಗಳೂ, ಕಾಮ ಧೇನುವೇ ಮೊದಲಾದ ಹಸುಗಳೂ, ದೇವತೆಗಳ ಗಣಗಳೂ ಸಹ ಸ್ವರ್ಗಲೋಕದಲ್ಲಿ ವಾಸಿಸುವರು.

೬೩. ನಾಲ್ಕನೆಯದಾದ ಮಹರ್ಲೋಕದಲ್ಲಿ ಕಲ್ಪದ ಕೊನೆಯುವರಿಗೂ ಜೀವಿಸಿರುವ ಜನಗಳು ವಾಸಿಸುವರು. ಐದನೆಯದಾದ ಜನಲೋಕದಲ್ಲಿ ಬ್ರಹ್ಮರುಗಳು ಅಂದರೆ, ಭೃಗು, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು ಮರೀಚಿ, ದಕ್ಷ, ವಸಿಷ್ಠ ಮತ್ತು ಕಶ್ಯಪ, ಈ ಹತ್ತುಜನಗಳೂ (ಬ್ರಹ್ಮರುಗಳು.) ವಾಸಿಸುವರು.

೬೪. ತಪೋಲೋಕದಲ್ಲಿ, ಸ್ವಾಯಂಭುವನೇ ಮೊದಲಾದ ಏಳು ಮನುಗಳು, ಸನತ್ಕುಮಾರ, ಸನತ್ಸುಜಾತ, ಮೊದಲಾದ ವೈರಾಗ್ಯಶಾಲಿಗಳೂ ವಾಸಿಸುವರು. ಏಳನೆಯದಾದ ಸತ್ಯಲೋಕದಲ್ಲಿ, ತಪೋಲೋಕದಲ್ಲಿ ವಾಸಿಸುತ್ತಾ ಒಳ್ಳೆಯ ಮಾರ್ಗದಲ್ಲಿ ನಡೆಯುತ್ತಿರುವವರು ವಾಸಮಾಡುವರೆಂದು ತಿಳಿಯಬೇಕು.

ಈ ಏಳನೆಯದಾದ ಸತ್ಯಲೋಕವೇ ಬ್ರಹ್ಮಲೋಕವೆಂದು ಪ್ರಸಿದ್ಧಿಪಡೆದಿದೆ. ಈ ಲೋಕದಲ್ಲಿ ಯಾವ ಪ್ರತಿಬಂಧಕಗಳೂ ಇಲ್ಲದೆ ನಿತ್ಯಶಾಂತಿ ಸುಖಗಳು ಯಾವಾಗಲೂ ಪರಮಾತ್ಮನ ಸಾಮೀಪ್ಯದಿಂದ ದೊರೆಯುವುವು.

ಬ್ರಹ್ಮಲೋಕಃ ಸಮಾಖ್ಯಾತೋ ಹ್ಯಪ್ರತೀಘಾತಲಕ್ಷಣಃ ।
ಮಹೀತಲಾತ್ ಸಹಸ್ರಾಣಾಂ ಶತಾದೂರ್ಧ್ವಂ ದಿವಾಕರಃ ॥ ೬೫ ॥

ದಶ ತಾನಿ ಧ್ರುವಂ ಯಾವತ್ ದ್ವಿಗುಣಾದ್ದ್ವಿಗುಣೋತ್ತರೈಃ ।
ದಶಯೋಜನಕೋಟ್ಯಸ್ತು ಭೂಮೇರೂರ್ಧ್ವಂ ಧ್ರುವಃ ಸ್ಮೃತಃ ॥ ೬೬ ॥

ತ್ರಯೋವಿಂಶತಿಲಕ್ಷಾಣಿ ತ್ರೈಲೋಕ್ಯೋತ್ಸೇಧ ಉಚ್ಯತೇ ।
ದ್ವಿಗುಣೇಷು ಸಹಸ್ರೇಷು ಯೋಜನಾನಾಂ ಶತೇಷು ಚ ॥ ೬೭ ॥

ಲೋಕಾಂತರಮಥೈಕೈಕಂ ಧ್ರುವಾದೂರ್ಧ್ವಂ ವಿಧೀಯತೇ ।
ದೇವದಾನವಗಂಧರ್ವಯಕ್ಷರಾಕ್ಷಸಪನ್ನಗಾಃ ।
ಭೂತಾ ವಿದ್ಯಾಧರಾಶ್ಚೈವ ಅಷ್ಟೌ ತೇ ದೇವಯೋನಯಃ ॥ ೬೮ ॥

ತಸ್ಮಿನ್ ವ್ಯೋಮ್ನಿ ತ್ವಮೀ ಲೋಕಾಃ ಸಪ್ತೈವಂ ಸಂಪ್ರತಿಷ್ಠಿತಾಃ ।
ಮರುತಃ ಪಿತರೋ ಹ್ಯಬ್ದಾಃ ತಸ್ಮಿನ್ನೇವಾಗ್ನಯೋ ಗ್ರಹಾಃ ॥ ೬೯ ॥

---

೬೫. ಭೂಮಿಯಿಂದ ನೂರುಸಾವಿರ ಅಂದರೆ ಒಂದು ಲಕ್ಷ ಯೋಜನಗಳ ಮೇಲೆ ಅಂತರಿಕ್ಷದಲ್ಲಿ ಸೂರ್ಯನಿರುವನು.

೬೬. ಧ್ರುವ ನಕ್ಷತ್ರವು ಭೂಮಿಯಿಂದ ಹತ್ತುಕೋಟಿ ಯೋಜನಗಳ ದೂರದಲ್ಲಿದೆ ಎಂದು ನಿಶ್ಚಿತವಾಗಿದೆ.

ಭೂಲೋಕ, ಭುವರ್ಲೋಕ ಮತ್ತು ಸ್ವರ್ಲೋಕಗಳ ಒಟ್ಟು ಔನ್ನತ್ಯವು ಇಪ್ಪತ್ತುಮೂರುಲಕ್ಷ ಯೋಜನಗಳೆಂದು ತಿಳಿಯಬೇಕು. ಇಷ್ಟು ಯೋಜನದೊಳಗೇ ಈ ಮೂರುಲೋಕಗಳೂ ಇರುವುವು.

೬೭. ಉಳಿದ ಮಹರ್ಲೋಕವೇ ಮೊದಲಾದ ನಾಲ್ಕು ಲೋಕಗಳೂ, ಧ್ರುವ ನಕ್ಷತ್ರದಿಂದ ಮೇಲು ಭಾಗದಲ್ಲಿ ಒಂದಕ್ಕಿಂತ ಒಂದು ಎರಡುಲಕ್ಷಯೋಜನ ಅಂತರ ದಲ್ಲಿವೆ.

೬೮. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಪನ್ನಗಗಳು, ಭೂತಗಳು, ಮತ್ತೂ ವಿದ್ಯಾಧರರು ಈ ಎಂಟು ಜನಗಳೂ ದೇವ ಯೋನಿಗಳೆಂದು ಕರೆಯಲ್ಪಡುವರು.

೬೯-೭೦. ಆ ಅಂತರಿಕ್ಷದಲ್ಲಿ, ಭೂಲೋಕವೇ ಮೊದಲಾದ ಏಳು ಲೋಕ ಗಳೂ, ಸಪ್ತಮರುತ್ತುಗಳೂ, ಪಿತೃಗಳೂ, ಸಂವತ್ಸರಗಳೂ, ಅಗ್ನಿಗಳೂ ಮತ್ತೂ

**ಯೇಚಾಪ್ಯೇತೇ ಸಮಾಖ್ಯಾತಾ ಮಯಾಷ್ಟೌ ದೇವಯೋನಯಃ ।**
**ಮೂರ್ತಯೋಽಮೂರ್ತಯಶ್ಚೈವ ಸರ್ವೇ ತೇ ವ್ಯೋಮ್ನ್ಯವಸ್ಥಿತಾಃ ॥**

**ಏವಂ ವಿಧಮಿದಂ ವ್ಯೋಮ ಸರ್ವದೇವಮಯಂ ಸ್ಮೃತಂ ।**
**ಸರ್ವಭೂತಮಯಂ ಚೈವ ಸರ್ವಶ್ರುತಿಮಯಂ ತಥಾ ॥ ೭೦ ॥**

**ತಸ್ಮಾದ್ವ್ಯೋಮಾರ್ಚಯತೇ ವ್ಯೋಮ ತೇನ ಸರ್ವೇಽರ್ಚಿತಾಃ ಸುರಾಃ ।**
**ತಸ್ಮಾತ್ಸರ್ವಪ್ರಯತ್ನೇನ ಶುಭಾರ್ಥೀ ವ್ಯೋಮ ಪೂಜಯೇತ್ ॥ ೭೨ ॥**

**ಇತಿ ಶ್ರೀ ಸಾಂಬಪುರಾಣೇ ದೇವತಾಖ್ಯಾಪನಂ ನಾಮ**

**ಅಷ್ಟಾದಶೋಽಧ್ಯಾಯ.**

---

ನವಗ್ರಹಗಳೂ ಸಹ ಇರುವುವು. ಅಲ್ಲದೇ ಈಗ ನಾನು ಹೇಳಿದ ದೇವತೆಗಳೇ ಮೊದಲಾದ ಎಂಟು ದೇವಯೋನಿಗಳೂ, ಕೆಲವು ಆಕಾರ ಯುಕ್ತವಾಗಿಯೂ ಮತ್ತೆ ಕೆಲವು ರೂಪಿಲ್ಲದೆಯೂ ಸಹ ಅಂತರಿಕ್ಷದಲ್ಲಿಯೇ ಇರುವುವು.

೭೧. ಅಂತರಿಕ್ಷವು, ಮೇಲೆ ಹೇಳಿದಂತೆ, ಎಲ್ಲ ದೇವತೆಗಳಿಂದಲೂ ಕೂಡಿದೆ. ಅದು ಎಲ್ಲಾ ಸ್ಥಾವರ ಜಂಗಮಾತ್ಮಕವಾದ ಸ್ವರೂಪವೂ ಆಗಿರುವುದೆಂದು ತಿಳಿದು ಕೊಳ್ಳಬೇಕು.

೭೨. ಅಂತರಿಕ್ಷವು, ಸಕಲ ದೇವ, ಭೂತ ಮತ್ತು ಶ್ರುತಿಮಯವಾಗಿರು ವುದರಿಂದ, ಅದನ್ನು ಪೂಜೆಮಾಡುವವನೂ, ಎಲ್ಲಾ ದೇವತೆಗಳನ್ನೂ ಪೂಜಿಸಿ ದಂತೆಯೇ ಆಗುವುದೆಂದು ತಿಳಿಯಬೇಕು. ಆದಕಾರಣ, ಮಂಗಳವನ್ನು ಕೋರುವ ಮನುಷ್ಯನು ಪ್ರಯತ್ನಪೂರ್ವಕವಾಗಿ ವ್ಯೋಮಪೂಜೆಯನ್ನು ಮೊದಲು ಮಾಡಲೇ ಬೇಕು.

ಇಲ್ಲಿಗೆ ಸಾಂಬಪುರಾಣದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕೋನವಿಂಶೋಽಧ್ಯಾಯಃ

---

॥ ನಾರದ ಉವಾಚ ॥

ಆಕಾಶಂ ಖಂ ವಿಯದ್ವ್ಯೋಮ ಚಾಂತರಿಕ್ಷಂ ನಭೋಽಂಬರಂ ।
ಪುಷ್ಕರಂ ಗಗನಂ ಚೇತಿ ಮೇರುಸ್ತತ್ರೈವ ಕೀರ್ತ್ಯತೇ ॥ ೧ ॥

ಮೇರುಶ್ಚ ಪೃಥಿವೀಮಧ್ಯೇ ಸಮಂತಾತ್ತಸ್ಯ ಮೇದಿನೀ ।
ಭೂಮೇರ್ದ್ವೀಪವಿಭಾಗಂ ತು ಪ್ರವಕ್ಷ್ಯಾಮಿ ಸಮಂತತಃ ॥ ೨ ॥
ಜಂಬೂಶಾಕಕುಶದ್ವೀಪ ಕ್ರೌಂಚಗೋಮೇದಕಾನಿ ಚ ।
ಶಾಲ್ಮಲೀಪುಷ್ಕರಾಖ್ಯೇ ಚ ಸಪ್ತ ದ್ವೀಪಾನಿ ಭಾಗಶಃ ॥ ೩ ॥

---

## ಹತ್ತೊಂಬತ್ತನೆಯ ಅಧ್ಯಾಯ.

೧. ನಾರದನು, ಮತ್ತೆ ಸಾಂಬನನ್ನು ಕುರಿತು, ಹೀಗೆಂದನು---ಅಯ್ಯಾ ಸಾಂಬನೇ, ಆಕಾಶ, ಖಂ, ವಿಯತ್, ವ್ಯೋಮ, ಅಂತರಿಕ್ಷ, ನಭಃ, ಅಂಬರ, ಪುಷ್ಕರ, ಗಗನ, ಇವೆಲ್ಲವೂ ಮೇರುಪರ್ವತದ ಪರ್ಯಾಯಪದಗಳು. ಮೇರುವನ್ನೇ ಬೇರೆ ಬೇರೆ ಈ ಆಕಾಶಾದಿ ನಾಮಗಳಿಂದ ಕರೆಯುವರು.

೨-೩. ಭೂಮಿಯ ಮಧ್ಯದಲ್ಲಿ ಮೇರುಪರ್ವತವಿರುವುದು. ಇದರ ಸುತ್ತಲೂ ಭೂಮಿಯಾವರಿಸಿರುವುದು. ಈಗ ಭೂಮಿಯ ಮೇಲಿರುವ ದ್ವೀಪ ವಿಭಾಗವನ್ನು ತಿಳಿಸುವೆನು ಕೇಳು. 1. ಜಂಬೂದ್ವೀಪ, 2. ಶಾಕದ್ವೀಪ, 3. ಕುಶದ್ವೀಪ, 4. ಕ್ರೌಂಚದ್ವೀಪ, 5. ಗೋಮೇದಕದ್ವೀಪ, 6. ಶಾಲ್ಮಲೀದ್ವೀಪ, ಮತ್ತೂ 7. ಪುಷ್ಕರದ್ವೀಪ, ಹೀಗೆ ಭೂಮಿಯಲ್ಲಿ ಏಳು ದ್ವೀಪಗಳಿರುವುವು.

ಲವಣಕ್ಷೀರದಧ್ಯಂಬುಘೃತೋದೇಕ್ಷುರಸೋದಕಾಃ ।
ಸ್ವಾದೂದಕಶ್ಚ ಸಪ್ತೈತೇ ಸಮುದ್ರಾಃ ಪರಿಕೀರ್ತಿತಾಃ ॥ ೪ ॥

ಹಿಮವಾನ್ ಹೇಮಕೂಟಶ್ಚ ನಿಷಧೋ ನೀಲ ಏವ ಚ ।
ಶ್ವೇತಶ್ಚ ಶೃಂಗವಾಂಶ್ಚೈವ ಷಡೇವಂ ವರ್ಷಪರ್ವತಾಃ ॥ ೫ ॥

ಮಾನಸಃ ಸಪ್ತಮಸ್ತೇಷಾಂ ಪುರ್ಯೋಽಷ್ಟೌ ಯತ್ರ ಸಂಸ್ಥಿತಾಃ ।
ಮಾಹೇಂದ್ರೀ ಚಾಪ್ಯಥಾಗ್ನೇಯೀ ಯಾಮ್ಯಾ ಚ ನೈಋತೀ ತಥಾ ॥ ೬ ॥

ವಾರುಣೀ ವಾಯವೀ ಚೈವ ಸೌಮ್ಯೈಶಾನೀ ತಥೈವ ಚ ।
ಮಾನಸಾನ್ನಿರ್ಜಲಾ ಭೂಮಿಃ ಲೋಕಾಲೋಕಸ್ತತೋ ಗಿರಿಃ ॥ ೭ ॥

---

೪. 1. ಲವಣಸಮುದ್ರ= ಉಪ್ಪಿನಸಮುದ್ರ, 2. ಕ್ಷೀರಸಮುದ್ರ,= ಹಾಲಿನಸಮುದ್ರ, 3. ದಧಿಸಮುದ್ರ,= ಮೊಸರಿನಸಮುದ್ರ, 4. ಅಂಬುಸಮುದ್ರ ನೀರಿನಸಮುದ್ರ, 5. ಘೃತಸಮುದ್ರ,= ತುಪ್ಪದಸಮುದ್ರ, 6. ಇಕ್ಷುಸಮುದ್ರ ಕಬ್ಬಿನಹಾಲಿನ ಸಮುದ್ರ, ಮತ್ತು 7. ಸ್ವಾದೂದಕಸಮುದ್ರ,= ಸಿಹಿನೀರಿನಸಮುದ್ರ ಎಂದು ಭೂಮಿಯಮೇಲಿರುವ ಸಮುದ್ರಗಳು, ಏಳು ಎಂದು ಹೇಳುವರು. ಇವುಗಳನ್ನೇ ಸಪ್ತಸಮುದ್ರಗಳೆಂದು ತಿಳಿಯಬೇಕು.

೫. (1) ಹಿಮವತ್ಪರ್ವತ, (2) ಹೇಮಕೂಟ ಪರ್ವತ, (3) ನಿಷಧ ಪರ್ವತ, (4) ನೀಲಪರ್ವತ, (5) ಶ್ವೇತಪರ್ವತ, ಮತ್ತು (6) ಶೃಂಗಿಪರ್ವತ, ಈ ಆರು ಪರ್ವತಗಳೂ, ವರ್ಷಪರ್ವತಗಳೆಂದೂ (ಮಳೆಯನ್ನುಂಟುಮಾಡುವ ಪರ್ವತಗಳೆಂದು) ತಿಳಿಯಬೇಕು.

೬. ಹಿಂದೆ ಹೇಳಿದ ಆರು ಪರ್ವತಗಳಲ್ಲದೆ ಭೂಮಿಯಮೇಲೆ, ಏಳನೆಯದಾದ ಮಾನಸಪರ್ವತವೊಂದಿರುವುದು. ಈ ಪರ್ವತದಲ್ಲಿ 1. ಮಹೇಂದ್ರಪುರಿ 2. ಅಗ್ನಿಪುರೀ, 3. ಯಮಪುರೀ, 4. ನೈಋತಿಪುರಿ, 5. ವರುಣಪುರೀ, 6. ವಾಯುಪುರೀ, 7. ಕುಬೇರಪುರೀ ಮತ್ತು 8. ಮಹೇಶಪುರೀ, ಎಂಬುದಾಗಿ ಹೆಸರುಗಳುಳ್ಳ ಎಂಟು ಪಟ್ಟಣಗಳಿರುವುವು.

೭. ಆಮಾನಸ ಪರ್ವತಕ್ಕಿಂತಲೂ ಮುಂದೆ ಇರುವ ಸ್ಥಳವೆಲ್ಲವೂ, ಜಲರಹಿತವಾದ ಭೂಮಿಯಿಂದ ಕೂಡಿದುದು. ಇದಕ್ಕಿಂತಲೂ ಮುಂದೆ ಲೋಕಾಲೋಕವೆಂಬ ಪರ್ವತವಿರುವುದು.

ತತಸ್ತ್ವಂಡಕಪಾಲಂ ತು ತಸ್ಮಾಚ್ಚ ಪರತಸ್ತಮಃ ।
ತತೋಽಗ್ನಿರ್ವಾಯುರಾಕಾಶಂ ತತೋ ಭೂತಾದಿರುಚ್ಯತೇ ॥ ೮ ॥

ತತೋ ಮಹಾನ್ ಪ್ರಧಾನಂ ಚ ಪ್ರಕೃತಿಃ ಪುರುಷಸ್ತತಃ ।
ಪುರುಷಾದೀಶ್ವರೋ ಜ್ಞೇಯಃ ಈಶ್ವರೇಣಾವೃತಂ ಜಗತ್ ॥ ೯ ॥

ಊರ್ಧ್ವಂ ಮಧ್ಯಮಧಶ್ಚೈತೇ ಪ್ರಾಜ್ಞಯಾ ಯೇ ಪ್ರಕೀರ್ತಿತಾಃ ।
ಭೂಯಸ್ತಾನ್ ಸಂಪ್ರವಕ್ಷ್ಯಾಮಿ ಹ್ಯಂಡಾವರಣಕಾರಣಾತ್ ॥ ೧೦ ॥

ಭೂಲೋಕಶ್ಚ ಭುವಶ್ಚೈವ ತೃತೀಯಃ ಸ್ವಃ ಪ್ರಕೀರ್ತಿತಃ ।
ಮಹರ್ಜನಸ್ತಪಃ ಸತ್ಯಂ ಸಪ್ತಲೋಕಾಃ ಪ್ರಕೀರ್ತಿತಾಃ ॥ ೧೧ ॥

---

೮. ಈ ಲೋಕಾಲೋಕ ಪರ್ವತಕ್ಕಿಂತಲೂ ಮುಂದೆ ಅಂಡಕಪಾಲವೂ, ಅದಕ್ಕಿಂತಮುಂದೆ ತಮಸ್ಸೂ, (ಅಂಧಕಾರವೂ), ಇನ್ನೂಮುಂದೆ, ಅಗ್ನಿ, ವಾಯು ಆಕಾಶ ಇವುಗಳೂ, ಇದಕ್ಕೆಮುಂದೆ ಸಾತ್ವಿಕ, ರಾಜಸ, ತಾಮಸಗಳೆಂಬ ತ್ರಿವಿಧಾತ್ಮಕವಾದ ಅಹಂಕಾರ ತತ್ತ್ವವೂ ಇರುವುವು.

೯. ಅಹಂಕಾರದಿಂದಾಚೆ ಮಹತ್ತತ್ತ್ವವೂ, ಅದರ ಮುಂದೆ ಪ್ರಧಾನನಾಮಕವಾದ ಪ್ರಕೃತಿ ಮತ್ತು ಪುರುಷ ಇವರೂ, ಪುರುಷನಿಂದ ಮುಂದೆ ಈಶ್ವರನೂ ಇರುವನೆಂದು ತಿಳಿಯಬೇಕು. ಸಕಲ ಲೋಕಗಳೂ, ಈಶ್ವರನಿಂದಲೇ ಆವರಿಸಲ್ಪಟ್ಟಿವೆ.

೧೦. ಅಯ್ಯ ಸಾಂಬನೆ, ಹಿಂದೆ ನಾನು ನಿನಗೆ ತಿಳಿಸಿದ ಊರ್ಧ್ವಲೋಕ, ಮಧ್ಯಲೋಕ, ಮತ್ತು ಅಧೋಲೋಕಗಳನ್ನೂ, ಈಗ ಪುನಃ ಸೂರ್ಯದೇವನ ಪ್ರಕಾಶ ಸ್ಥಾನವಾದ ಅಂಡವು ಜಗತ್ತನ್ನೆಲ್ಲಾ ವ್ಯಾಪಿಸಿದೆಯಾದ ಕಾರಣ ಅದರ ಸ್ವರೂಪವನ್ನೂ ನಿನಗೆ ಹೇಳುವೆನು, ಕೇಳು.

೧೧. ಭೂಲೋಕ, 1. ಭುವರ್ಲೋಕ, 2. ಸ್ವರ್ಲೋಕ, 3. ಮಹರ್ಲೋಕ 4. ಜನಲೋಕ, 5. ತಪೋಲೋಕ, 6. ಮತ್ತು ಸತ್ಯಲೋಕ 7. ಇವೇ ಸಪ್ತಲೋಕಗಳು.

ತತಸ್ತ್ವಂಡಕಪಾಲಂ ತು ತಸ್ಮಾಚ್ಚ ಪರತಸ್ತಮಃ ।
ತತೋಽಗ್ನಿರ್ವಾಯುರಾಕಾಶಂ ತತೋ ಭೂತಾದಿರುಚ್ಯತೇ ॥ ೧೨ ॥

ತತೋ ಮಹಾನ್ ಪ್ರಧಾನಂ ಚ ಪ್ರಕೃತಿಃ ಪುರುಷಸ್ತತಃ ।
ಪುರುಷಾದೀಶ್ವರೋ ಜ್ಞೇಯಃ ಈಶ್ವರೇಣಾವೃತಂ ಜಗತ್ ॥ ೧೩ ॥

ಭೂಮೇರಧಸ್ತಾತ್ಸಪ್ತೈವ ಲೋಕಾಸ್ತಾನ್ನಾಮಭಿಃ ಶೃಣು ।
ತಲಃ ಸುತಲ ಪಾತಾಲೌ ತನುಸ್ತಾಲಃ ತತಃ ಪರಃ ।
ಸುಶಾಲಶ್ಚ ವಿಶಾಲಶ್ಚ ಸಪ್ತಮಶ್ಚ ರಸಾತಲಃ ॥ ೧೪ ॥

ತತಸ್ತ್ವಂಡಕಪಾಲಂ ತು ತಸ್ಮಾಚ್ಚ ಪರತಸ್ತಮಃ ।
ತತೋಽಗ್ನಿರ್ವಾಯುರಾಕಾಶಂ ತತೋ ಭೂತಾದಿರುಚ್ಯತೇ ॥ ೧೫ ॥

---

೧೨ ಈ ಸಪ್ತಲೋಕಗಳಿಗಿಂತಲೂ ಮುಂದೆ ಅಂಡಕಪಾಲವೂ, ಅದಕ್ಕಿಂತಲೂ ಮುಂದೆ ಕತ್ತಲೆಯೂ, ಅದಕ್ಕೆ ಮುಂದೆ, ಅಗ್ನಿ, ವಾಯು ಮತ್ತು ಆಕಾಶ ಇವುಗಳೂ ಇವುಗಳಿಂದ ಮುಂದೆ ಅಹಂಕಾರವೆಂಬ ಮೂರನೆಯ ತತ್ತ್ವವೂ ಇರುವುವು.

೧೩. ಅಹಂಕಾರದಿಂದ ಮುಂದೆ ಮಹತ್ತತ್ತ್ವವೂ ಮುಂದೆ ಪ್ರಕೃತಿಯೂ, ಹಾಗೆಯೇ ಪುರುಷರೂ ತೋರಿಬರುವರು. ಪುರುಷನಿಂದ ಮುಂದೆ ಈಶ್ವರನೂ ಅಂತಹ ಈಶ್ವರನಿಂದ ಎಲ್ಲಾ ಪ್ರಪಂಚವೂ ಆವೃತವಾಗಿರುವುದು.

೧೪. ಸಾಂಬನೆ, ಇನ್ನು ಮುಂದೆ ಭೂಮಿಯ ಕೆಳಭಾಗದಲ್ಲಿರುವ ಏಳು ಲೋಕಗಳನ್ನೂ ಮತ್ತೂ ಅವುಗಳ ಹೆಸರನ್ನೂ ಹೇಳುವೆನು ಕೇಳು, ಎಂದು ನಾರದರಿಂತೆಂದರು.

1 ತಲ, 2 ಸುತಲ, 3 ಪಾತಾಲ, 4 ತಾಲ, 5 ಸುಶಾಲ, 6 ವಿಶಾಲ, ಮತ್ತೂ 7 ರಸಾತಲ ವೆಂಬ ಹೆಸರುಳ್ಳ ಈ ಏಳೇ, ಸಪ್ತ ಅಧೋಲೋಕಗಳೆಂದು ತಿಳಿಯಬೇಕು. [ಬೇರೆ ಗ್ರಂಥಗಳಲ್ಲಿ, 1 ಅತಲ, 2 ವಿತಲ, 3 ಸುತಲ 4 ತಲಾತಲ, 5 ರಸಾತಲ 6 ಮಹಾತಲ ಮತ್ತೂ 7 ಪಾತಾಲವೆಂಬುವು ಸಪ್ತ ಅಧೋಲೋಕಗಳೆಂದು ಕ್ರಮದಲ್ಲಿ ಹೇಳಿದೆ; ಇಲ್ಲಿ ಸ್ವಲ್ಪ ಹೆಸರುಗಳು ವ್ಯತ್ಯಾಸವಾಗಿ ಕಂಡುಬರುತ್ತವೆ.]

೧೫-೧೬. ಸೂರ್ಯಭಗವಂತನು ನಿರ್ಮಿಸಿದ ಅಂಡವು ಎರಡುಕಪಾಲಗಳಾಗಿರುವುವು. ಮಧ್ಯದಲ್ಲಿ, ಭೂಮಿ ಇರುವುದು, ಮೇಲಿನ ಕಪಾಲದಲ್ಲಿ ಭೂಲೋಕವೇ

ತತೋ ಮಹಾನ್ ಪ್ರಧಾನಂ ಚ ಪ್ರಕೃತಿಃ ಪುರುಷಸ್ತತಃ ।
ಪುರುಷಾದೀಶ್ವರೋ ಜ್ಞೇಯಃ ಈಶ್ವರೇಣಾಽಽವೃತಂ ಜಗತ್ ॥ ೧೬ ॥

ಏವಂ ಮೇರೋಃ ಸಮಂತಾತ್ತು ಸರ್ವಮೇತತ್ಪ್ರಕೀರ್ತಿತಂ ।
ಉತ್ಪನ್ನಃ ಸಚತುಃಶೃಂಗಃ ಸುಮೇರುಃ ಶುದ್ಧಕಾಂಚನಃ ॥ ೧೭ ॥

ಪೃಥಿವ್ಯಾಂ ಸಂಸ್ಥಿತೋ ಮಧ್ಯೇ ಸಿದ್ಧಗಂಧರ್ವಸೇವಿತಃ ।
ಚತುರ್ಭಿಃ ಕಾಂಚನೈಃ ಶೃಂಗೈಃ ದಿವ್ಯೈರ್ದೇವಮಿವೋಲ್ಲಿಖನ್ ॥ ೧೮ ॥

---

ಮೊದಲಾದ ಏಳು ಊರ್ಧ್ವ ಲೋಕಗಳೂ, ಕೆಳಗಿನ ಕಪಾಲದಲ್ಲಿ ಏಳು ಅಧೋ ಲೋಕಗಳೂ ಸಹ ಇರುವುವು. ಊರ್ಧ್ವಲೋಕಗಳಿಗೆ ಹೇಳಿದಂತೆಯೇ, ಅಧೋ ಲೋಕಗಳಿಗೂ, ಪ್ರಕೃತಿ, ಪುರುಷ ಇವುಗಳನ್ನು ಈಗ ಹೇಳುತ್ತೇನೆ.

ರಸಾತಲದಿಂದ, ಅಂಡಕಪಾಲವೂ, ಅದಕ್ಕಿಂತಲೂ ಮುಂದೆ ಕತ್ತಲೆಯೂ, ಅದಕ್ಕಿಂತ ಮುಂದೆ, ಅಗ್ನಿ, ವಾಯು, ಆಕಾಶ, ಇವುಗಳೂ, ಇವುಗಳಿಂದ ಭೂತ ಗಳೂ, ಭೂತಗಳಿಂದ ಮಹತ್ತತ್ವ, ಪ್ರಧಾನ ಇವೆರಡೂ ಇವುಗಳಿಂದ ಮುಂದೆ ಪುರುಷನೂ, ಪುರುಷನಿಂದ ಈಶ್ವರನೂ ತೋರಿ ಬರುವನೆಂದೂ ಈ ಈಶ್ವರನಿಂದ ಜಗತ್ತೆಲ್ಲವೂ ವ್ಯಾಪಿಸಿದೆಯೆಂದೂ ಹೇಳುವರು.

೧೭. ಹಿಂದೆ ಹೇಳಿದಂತೆ ಹದಿನಾಲ್ಕು ಲೋಕಗಳೂ, ಅಗ್ನಿ ವಾಯುರಾಕಾಶಾ ದಿಗಳೆಲ್ಲವೂ ಮೇರುವಿನ ಸುತ್ತಲೂ ಇರುವುವೆಂದು ತಿಳಿಯಬೇಕು. ಇಂತಹ ಮೇರು ಪರ್ವತವು ನಾಲ್ಕು ಶಿಖರಗಳುಳ್ಳದ್ದಾಗಿ, ಶುಭ್ರವಾದ ಚಿನ್ನದ ಸ್ವರೂಪದಿಂದ ಸೂರ್ಯನು ಉದಯಿಸಿದ ಅಂಡದಲ್ಲಿ ಹುಟ್ಟಿತು.

೧೮. ಈ ಮೇರು ಪರ್ವತವು, ಭೂಮಿಯ ಮಧ್ಯದಲ್ಲಿ ಇರುತ್ತಾ, ಸಿದ್ಧರೂ, ಮತ್ತೂ ಗಂಧರ್ವರೂ ಇವರುಗಳಿಂದ ಸೇವಿಸಲ್ಪಡುತ್ತಿದೆ. ಇದಕ್ಕೆ ನಾಲ್ಕು ಚಿನ್ನದ ಶಿಖರಗಳಿರುವುವು. ಇವುಗಳಿಂದ ಈ ಮೇರುಪರ್ವತವು ತನ್ನಲ್ಲಿ ದೇವಾಂಶವಿದೆ ಯೆಂಬುದನ್ನೂ, ದೇವತೆಗಳೆಲ್ಲರೂ ತನ್ನಲ್ಲಿ ವಾಸಿಸುತ್ತಿರುವರೆಂಬುದನ್ನೂ ತೋರಿ ಸುತ್ತಿರುವುದೋ ಎಂಬಂತೆ ಕಾಣುವುದು.

ಯೋಜನಾನಾಂ ಸಹಸ್ರಾಣಿ ಚತುರಾಶೀತಿರುಚ್ಛ್ರಿತಃ ।
ಪ್ರವಿಷ್ಟಃ ಷೋಡಶಾಧಸ್ತಾತ್ ಅಷ್ಟಾವಿಂಶತಿವಿಸ್ತೃತಃ ॥ ೧೯ ॥

ವಿಸ್ತಾರಾತ್ತ್ರಿಗುಣಶ್ಚಾಸ್ಯ ಪರಿಣಾಹಃ ಸಮಂತತಃ ।
ತಸ್ಯ ಸೌಮನಸಂ ನಾಮ ಶೃಂಗಮೇಕಂ ತು ಕಾಂಚನಂ ॥ ೨೦ ॥

ದ್ವಿತೀಯಂ ಪದ್ಮರಾಗಾಭಂ ಜ್ಯೋತಿಷ್ಕಂ ನಾಮ ನಾಮತಃ ।
ತೃತೀಯಂ ನಾಮತಶ್ಚಿತ್ರಂ ಸರ್ವಧಾತುಮಯಂ ಶುಭಂ ॥ ೨೧ ॥

ಚತುರ್ಥಂ ರಾಜತಂ ಶುಕ್ಲಂ ಚಾಂದ್ರಮಾಸಮಿತಿ ಸ್ಮೃತಂ ।
ತಸ್ಯ ಸೌಮನಸಂ ಯತ್ತತ್ ಶೃಂಗಂ ಜಾಂಬೂನದಂ ಸ್ಮೃತಂ ॥ ೨೨ ॥

---

೧೯. ಈ ಮೇರುಪರ್ವತವು, (84000) ಎಂಭತ್ತುನಾಲ್ಕು ಸಾವಿರ ಯೋಜನದಷ್ಟು ಎತ್ತರವಾಗಿದೆ. ಇದರಲ್ಲಿ, (16000) ಹದಿನಾರುಸಾವಿರ ಯೋಜನಗಳಷ್ಟು ಭೂಮಿಯು ಕೆಳಗೆ ಹೋಗಿದೆ. (28000) ಇಪ್ಪತ್ತೆಂಟು ಸಾವಿರ ಯೋಜನಗಳಷ್ಟು ಉದ್ದವಿದೆ. (ವಿಸ್ತಾರವಾಗಿದೆ.)

೨೦. ವ್ಯಾಸದ ಮೂರರಷ್ಟು ಈ ಮೇರುಪರ್ವತದ ಸುತ್ತಳತೆ ಇರುವುದು. ಅಂದರೆ, (28000×3)= (84000) ಎಂಬತ್ತುನಾಲ್ಕುಸಾವಿರ ಯೋಜನಗಳು ಇದರ ಸುತ್ತಳತೆಯೆಂದು ತಿಳಿಯಬೇಕು. ಈ ಮೇರುಪರ್ವತದ ಸೌಮನಸವೆಂಬ ಒಂದು ಶಿಖರವು ಶುದ್ಧ ಚಿನ್ನದ್ದೆಂದೇ ಭಾವಿಸಬೇಕು.

೨೧. ಈ ಮೇರುಪರ್ವತದ ಎರಡನೆಯ ಶಿಖರವು ಪದ್ಮರಾಗದ ಕಾಂತಿಯಂತೆ, ಕಾಂತಿಯುಳ್ಳದ್ದೆಂದೂ ಇದಕ್ಕೆ "ಜ್ಯೋತಿಷ್ಕ", ಎಂಬ ಹೆಸರೆಂದೂ ತಿಳಿಯಬೇಕು. ಮೂರನೆಯ ಶಿಖರವು ಚಿತ್ರವೆಂಬ ಹೆಸರುಳ್ಳದ್ದು. ಇದು ಸಕಲ ಧಾತುರಾಗಗಳಿಂದ ನಿರ್ಮಿಸಲ್ಪಟ್ಟಿದೆ. [ಧಾತುಗಳ ವಿಕಾರವಾಗಿದೆ.]

೨೨-೨೩. ಮೇರುಪರ್ವತದ, ನಾಲ್ಕನೆಯ ಶಿಖರವು ಬೆಳ್ಳಿಯದು. ಇದಕ್ಕೆ ಚಾಂದ್ರಮಾಸವೆಂದು ಹೆಸರು. ಈ ಮೇರುಪರ್ವತದ ಚಿನ್ನದ ಶಿಖರವಾದ ಸೌಮ

ತದೇವ ಚೋದಯನ್ನಾಮ್ನಾ ಯತ್ರೋದ್ಯನ್ ದೃಶ್ಯತೇ ರವಿಃ ।
ಉತ್ತರೇಣ ಪರಿಕ್ರಮ್ಯ ಜಂಬೂದ್ವೀಪೇ ದಿವಾಕರಃ ॥ ೨೩ ॥

ದೃಶ್ಯೋ ಭವತಿ ಭೂತಾನಾಂ ಶಿಖರಂ ತತ್ಸಮಾಶ್ರಿತಃ ।
ಕಾಂಚನಸ್ಯ ಚ ಶೃಂಗಸ್ಯ ತೇಜಸಾಽರ್ಕಸ್ಯ ಚಾವೃತೇ ॥ ೨೪ ॥

ಉಭೇ ಸಂಧ್ಯೇ ಪ್ರಕಾಶೇತೇ ಆತಾಮ್ರೇ ಪೂರ್ವಪಶ್ಚಿಮೇ ।
ಶೃಂಗೇ ಸೌಮನಸೇ ಸೂರ್ಯೋ ಹ್ಯತ್ತಿಷ್ಠತ್ಯುತ್ತರಾಯಣೇ ॥ ೨೫ ॥

ಜ್ಯೋತಿಷ್ಕೇ ದಕ್ಷಿಣೇ ಚಾಪಿ ವಿಷುವೇ ಮಧ್ಯಗಸ್ತಯೋಃ ।
ತಸ್ಯೇಶಾನಭವೇ ಶರ್ವಃ ಶೃಂಗೇಽಗ್ನಿಃ ಪೂರ್ವದಕ್ಷಿಣೇ ॥ ೨೬ ॥

---

ನಸ ಶಿಖರವನ್ನು, ಆಶ್ರಯಿಸಿ, ಉದಯಿಸುವನೆಂಬ ಹೆಸರಿನಿಂದ, ಉತ್ತರದಿಕ್ಕಿನಿಂದ ಹೊರಟು ಜಂಬೂದ್ವೀಪದಲ್ಲಿ ಗೋಚರನಾಗುವನು. ನಮಗೆ ಆಗ ಉದಯವಾದಂತೆ, ತೋರುವುದು. ಶಿಖರವು ಸುವರ್ಣಮಯವಾದುದರಿಂದ ಉದಯಿಸುವಾಗ, ಕೆಂಪಾಗಿ ಸುವರ್ಣದ ಬಣ್ಣದಂತೆ ತೋರುವನು.

೨೪. ಆಸೌಮನಸ್ಸೆಂಬ ಶಿಖರವನ್ನೇರಿದಮೇಲೆ, ಸಕಲ ಚರಾಚರಾತ್ಮಕ ವಾದ ಭೂತಗಳಿಗೂ ಗೋಚರನಾಗುತ್ತಾನೆ. ಆ ಶಿಖರದ ಹೊಂಬಣ್ಣವು ಸೂರ್ಯನ ನ್ನಾವರಿಸಿರುತ್ತದೆಯಾದ ಕಾರಣ, ನಮಗೆ ಹೊಂಬಣ್ಣವಾಗಿಯೇ ಕಾಣುತ್ತದೆ.

೨೫. ಸೂರ್ಯನು, ಪ್ರಾತಃಕಾಲದಲ್ಲಿ, ಮತ್ತೂ ಸಾಯಂಕಾಲದಲ್ಲಿ ಹೀಗೆ ಎರಡು ಸಂಧ್ಯಾಕಾಲಗಳಲ್ಲಿಯೂ ಸೌಮನಸ್ಸೆಂಬ ಚಿನ್ನದ ಶಿಖರದಲ್ಲಿಯೇ ಇರುವುದ ರಿಂದ ಕೆಂಪಾಗಿ ಕಾಣುವನು. ಸೂರ್ಯದೇವನು, ಸೌಮನಸ್ಸೆಂಬ ಶಿಖರವನ್ನೇರಿ ದಾಗ ಉತ್ತರಾಯಣವೆಂದು ತಿಳಿಯಬೇಕು..

೨೬. ಸೂರ್ಯನು ದಕ್ಷಿಣಾಯನದಲ್ಲಿ ಜ್ಯೋತಿಷ್ಕವೆಂಬ, ಪದ್ಮರಾಗ ಮಣಿಯಂತೆ ಕಾಂತಿಯುಳ್ಳ ಶಿಖರವನ್ನೇರುವನು. ಅಂದರೆ, ಸೂರ್ಯನು ಜ್ಯೋತಿಷ್ಕ ವೆಂಬ ಶಿಖರವನ್ನೇರಿದಾಗ ದಕ್ಷಿಣಾಯಣವೆಂದು ತಿಳಿಯಬೇಕು. ವಿಷುವತ್ಪುಣ್ಯಕಾಲ ದಲ್ಲಿ ಅಂದರೆ, ಮೇಷ ಮತ್ತು ತುಲಾರಾಶಿಯ ಸಂಚಾರಕಾಲದಲ್ಲಿ ಸೌಮನಸ ಮತ್ತು ಜ್ಯೋತಿಷ್ಕ ಎಂಬ ಈ ಎರಡು ಶಿಖರಗಳಿಗೂ ಮಧ್ಯದಲ್ಲಿರುವನು. ಆಗಲೇ ವಿಷುವತ್ಪುಣ್ಯ ಕಾಲವೆಂದು ಹೆಸರು ಬರುವುದು.

ನೈಋರ್ತ್ಯೇ ಪಿತರೋ ಜ್ಞೇಯಾ ವಾಯವ್ಯೇ ಮರುತಸ್ತಥಾ ।
ಮಧ್ಯೇ ನಾರಾಯಣಃ ಸಾಕ್ಷಾತ್ ಬ್ರಹ್ಮಜ್ಯೋತೀಂಷಿ ಚೈವ ಹಿ ।
ಆದಿತ್ಯಃ ಸ್ವೇನ ರೂಪೇಣ ತಸ್ಮಿನ್ ವ್ಯೋಮ್ನಿ ಪ್ರತಿಷ್ಠಿತಃ ॥ ೨೭ ॥

ಇತಿ ಶ್ರೀ ಸಾಂಬಪುರಾಣೇ ವ್ಯೋಮೋತ್ಪತ್ತಿರ್ನಾಮ
ಏಕೋನವಿಂಶೋಽಧ್ಯಾಯಃ

---

೨೭. ನೈಋತ್ಯ ದಿಕ್ಕಿನಲ್ಲಿ ಪಿತೃದೇವತೆಗಳೂ, ವಾಯುವ್ಯ ದಿಕ್ಕಿನಲ್ಲಿ ಸಪ್ತ ಮರುತ್ತುಗಳೂ, ಮಧ್ಯಭಾಗದಲ್ಲಿ ಸಾಕ್ಷಾನ್ನಾರಾಯಣನೂ, ಮತ್ತೂ ಬ್ರಹ್ಮನ ದಿವ್ಯ ತೇಜಸ್ಸೂ ಸಹ ಆ ಮೇರುಪರ್ವತದಲ್ಲಿ ನೆಲಸಿರುವುದು. ಇಂತಹ, ವ್ಯೋಮದಲ್ಲಿ (ಮೇರುವಿನಲ್ಲಿ) ಸೂರ್ಯನು ತನ್ನ ನಿಜ ರೂಪಿನಿಂದ ನೆಲಸಿ ಪ್ರಕಾಶಿಸುತ್ತಿರುವನು.

ಇಲ್ಲಿಗೆ ಸಾಂಬಪುರಾಣದಲ್ಲಿ, ವ್ಯೋಮದ ಉತ್ಪತ್ತಿನಿರೂಪಣವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ವಿಂಶೋಽಧ್ಯಾಯಃ

---

॥ ನಾರದ ಉವಾಚ ॥

ಅಥ ಹೇಮಮಯಸ್ಯಾಽಸ್ಯ ಮೇರೋಃ ಪ್ರತಿದಿಶಂ ಸ್ಥಿತಾಃ ।
ಚತುರ್ಣಾಂ ಲೋಕಪಾಲಾನಾಂ ಪುರ್ಯಸ್ತಾ ನಾಮಭಿಃ ಶೃಣು ॥ ೧ ॥

ಪ್ರಾಚ್ಯಾಂ ದಿಶಿ ಸುಮೇರೋಸ್ತು ಮಹೇಂದ್ರಸ್ಯಾಮರಾವತೀ ।
ದಕ್ಷಿಣೇ ತು ಪುನರ್ಮೇರೋಃ ಯಮಸ್ಯ ಯಮನೀ ಪುರೀ ॥ ೨ ॥

ಪ್ರತೀಚ್ಯಾಂ ಚ ಪುನರ್ಮೇರೋಃ ವರುಣಸ್ಯ ಸುಖಾಪುರೀ ।
ದಿಶ್ಯುತ್ತರಸ್ಯಾಂ ಮೇರೋಸ್ತು ಸೋಮಸ್ಯಾಪಿ ವಿಭಾಪುರೀ ॥ ೩ ॥

---

## ಇಪ್ಪತ್ತನೆಯ ಅಧ್ಯಾಯ.

೧. ಅಯ್ಯ ಸಾಂಬನೆ, ಸ್ವರ್ಣಮಯವಾದ ಈ ಮೇರುಪರ್ವತದ, ನಾಲ್ಕು ದಿಕ್ಕುಗಳಲ್ಲಿಯೂ ಇರುವ ನಾಲ್ಕು ಮಂದಿ ಲೋಕಪಾಲಕರ ಹೆಸರನ್ನೂ, ಅವರ ಪಟ್ಟಣ ಮತ್ತೂ ಅವುಗಳ ಹೆಸರುಗಳನ್ನೂ ತಿಳಿಸುವೆನು, ಕೇಳು, ಎಂದು ಸಾಂಬನನ್ನು ಕುರಿತು ನಾರದರು ಹೀಗೆಂದರು.

೨-೩. ಸುಮೇರುಪರ್ವತದ ಪೂರ್ವದಿಕ್ಕಿನಲ್ಲಿ ಮಹೇಂದ್ರನ ಅಮರಾವತೀ ಎಂಬ ಪಟ್ಟಣವಿರುವುದು. ಮೇರುವಿನ ದಕ್ಷಿಣದಿಕ್ಕಿನಲ್ಲಿ ಯಮನ, ಯಮನೀ ಎಂಬ ಪಟ್ಟಣವಿರುವುದು ; ಮೇರುವಿನ ಪಶ್ಚಿಮದಿಕ್ಕಿನಲ್ಲಿ ವರುಣನ ಸುಖಾಪುರೀ ಎಂಬ ಪಟ್ಟಣವಿರುವುದು. ಹಾಗೆಯೇ ಮೇರುಪರ್ವತದ ಉತ್ತರದಿಕ್ಕಿನಲ್ಲಿ ಕುಬೇರನ ವಿಭಾಪುರೀ ಎಂಬ ನಗರವಿರುವುದು.

ಮಧ್ಯಾಹ್ನಂ ಮಧ್ಯರಾತ್ರಂ ಚ ಉದಯಾಸ್ತಮನೇ ತಥಾ ।
ಕುರ್ವಂಶ್ಚತುರ್ಷು ಪಾರ್ಶ್ವೇಷು ತಪತ್ಯೇಷ ಹಿ ಭಾಸ್ಕರಃ ॥ ೪ ॥

ಮಧ್ಯಗಶ್ಚಾಮರಾವತ್ಯಾಂ ಯದಾ ಭವತಿ ಭಾಸ್ಕರಃ ।
ವೈವಸ್ವತೇ ಸಂಯಮನೇ ಚೋತ್ತಿಷ್ಠನ್ ದೃಶ್ಯತೇ ತದಾ ॥ ೫ ॥

ಸುಖಾಯಾಮರ್ಧರಾತ್ರಂತು ವಿಭಾಯಾಮಸ್ತಮೇತಿ ಚ ।
ವೈವಸ್ವತೇ ಸಂಯಮನೇ ಮಧ್ಯಗಸ್ತು ರವಿರ್ಯದಾ ॥ ೬ ॥

ಸುಖಾಯಾಮಥ ವಾರುಣ್ಯಾಮುತ್ತಿಷ್ಠನ್ ದೃಶ್ಯತೇ ತದಾ ।
ವಿಭಾಯಾಮರ್ಧರಾತ್ರಂ ತು ಮಾಹೇಂದ್ರ್ಯಾಮಸ್ತಮೇತಿ ಚ ॥ ೭ ॥

---

೪. ಮಧ್ಯಾಹ್ನ, ಮಧ್ಯರಾತ್ರಿ, ಉದಯಕಾಲ, ಮತ್ತು ಅಸ್ತಮಯಕಾಲ ಈ ನಾಲ್ಕು ಕಾಲಗಳಲ್ಲಿ, ನಾಲ್ಕು ದಿಕ್ಕುಗಳಲ್ಲಿಯೂ ಸೂರ್ಯನು ಸಂಚರಿಸುತ್ತಾ ಬೆಳಕನ್ನುಂಟು ಮಾಡುತ್ತಿರುವನು.

೫. ಸೂರ್ಯನು ಅಮರಾವತಿ ಪಟ್ಟಣದ ಮಧ್ಯಕ್ಕೆ ಬಂದಾಗ ವೈವಸ್ವತ ಯಮನ ಪಟ್ಟಣದಲ್ಲಿ (ಯಮಪುರಿಯಲ್ಲಿ) ಉದಯವಾಗುತ್ತಿರುವಂತೆ ಕಾಣುತ್ತದೆ.

ಹಾಗೆಯೇ ಸೂರ್ಯನು ಅಮರಾವತೀ ಪಟ್ಟಣದ ಖಮಧ್ಯದಲ್ಲಿದ್ದಾಗ ವರುಣನ ಸುಖಾಪುರಿಯಲ್ಲಿ ಅರ್ಧರಾತ್ರಿಯಾಗಿಯೂ, ಸೋಮನ ವಿಭಾಪುರಿಯಲ್ಲಿ ಅಸ್ತಮಯವಾದ ಹಾಗೂ ತೋರುತ್ತದೆ.

೬-೭. ಸೂರ್ಯನು, ವೈವಸ್ವತಯಮನ ಯಮಪುರಿಯಲ್ಲಿ, ಖಮಧ್ಯಕ್ಕೆ ಬಂದಾಗ, ಅಂದರೆ ಮಧ್ಯಾಹ್ನವಾದಾಗ, ವರುಣನ ಸುಖಾಪುರಿಯಲ್ಲಿ, ಉದಯವಾಗುತ್ತಿರುವಂತೆಯೂ, ಸೋಮನ ವಿಭಾಪುರಿಯಲ್ಲಿ, ಅರ್ಧರಾತ್ರಿಯಾಗಿಯೂ, ಮತ್ತು ಮಹೇಂದ್ರನ ಅಮರಾವತಿಯಲ್ಲಿ, ಅಸ್ತಮಯವಾಗುತ್ತಿರುವ ಹಾಗೂ, ಕಾಣುವನು.

ಸುಖಾಯಾಂ ಚಾಽಪಿ ವಾರುಣ್ಯಾಂ ಮಧ್ಯಾಹ್ನೇ ಚಾರ್ಯಮಾ ಯದಾ ।
ವಿಭಾಯಾಂ ಸೋಮಪುರ್ಯಾಂ ಸ ಉತ್ತಿಷ್ಠತಿ ವಿಭಾವಸುಃ ॥ ೮ ॥

ರಾತ್ರ್ಯರ್ಧೇ ತ್ವಮರಾವತ್ಯಾಂ ಅಸ್ತಮೇತಿ ಯಮಸ್ಯ ನ್ವೈ ।
ಸೋಮಸೂರ್ಯಾಂ ವಿಭಾಯಾಂ ತು ಮಧ್ಯಾಹ್ನೇ ತ್ವರ್ಯಮಾ ಯದಾ॥

ಮಾಹೇಂದ್ರ್ಯಾಮಮರಾವತ್ಯಾಮುತ್ತಿಷ್ಠತಿ ದಿವಾಕರಃ ।
ಅರ್ಧರಾತ್ರಂ ಸಂಯಮನೋ ವಾರುಣ್ಯಾಮಸ್ತಮೇತಿ ಚ ॥ ೧೦ ॥

ಏವಂ ಚತುರ್ಷು ಪಾರ್ಶ್ವೇಷು ಮೇರೋಃ ಕುರ್ವನ್ ಪ್ರದಕ್ಷಿಣಾಂ ।
ಉದಯಾಸ್ತಮನೇ ಚಾಽಸಾವುತ್ತಿಷ್ಠತಿ ಪುನಃ ಪುನಃ ॥ ೧೧ ॥

---

೮. ಆರ್ಯಮನು (ಸೂರ್ಯನು) ವರುಣನ ಸುಖಾಪುರಿಯಲ್ಲಿ ಮಧ್ಯಪ್ರದೇಶದಲ್ಲಿರಲು (ಮಧ್ಯಾಹ್ನವಾಗಲು) ಸೋಮನ ವಿಭಾಪುರಿಯಲ್ಲಿ ಉದಯವಾಗುತ್ತಿರುವಂತೆ ತೋರುವುದು. ಆಗ ಅಮರಾವತಿಯಲ್ಲಿ ಅರ್ಧರಾತ್ರಿಯೂ, ಯಮನ ಯಮನೀಪುರಿಯಲ್ಲಿ ಮುಳುಗುತ್ತಿರುವಂತೆಯೂ ಕಾಣಬರುವನು. (ಖಗೋಳವು ವರ್ತುಲಾಕಾರವಾಗಿದೆ. ಅದರ ನಾಲ್ಕು ದಿಕ್ಕುಗಳಲ್ಲಿಯೂ, ಅಂದರೆ ತೊಂಬತ್ತುಭಾಗ (ಡಿಗ್ರಿ) ದಅಂತರಗಳಲ್ಲಿರುವ, ಇಂದ್ರ, ಯಮ, ವರುಣ, ಕುಬೇರ, ಇವರ ಪಟ್ಟಣಗಳಿಗೆ ಉದಯಾಸ್ತಕಾಲಗಳು ವ್ಯತ್ಯಾಸವಾಗಿ ಕಂಡುಬರುವುದು. ಖಗೋಳಶಾಸ್ತ್ರಕ್ಕೆ ಸಮಂಜಸವಾಗಿರುವುದು.)

೯-೧೦. ಸೂರ್ಯನು, ಸೋಮನ ವಿಭಾಪುರಿಯಲ್ಲಿ ಮಧ್ಯಭಾಗದಲ್ಲಿರುವಾಗ (ಮಧ್ಯಾಹ್ನವಾಗಿರುವಾಗ) ಮಹೇಂದ್ರನ ಅಮರಾವತಿಯಲ್ಲಿ ಉದಯಿಸುತ್ತಿರುವಂತೆಯೂ, ಯಮನ, ಸಂಯಮನೀ ಪಟ್ಟಣದಲ್ಲಿ ಅರ್ಧರಾತ್ರಿಯಾದಂತೆಯೂ ಮತ್ತು ವರುಣನ ಸುಖಾಪುರಿಯಲ್ಲಿ ಅಸ್ತವಾಗುತ್ತಿರುವಂತೆಯೂ ತೋರುವನು.

೧೧. ಹಿಂದೆ ಹೇಳಿದಂತೆ ನಾಲ್ಕು (ಮೇರುವಿನ) ಪಾರ್ಶ್ವಗಳಲ್ಲಿಯೂ ಪ್ರದಕ್ಷಿಣೆಮಾಡುತ್ತಾ, ಒಬ್ಬನೇ ಆದ ಸೂರ್ಯದೇವನು, ಉದಯಿಸುತ್ತಲೂ ಬಾರಿಬಾರಿಗೂ ಅಸ್ತನಾಗುತ್ತಲೂ ಇರುವಂತೆ ಕಾಣುವನು.

ಪೂರ್ವಾಹ್ಣೇ ಚಾಽಪರಾಹ್ಣೇ ಚ ದ್ವೌ ದ್ವೌ ದೇವಾಲಯೌ ತು ಸಃ ।
ತಪತ್ಯೇಕಂ ಚ ಮಧ್ಯಾಹ್ನೇ ತಾಭಿರೇವ ಗಭಸ್ತಿಭಿಃ ॥ ೧೨ ॥

ಉದಿತೋ ವರ್ಧಮಾನಾಭಿಃ ಆಮಧ್ಯಾಂಕ್ರಾಂತಯೋ ರವಿಃ ।
ತತಃ ಪರಂ ಹ್ರಸಂತೀಭಿಃ ಗೋಭಿರಸ್ತಂ ನಿಯಚ್ಛತಿ ॥ ೧೩ ॥

ಯತ್ರೋದ್ಯನ್ ದೃಶ್ಯತೇ ಚೈವ ಸ ತೇಷಾಮುದಯಃ ಸ್ಮೃತಃ ।
ಅದೃಶ್ಯಂ ಗಚ್ಛತೇ ಯತ್ರ ತೇಷಾಮಸ್ತಂ ತದುಚ್ಯತೇ ॥ ೧೪ ॥

ವಿದೂರಭಾರಾದರ್ಕಸ್ಯ ಭೂಮಿಲೇಖಾಗತಸ್ಯ ಚ ।
ಲೀಯತೇ ನಿಶ್ಚಯೋ ಯಸ್ಮಾತ್ ತೇನ ರಾತ್ರ್ಯಾ ನ ದೃಶ್ಯತೇ ॥ ೧೫ ॥

---

೧೨. ಸೂರ್ಯನು, ಪೂರ್ವಾಹ್ಣ (ಅಂದರೆ ಬೆಳಗಿನಿಂದ ಮಧ್ಯಾಹ್ನ ಹದಿನ್ಯೆದು ಗಳಿಗೆಯುವರೆಗೆ,) ಎರಡೆರಡು ದೇವತೆಗಳ ಆಶ್ರಯಸ್ಥಾನವನ್ನು ಅಂದರೆ ಪಟ್ಟಣ ಗಳನ್ನೂ, ಮಧ್ಯಾಹ್ನದಲ್ಲಿ ಒಂದು ದೇವತೆಯಪಟ್ಟಣವನ್ನೂ ತನ್ನ ಸಹಸ್ರ ಕಿರಣಗಳಿಂದಲೇ ಪ್ರಕಾಶಪಡಿಸುವನು.

೧೩. ಸೂರ್ಯನು ಉದಯಿಸಿ ಮಧ್ಯಾಹ್ನವಾಗುವವರೆಗೂ, ಇವನ ಕಿರಣ ಗಳು ಅಭಿವೃದ್ಧಿಗೊಳ್ಳುತ್ತಿರುವುವು. ಅನಂತರ ಮುಳುಗುವವರೆವಿಗೂ ಕಡಿಮೆ ಯಾಗುತ್ತಾ ಬರುತ್ತವೆ.

೧೪. ಸೂರ್ಯನು ಎಲ್ಲಿ ಹುಟ್ಟುವಂತೆ ಕಾಣುವನೋ ಅಲ್ಲಿಯು ಜನಗಳಿಗೆ ಉದಯವೆಂದು ತೋರುವುದು ಸೂರ್ಯನು ಕಣ್ಣಿಗೆ ಕಾಣದೇ ಇರುವಾಗ ಅವರು ಅಸ್ತಮಯವೆಂದು ತಿಳಿದುಕೊಳ್ಳುವರು.

೧೫. ಸೂರ್ಯನು ಭೂಮಿರೇಖೆಯಿಂದ (ಕ್ಷಿತಿಜದಿಂದ) ಬಹಳ ದೂರದಲ್ಲಿ ವುದರಿಂದ, ರಾತ್ರಿಯಲ್ಲಿ ಇವನ ಕಿರಣಗಳು ಕ್ಷಯಹೊಂದುತ್ತವೆ. ಅಂದರೆ ಕ್ಷಿತಿಜದ ಅಧೋಭಾಗವನ್ನು ಹೊಂದುವನು. ಆದುದರಿಂದ ರಾತ್ರಿವೇಳೆಯಲ್ಲಿ ಸೂರ್ಯನು ಗೋಚರನಾಗುವುದಿಲ್ಲವೆಂದು ತಿಳಿಯಬೇಕು. ಕಿರಣಗಳು ಲೀನವಾಗುವ ಕಾಲಕ್ಕೆ ರಾತ್ರಿಯೆಂದು ಹೆಸರಿರುವುದು.

ಲೇಖಾಯಾಮಾಸ್ಥಿತಃ ಸೂರ್ಯೋ ಯತ್ರ ಯತ್ರ ಪ್ರದೃಶ್ಯತೇ ।
ಊರ್ಧ್ವಂ ಶತಸಹಸ್ರಂ ತು ಯೋಜನಾನಾಂ ಸ ದೃಶ್ಯತೇ ॥ ೧೬ ॥

ಏವಂ ಪುಷ್ಕರಮಧ್ಯಂ ತು ಯದಾ ಭವತಿ ಭಾಸ್ಕರಃ ।
ತ್ರಿಂಶದ್ಭಾಗಂ ತು ಮೇದಿನ್ಯಾಂ ಮುಹೂರ್ತೇನ ಸ ಗಚ್ಛತಿ ॥ ೧೭ ॥

ಪೂರ್ಣಂ ಶತಸಹಸ್ರಾಣಾಮೇಕತ್ರಿಂಶಚ್ಛತಾಧಿಕಂ ।
ನಿಮೇಷಾಂತರಮಾತ್ರೇಣ ದಿವಿ ಸೂರ್ಯಃ ಪ್ರಸರ್ಪತಿ ॥ ೧೮ ॥

ಪಂಚಾಶತಾ ತಥಾಽನ್ಯಾನಿ ಸಹಸ್ರಾಣ್ಯಧಿಕಾನಿ ತು ।
ಮೌಹೂರ್ತಿಕೀ ಗತಿರ್ಹ್ಯೇಷಾ ಸೂರ್ಯಸ್ಯ ತು ವಿಧೀಯತೇ ॥ ೧೯ ॥

---

೧೬. ಭೂಮಿರೇಖಾದಲ್ಲಿರುವ ಸೂರ್ಯನು ಒಂದುಲಕ್ಷ ಯೋಜನದೂರ ಮೇಲುಭಾಗದವರೆವಿಗೂ ಕಾಣಿಸುತ್ತಾನೆ. ಅವನು ಗೋಚರನಾಗುವ ಸ್ಥಳದಿಂದ ಅವನು ಇರುವ ಸ್ಥಳಕ್ಕೆ ಸಾಮಾನ್ಯವಾಗಿ ಒಂದುಲಕ್ಷ ಯೋಜನಗಳಿವೆಯೆಂದು ಹೇಳಬಹುದು.

೧೭. ಸೂರ್ಯನು ಖಮಧ್ಯದಲ್ಲಿರುವಾಗ, ಭೂಮಿಯಲ್ಲಿ ಮೂವತ್ತುಭಾಗಕ್ಕೆ ಒಂದು ಮುಹೂರ್ತದಂತೆ ಸಂಚರಿಸುವನು.

೧೮. ಸೂರ್ಯನು, ಅಂತರಿಕ್ಷವನ್ನೆಲ್ಲಾ ಒಟ್ಟು ಒಂದುಲಕ್ಷದ ಮೂರುಸಾವಿರದ ಒಂದುನೂರು ನಿಮೇಷಗಳಲ್ಲಿ ಸಂಚರಿಸುವನು. ಅಂದರೆ, ಸೂರ್ಯನ ಅಂತರಿಕ್ಷ ಸಂಚಾರವು ಇಷ್ಟು ನಿಮೆಷಗಳೆಂದು ತಿಳಿಯಬೇಕು.

೧೯. ಸೂರ್ಯನು ಸಂಚರಿಸುವ ಕಾಲದ ಸಾವಿರದೈನೂರು ನಿಮಿಷಗಳಿಗೆ ಒಂದು ಮುಹೂರ್ತದ ಗತಿ, ಅಥವ ಪ್ರಮಾಣವೆಂದು ತಿಳಿಯಬೇಕು. (ಇಲ್ಲಿ ನಿಮೇಷವೆಂದರೆ ಆರೋಗ್ಯದೃಢಕಾಯನು ರೆಪ್ಪೆ ಮುಚ್ಚಿಬಿಡುವಷ್ಟುಕಾಲ ಎಂದು ತಿಳಿಯಬೇಕು)

ಯೋಜನಾನಾಂ ಸಹಸ್ರೇ ದ್ವೇ ಶತೇ ದ್ವೇ ಚೈವ ಯೋಜನೇ ।
ನಿಮಿಷಾಂತರಮಾತ್ರೇಣ ದಿವಿ ಸೂರ್ಯಃ ಪ್ರಸರ್ಪತಿ ॥ ೨೦ ॥

ಸಶ್ನೀತ್ವೇಮೇವ ಪರ್ಯೇತಿ ಭಾಸ್ಕರೋಽಲಾತಚಕ್ರವತ್ ।
ಭ್ರಮಾದ್ಯೈಃ ಭ್ರಮಮಾಣೇಷು ಋಕ್ಷೇಷು ವಿಹರತ್ಯಸೌ ॥ ೨೧ ॥

ಇಂದ್ರಃ ಪೂಜಯತೇ ಸೂರ್ಯಮುದಯಂತಂ ದಿನೇ ದಿನೇ ।
ಮಧ್ಯಾಹ್ನೇ ಧರ್ಮರಾಜಸ್ತು ಅಸ್ತಂ ಯಾಂತಮಪಾಂ ಪತಿಃ ॥ ೨೨ ॥

ಸೋಮಸ್ತಥಾಽರ್ಧರಾತ್ರೇ ತು ಕುಬೇರಶ್ಚೈವ ಸಾನುಗಃ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಪೂಜಯಂತಿ ನಿಶಾಕ್ಷಯೇ ॥ ೨೩ ॥

---

೨೦. ಸೂರ್ಯನು ಅಂತರಿಕ್ಷದಲ್ಲಿ ಎರಡುಸಾವಿರದ ಇನ್ನೂರು ಯೋಜನಗಳಷ್ಟುದೂರ ಒಂದೇ ನಿಮೇಷಮಾತ್ರದಲ್ಲಿ ಸಂಚರಿಸುವನು.

೨೧. ಸೂರ್ಯನು ಹೀಗೆ ಸಂಚರಿಸುತ್ತಾ ನೂಲುತೆಗೆಯುವ ರಾಟೆಯಂತೆ ಯಾವಾಗಲೂ ಪ್ರವಹವಾಯು ಪ್ರೇರಣೆಯಿಂದ ನಕ್ಷತ್ರಮಂಡಲದಲ್ಲಿ ವಿಹರಿಸುವನು.

೨೨. ಇಂದ್ರನು ಉದಯವಾಗುತ್ತಿರುವ ಸೂರ್ಯನನ್ನು ಯಾವಾಗಲೂ ಪೂಜಿಸುವನು. ಧರ್ಮರಾಜನು [ಯಮನು] ಯಾವಾಗಲೂ ಮಧ್ಯಾಹ್ನಕಾಲದಲ್ಲಿಯೇ ಸೂರ್ಯದೇವನನ್ನಾರಾಧಿಸುವನು. ಹಾಗೆಯೇ ವರುಣನು ಸೂರ್ಯನನ್ನು ಅಸ್ತಮಯಕಾಲದಲ್ಲಿಯೇ ಪೂಜೆಮಾಡುವನು.

೨೩. ಚಂದ್ರನು ಅರ್ಧರಾತ್ರಿಯಲ್ಲಿ ಸೂರ್ಯನನ್ನಾರಾಧಿಸುವನು. ಕುಬೇರನೂ ಸಹ ಆ ವೇಳೆಯಲ್ಲಿಯೇ ತನ್ನ ಅನುಚರರೊಡನೆ ಸೂರ್ಯನನ್ನು ಪೂಜಿಸುವನು. ಬ್ರಹ್ಮಾ, ವಿಷ್ಣು ಮಹೇಶ್ವರರು ರಾತ್ರಿಕಳೆದು, ಬೆಳಗಾಗುವುದಕ್ಕೆ ಮೊದಲು ಅಂದರೆ ಉಷಃಕಾಲದಲ್ಲಿ ಸೂರ್ಯನನ್ನು ಅರ್ಚಿಸುವರು.

**ಏವಮಗ್ನಿರ್ನಿರ್ಋತಿಶ್ಚ ವಾಯುರೀಶಾನ ಏವ ಚ ।**
**ಪೂಜಯಂತಿ ಕ್ರಮೇಣೈವ ಭ್ರಮಮಾಣಂ ದಿವಾಕರಂ ॥ ೨೪ ॥**

**ಇತಿ ಶ್ರೀ ಸಾಂಬಪುರಾಣೇ ವಿಂಶತಿತಮೋऽಧ್ಯಾಯಃ**

---

೨೪. ಹೀಗೆಯೇ ಅಗ್ನಿ, ನಿರ್ಋತಿ, ವಾಯು ಮತ್ತೂ ಈಶಾನರೂ ಸಹ ಕ್ರಮವಾಗಿ, ಸಂಚಾರಮಾಡುತ್ತಾ ಅಂತರಿಕ್ಷದಲ್ಲಿ ಕಾಣುತ್ತಿರುವ ಸೂರ್ಯದೇವನನ್ನು, ಕ್ರಮವಾಗಿ ಪೂಜೆಮಾಡುತ್ತಿರುವರು ಎಂದು ನಾರದ ಮಹರ್ಷಿಯು ಸೂರ್ಯನ ಗತಿ ವೈಚಿತ್ರ್ಯವನ್ನು ಸಾಂಬನಿಗೆ ವಿವರಿಸಿ ಹೇಳಿದನು.

ಇಲ್ಲಿಗೆ ಸಾಂಬಪುರಾಣದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕವಿಂಶೋಽಧ್ಯಾಯಃ



॥ ನಾರದ ಉವಾಚ ॥

ಅಥ ಸೂರ್ಯರಥಸ್ಯಾಽಸ್ಯ ಸನ್ನಿವೇಶಂ ನಿಬೋಧ ಮೇ ।
ಸ್ಯಂದತೇ ಚೈಕಚಕ್ರೇಣ ಪಂಚಾರೇಣ ತ್ರಿನಾಭಿನಾ ॥ ೧ ॥

ಹಿರಣ್ಮಯೇನ ಕಾಂತೇನ ಹ್ಯಷ್ಟಚರ್ಮೈಕನೇಮಿನಾ ।
ಚಕ್ರೇಣ ಭಾಸ್ವತಾ ಚೈವ ದಿವಿ ಸೂರ್ಯಃ ಪ್ರಸರ್ಪತಿ ॥ ೨ ॥

---

## ಇಪ್ಪತ್ತೊಂದನೆಯ ಅಧ್ಯಾಯ.

೧-೨. ನಾರದರು, ಮತ್ತೆ ಸಾಂಬನನ್ನು ಕುರಿತು, " ಅಯ್ಯಾ ಸಾಂಬನೆ, ಈಗ ಸೂರ್ಯನ ರಥದ, ರಚನೆಯು ಯಾವರೀತಿ ಇರುವುದೆಂಬುದನ್ನು, ನಿನಗೆ ತಿಳಿಸುವೆನು ಎಂದು ಹೇಳುತ್ತಾ ಹೀಗೆ ಮುಂದುವರಿಸಿದರು.

ಸೂರ್ಯನ ರಥಕ್ಕೆ ಒಂದೇ ಚಕ್ರವಿರುವುದು. ಆ ಚಕ್ರದಲ್ಲಿ ಐದು ಹಾರಿ ಕಾಲುಗಳಿವೆ. (ಅಂದರೆ ಚಕ್ರದ ಮಧ್ಯದಲ್ಲಿ ಅಡ್ಡಡ್ಡಲಾಗಿ ಹಾಕಿರುವ ಮರದ ಪಟ್ಟಿಗಳು) ಮೂರು ನಾಭಿಗಳಿವೆ ; (ಕಬ್ಬಿಣದ ಸರಳುಗಳು ಪ್ರವೇಶಿಸಲು ಮಾಡಿರುವ ಚಕ್ರದ ಮಧ್ಯಭಾಗದ ರಂಧ್ರಗಳು) ಚಕ್ರದ ನೇಮಿಯು ಚಿನ್ನದಂತೆ ಹೊಳೆಯುತ್ತಿರುವುದು. ನೇಮಿಯೆಂದರೆ ಚಕ್ರದ ಕೊನೆಯಭಾಗ ಅಂದರೆ ಸುತ್ತಲೂ ಸಾಧಾರಣವಾದ ಗಾಡಿಗಳಿಗೆ ಪಟ್ಟಿಗಳಿರುವಂತೆ ಇರುವಭಾಗ. ಈ ನೇಮಿಯು ಎಂಟು ಹೊದಿಕೆಗಳಿಂದ ನಿರ್ಮಿತವಾಗಿದೆ. ಈ ರೀತಿ ಅವಯುವಗಳಿಂದ ಕೂಡಿದ ಒಂದೇ ಒಂದು ಹೊಳೆಯುತ್ತಿರುವ ಚಕ್ರವುಳ್ಳ ಸೂರ್ಯನ ರಥವು ಅಂತರಿಕ್ಷದಲ್ಲಿ ತೇಜಸ್ಸಿನಿಂದ ಸಚರಿಸುತ್ತಿರುವುದು.

ನವಯೋಜನಸಾಹಸ್ರೋ ವಿಸ್ತಾರಾಯಾಮ ಉಚ್ಯತೇ ।
ದ್ವಿಗುಣೋಽಸ್ಯ ರಥೋಪಸ್ಥಾದೀಷಾದಂಡಃ ಪ್ರಮಾಣತಃ ॥ ೩ ॥

ಧುರೇಽಸ್ಯೈವ ತು ವಿಸ್ತೀರ್ಣೇ ಹ್ಯನೂರುರ್ನಾಮ ಸಾರಥಿಃ ।
ಸ ತಸ್ಯ ಬ್ರಹ್ಮಣಾ ಸೃಷ್ಟೋ ರಥಃ ಸಂವತ್ಸರಾತ್ಮಕಃ ॥ ೪ ॥

ಅಸಂಗಃ ಕಾಂಚನೋ ದಿವ್ಯೋ ಯುಕ್ತಃ ಪರಮುಗ್ರೈರ್ಹಯೈಃ ।
ಛಂದೋಭಿರ್ವಾಜಿರೂಪೈಸ್ತೈರ್ಯತಶ್ಚಕ್ರಂ ತತಃ ಸ್ಥಿತೈಃ ॥ ೫ ॥

ತೇನಾಽಸೌ ಸರ್ಪತೇ ವ್ಯೋಮ್ನಿ ಭಾಸ್ವತಾ ತು ದಿವಸ್ಪತಿಃ ॥ ೬ ॥

---

೩. ಸೂರ್ಯನ ರಥದ ವಿಸ್ತಾರವು ಒಂಬತ್ತು ಸಾವಿರ ಯೋಜನಗಳು. ಇದರ ಎರಡರಷ್ಟು ರಥದ ಮೂಕೀ ಮರದ ಪ್ರಮಾಣವಿರುವುದು.

೪. ರಥದ ಎರಡು ದೂರೀಮರಗಳೂ ಇಷ್ಟೇ ಪ್ರಮಾಣವುಳ್ಳವುಗಳು. ಅಂದರೆ ಒಂಬತ್ತು ಸಾವಿರ ಯೋಜನಗಳು. ಈ ಸೂರ್ಯನ ರಥವನ್ನು ನಡೆಸುವ ಸಾರಥಿಗೆ ತೊಡೆಗಳೆ ಇಲ್ಲ. (ಅರುಣನು) ಸಂವತ್ಸರ ಸ್ವರೂಪವಾದ ಈ ರಥವು ಬ್ರಹ್ಮನಿಂದ, ಸೂರ್ಯನಿಗೋಸ್ಕರ ಸೃಷ್ಟಿಮಾಡಲ್ಪಟ್ಟಿತು.

೫. ಈ ಸೂರ್ಯನ ರಥವು ಸುವರ್ಣಮಯವಾಗಿರುವುದು. ಇದಕ್ಕೆ ಯಾವವಸ್ತು ಸಂಬಂಧವೂ ಇಲ್ಲ. ಈ ರಥವನ್ನು ಅತಿ ವೇಗವುಳ್ಳ, ಛಂದೋರೂಪವಾದ ಏಳು ಕುದುರೆಗಳು ಚಕ್ರದ ಸಮೀಪದಲ್ಲಿ ಇರುತ್ತಾ, ಅಂತರಿಕ್ಷದಲ್ಲಿ ಎಳೆದುಕೊಂಡು ಹೋಗುವುವು. ಅಂದರೆ ಕುದುರೆಗಳು ಎಳೆದುಕೊಂಡು ಹೋಗುವುದಕ್ಕೆ ಅನುಕೂಲವಾಗುವಂತೆ ಚಕ್ರದ ಪಕ್ಕದಲ್ಲಿ ಸರ್ಪರೂಪವಾದ ಹಗ್ಗಗಳು ಕಾಣುತ್ತಿವೆ.

೬. ಸೂರ್ಯಪರಮಾತ್ಮನು, ಈ ಹೊಳೆಯುತ್ತಿರುವ ಚಿನ್ನದಮಯವಾದ ರಥದಲ್ಲಿ ಕುಳಿತು, ಛಂದೋರೂಪವಾದ ಏಳು ಕುದುರೆಗಳಿಂದ ಎಳೆಯಲ್ಪಡುತ್ತಾ ಅರುಣಕಾಂತಿಯಿಂದ ಅಂತರಿಕ್ಷವನ್ನೆಲ್ಲಾ ಸಂಚರಿಸುವನು.

ಅಥ ಮಾರೀಚಸೂರ್ಯಸ್ಯ ಪ್ರತ್ಯಂಗಾನಿ ರಥಸ್ಯ ತು ।
ಸಂವತ್ಸರಸ್ಯಾವಯವೈಃ ಕಲ್ಪಿತಾನಿ ಯಥಾಕ್ರಮಮ್ ॥ ೭ ॥

ನಾಭ್ಯಸ್ತ್ರಿಸ್ರಸ್ತು ಚಕ್ರಸ್ಯ ತ್ರಯಃ ಕಾಲಾಃ ಪ್ರಕೀರ್ತಿತಾಃ ।
ಆರಾಃ ಪಂಚರ್ತವಸ್ತಸ್ಯ ನೇಮಿಃ ಷಡೃತವಃ ಸ್ಮೃತಾಃ ॥ ೮ ॥

ತಥೋರ್ವ್ಯೌ ದ್ವೇ ಸ್ಮೃತೇ ತಸ್ಯ ಚಾಯನೇ ದಕ್ಷಿಣೋತ್ತರೇ ।
ಮುಹೂರ್ತಾಬಂಧುರಾಸ್ತಸ್ಯ ಸವ್ಯಾಶ್ಚಾಸ್ಯ ಕಲಾಃ ಸ್ಮೃತಾಃ ॥ ೯ ॥

ತಸ್ಯ ಕಾಷ್ಠಾಃ ಸ್ಮೃತಾ ಘೋಣಾ ಹ್ಯಕ್ಷದಂಡಾಃ ಕ್ಷಣಾಸ್ತು ವೈ ।
ನಿಮೇಷಾಶ್ಚಾನುಕರ್ಷಾಶ್ಚ ಈಷಾಚಾಸ್ಯ ಲವಾಃ ಸ್ಮೃತಾಃ ॥ ೧೦ ॥

ನಾಭಿರ್ಧನುರ್ದ್ಧ್ವರೇ ಧರ್ಮಸ್ಯ ಊರ್ಧ್ವಂ ತಸ್ಯ ಸಮುಚ್ಛ್ರಿತಃ ।
ಯುಗಾಕ್ಷಕೌ ತು ತೌ ತಸ್ಯ ಚಾರ್ಥಕಾಮಾವುಭೌ ಸ್ಮೃತೌ ॥ ೧೧ ॥

---

೭. ಮರೀಚ ಬ್ರಹ್ಮನ ಮೊಮ್ಮಗನಾದ ಸೂರ್ಯದೇವನ ರಥದ ಅವಯವಗಳು ಸಂವತ್ಸರದ ಅಂಗಗಳಿಂದ ಕ್ರಮವಾಗಿ ಕೂಡಿದೆ. ರಥವು ಸಂವತ್ಸರ ಸ್ವರೂಪವಾಗಿರುವುದರಿಂದ, ಅದರ ಪ್ರತಿಯೊಂದು ಭಾಗವೂ ಸಂವತ್ಸರದ ಭಾಗಗಳಿಂದ ಕೂಡಿದೆಎಂದು ತಿಳಿಯಬೇಕು.

೮. ಚಕ್ರದ ಮೂರುನಾಭಿಗಳೂ (ಮಧ್ಯಭಾಗ) ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲ, ಎಂಬ ಮೂರುಕಾಲಗಳೆಂದು ಹೇಳುವರು. ಚಕ್ರದ ಐದು, ಹಾರೆಕೋಲುಗಳೂ, ಮತ್ತು ಚಕ್ರದನೇಮಿಯೂ, (ಕೊನೆಯಭಾಗ) ಒಟ್ಟು ಈ ಆರೂ, ವಸಂತ ಗ್ರೀಷ್ಮ, ವರ್ಷ, ಶರತ್, ಹೇಮಂತ ಮತ್ತು ಶಿಶಿರ ಋತುಗಳೆನಿಸಿವೆ.

೯-೧೧. ರಥದ ಅಕ್ಕಪಕ್ಕಗಳ ಚಲನೆ ವಲನೆಗಳೇ ದಕ್ಷಿಣಾಯನ ಉತ್ತರಾಯಣಗಳೆನಿಸಿವೆ. ರಥದ ಬಂಧಗಳೇ ಮುಹೂರ್ತಗಳು. ಜಲಭಾಗವೆಲ್ಲಾ ಕಲಾತ್ಮಕವಾಗಿದೆ. ರಥದ ಮೂಕಿಯೇ ಕಾಷ್ಠ (ಕಾಲವಿಶೇಷ) ವೆನಿಸಿದೆ ರಥದ ಅಚ್ಚು ಕ್ಷಣಾತ್ಮಕವಾಗಿದೆ. ಅಚ್ಚಿನ ಪಟ್ಟಿಯೇ ನಿಮೇಷವೆನಿಸಿದೆ. ಈಚುಗೋಲೇ ಲವರೂಪವು. ಅತ್ಯಂತ ಎತ್ತರವಾಗಿರುವ ರಥದ ಊರ್ಧ್ವಭಾಗವೇ ಧರ್ಮ. ರಥದ ಮುಂದಿನ ನೊಗವು ಅರ್ಥವೆಂಬುದು. ನೊಗದ ಪಟ್ಟಿಯೇ ಕಾಮವೆಂಬ ಪುರುಷಾರ್ಥವು.

**ಅಶ್ವರೂಪಾಣಿ ಛಂದಾಂಸಿ ವಹಂತೇ ಕ್ರಮತೋ ಧುರಂ ।**
**ಗಾಯತ್ರೀ ಚೈವ ತ್ರಿಷ್ಟುಪ್ ಚ ಜಗತ್ಯನುಷ್ಟುಬೇವ ಚ ॥ ೧೨ ॥**

**ಪಂಕ್ತಿಶ್ಚ ಬೃಹತೀ ಚೈವ ಉಷ್ಣಿಗೇವ ಚ ಸಪ್ತಮೀ ।**
**ಚಕ್ರಮಕ್ಷನಿಬದ್ಧಂ ತು ಧ್ರುವೇ ಚಾಕ್ಷಃ ಸಮರ್ಥಿತಃ ॥ ೧೩ ॥**

**ಸಹ ಚಕ್ರೋ ಭ್ರಮತ್ಯಕ್ಷಃ ಸ ಚಾಽಕ್ಷೋ ಭ್ರಮತೇ ಧ್ರುವೇ ।**
**ಸೋಽಕ್ಷಃ ಸಹೈವ ಚಕ್ರೇಣ ಭ್ರಮತೇಽಸೌ ಧ್ರುವೇರಿತಃ ॥ ೧೪ ॥**

**ಏವಮರ್ಥವಶಾತ್ತಸ್ಯ ಸನ್ನಿವೇಶೋ ರಥಸ್ಯ ತು ।**
**ತಥಾ ಸಂಸರ್ಪ್ಯತೇ ವ್ಯೋಮ್ನಿ ಸಂಸಿದ್ಧೋ ಭಾಸ್ಕರೋ ರಥಃ ॥ ೧೫ ॥**

---

೧೨. ಸೂರ್ಯನ ರಥದ ಭಾರವನ್ನು ಛಂದೋರೂಪವಾದ ಕುದುರೆಗಳು ಎಳೆಯುವುವೆಂದು ಹೇಳಿದೆ. ಅವುಗಳಲ್ಲಿ, 1) ಗಾಯತ್ರಿ, 2) ತ್ರಿಷ್ಟುಪ್, 3) ಜಗತೀ 4) ಅನುಷ್ಟುಪ್, 5) ಪಂಕ್ತಿ, 6) ಬೃಹತೀ ಮತ್ತು 7) ಉಷ್ಣಿಕ್ ಈ, ಏಳು ಛಂದಸ್ಸುಗಳೇ ಸೂರ್ಯನ ಏಳು ಕುದುರೆಗಳಾಗಿರುವುವು.

೧೩. ಸೂರ್ಯನ ರಥದ ಚಕ್ರವು ಅಚ್ಚಿನಿಂದ ಯುಕ್ತವಾಗಿದೆ. ಆ ಅಚ್ಚು ಉತ್ತರ ಧ್ರುವದಿಂದ ದಕ್ಷಿಣಧ್ರುವದವರೆಗೂ ವ್ಯಾಪಿಸಿದೆ.

೧೪. ಈ ರಥದ ಅಚ್ಚುಮಣೆಯು ಚಕ್ರದೊಡನೆಯೇ ತಿರುಗುವುದು. ಅಂದರೆ ಎಲ್ಲಾ ರಥಗಳಿಗೂ ಅಚ್ಚಿನ ಮಣೆಯಿದ್ದರೂ, ಅವುಗಳುಮಾತ್ರ ತಿರುಗುವುದಿಲ್ಲ. ಚಕ್ರಮಾತ್ರ ತಿರುಗುವುದು ಸ್ವಾಭಾವಿಕವಾಗಿದೆ. ಈ ಸೂರ್ಯನ ರಥದ ಅಚ್ಚು ಮಾತ್ರ ಚಕ್ರದೊಡನೆಯೇ, ತಿರುಗುವುದೆಂದು ತಿಳಿಯಬೇಕು. ಈ ಅಚ್ಚಿನಮಣೆಯು ಧ್ರುವದಲ್ಲಿ ಮಾತ್ರ ತಿರುಗುವುದು. ಅಂದರೆ, ಅಚ್ಚು, ಚಕ್ರದೊಡನೆ ಧ್ರುವದಲ್ಲಿ ತಿರುಗುವಂತೆ ನಿರ್ಮಿತವಾಗಿದೆ. (ಇದರಿಂದ ಧ್ರುವಸ್ಥಾನಗಳಿಗೂ ಸ್ವಲ್ಪ ಚಲನೆಯುಂಟೆಂದು ಭಾವಿಸಬೇಕು)

೧೫. ಈ ರೀತಿ ಸೂರ್ಯನ ರಥವು, ಪ್ರಯೋಜನದ ಅವಶ್ಯಕತೆಯಿಂದ, ನಾನಾರೂಪವಾದ, ಕಾಲಾವಯವಗಳಿಂದ ನಿರ್ಮಿತವಾಗಿದೆ. ಇಂತಹ ರಥವು ಅಂತರಿಕ್ಷದಲ್ಲಿ ಸಂಚಾರಮಾಡಲು ಯೋಗ್ಯವಾಗುವಂತೆ ದೈವನಿರ್ಮಿತವಾಗಿರುವುದು.

ಜೇತಾऽಸೌ ತು ರವಿರ್ದೇವಾನ್ ನಭಃ ಸಂಸರ್ಪತೇ ತದಾ ।
ಯುಗಾಕ್ಷಕೋಟಿಸಂಬದ್ಧೇ ತಸ್ಯ ವೈ ಸ್ಯಂದನಸ್ಯ ತು ॥ ೧೬ ॥

ತೇ ಭ್ರಮೇತೇ ಧ್ರುವಾಸಕ್ತೇ ತಚ್ಚಕ್ರಯುಗಯೋಸ್ತು ವೈ ।
ಭ್ರಮತೋ ಮಂಡಲಾನ್ಯಸ್ಯ ಖೇಚರಸ್ಯ ರಥಸ್ಯ ತು ॥ ೧೭ ॥

ಕುಲಾಲಚಕ್ರವದ್ಭಾತಿ ಮಂಡಲಂ ಸರ್ವತೋ ದಿಶಂ ।
ರಜ್ಜುಭ್ಯಾಂ ಪ್ರಗೃಹೀತೇ ತೇ ಚಕ್ರೇ ವೈ ಚೇರತುರ್ಧ್ರುವೇ ॥ ೧೮ ॥

ಹ್ರಸೇತೇ ತಸ್ಯ ರಶ್ಮೀ ತೇ ಮಂಡಲೇ ದಕ್ಷಿಣಾಯನೇ ।
ಉತ್ತರೇ ತ್ವಥ ವರ್ಧೇತೇ ಪುರಾ ರಶ್ಮಿಯುಗೇ ತು ವೈ ॥ ೧೯ ॥

---

೧೬. ಸಕಲದೇವತೆಗಳನ್ನೂ ಜಯಿಸಿದಂತಹ ಸೂರ್ಯದೇವನು, ನೊಗ, ಅಚ್ಚು ಇವುಗಳಿಂದ ಕೂಡಿದ ರಥದಲ್ಲಿ ಮಾತ್ರ ಸಂಬಂಧವನ್ನೂ ಪಡೆದು ಅಂತರಿಕ್ಷ ಮಾರ್ಗದಲ್ಲಿ ಸಂಚರಿಸುವನು.

೧೭-೧೮. ಅಂತರಿಕ್ಷಗಾಮಿಯಾದ ಸೂರ್ಯನ ರಥ ಚಕ್ರಗಳೆರಡೂ ಧ್ರುವ ಸಂಬಂಧವಾಗಿ ಮಂಡಲಾಕಾರದಿಂದ ಹೊಳೆಯುತ್ತಿರುವುವು. ಅದು ಭೂಲೋಕಕ್ಕೆ ಕುಂಬಾರನ ಚಕ್ರದಂತೆ ತೋರಿಬರುತ್ತಾ, ಎರಡು ರಜ್ಜುಗಳಿಂದ ಕಟ್ಟಲ್ಪಟ್ಟಂತೆ ಧ್ರುವ ಸ್ಥಾನದಲ್ಲಿ ಸುತ್ತುತ್ತಿರುವುವು.

೧೯-೨೦. ಆ ಸೂರ್ಯರಥದ ಕಿರಣಗಳು ದಕ್ಷಿಣಾಯನದಲ್ಲಿ ಸ್ವಲ್ಪ ಮಂಕಾಗಿ ಇರುತ್ತವೆ. ಉತ್ತರಾಯಣಕಾಲದಲ್ಲಿ ಕಿರಣಗಳು ಅಭಿವೃದ್ಧಿಗಳಾಗುವುವು. ಅದೇ ರೀತಿ ಸೂರ್ಯಮಂಡಲದ ಕಿರಣಗಳೂ ಸಹ ವೃದ್ಧಿಹ್ರಾಸಗಳನ್ನು ಪಡೆಯುತ್ತಾ ಮಂಡಲದ ಬಹಿರ್ಭಾಗವನ್ನೆಲ್ಲಾ ಪ್ರಕಾಶಗೊಳಿಸುವುವು. ಆ ಮಂಡಲದ ದಕ್ಷಿಣೋತ್ತರಗಳ ಅಂತರವು ಎಂಟು ಸಾವಿರ ಮಂಡಲಗಳಷ್ಟು ದೂರವಾಗಿ ಕಾಣುವುದು. (ಅಂದರೆ ನಮ್ಮ ಭರತಖಂಡವು ಉತ್ತರ ಅಕ್ಷಾಂಶದಲ್ಲಿ ಸೇರಿರುವುದರಿಂದ ದಕ್ಷಿಣಾಯನ ಕಾಲದಲ್ಲಿ ಸೂರ್ಯರಶ್ಮಿಗಳು ನೇರವಾಗಿ ನಮ್ಮ ದೇಶಕ್ಕೆ ಬೀಳಲಾರವು. ಉತ್ತರಾಯಣ

ತಥೈವ ಬಾಹ್ಯತಸ್ಸೂರ್ಯೋ ಭ್ರಮತೇ ಮಂಡಲಾನಿ ತು ।
ಅಶೀತಿಮಂಡಲಶತಂ ಕಾಷ್ಠಯೋರಂತರಂ ತಯೋಃ ॥ ೨೦ ॥

ಸ ರಥೋಽಧಿಷ್ಠಿತೋ ದೇವೈರಾದಿತ್ಯೈಃ ಋಷಿಭಿಸ್ತಥಾ ।
ಗಂಧರ್ವೈರಪ್ಸರೋಭಿಶ್ಚ ಸರ್ಪಗ್ರಾಮಣಿರಾಕ್ಷಸೈಃ ॥ ೨೧ ॥

ಏತೇ ವಸಂತಿ ಸೂರ್ಯೇ ವೈ ಮಾಸೌ ದ್ವೌ ದ್ವೌ ಕ್ರಮೇಣ ತು ।
ಧಾತಾಽರ್ಯಮಾ ಪುಲಸ್ತ್ಯಶ್ಚ ಪುಲಹಶ್ಚ ಪ್ರಜಾಪತಿಃ ॥ ೨೨ ॥

ಉರಗೋ ವಾಸುಕಿಶ್ಚೈವ ಕಚ್ಛನೀರಸ್ತಥೇರಿತಃ ।
ತುಂಬುರುರ್ನಾರದಶ್ಚೈವ ಗಂಧರ್ವೌ ಗಾಯತಾಂ ವರೌ ॥ ೨೩ ।

ಕೃತಸ್ಥಲ್ಯಪ್ಸರಾಶ್ಚೈವ ಯಾ ತಥಾ ಪುಂಜಿಕಸ್ಥಲಾ ।
ಗ್ರಾಮಣ್ಯೌ ರಥಗೃತ್ಸ್ನಶ್ಚ ರಥೌಜಾಶ್ಚೈವ ತಾವುಭೌ ॥ ೨೪ ॥

---

ಕಾಲದಲ್ಲಿ ಕಿರಣಗಳ ನೇರವಾದ ಸಂಪರ್ಕವಿರುವುದರಿಂದ ಸೂರ್ಯನ ತಾಪವು ಹೆಚ್ಚಾಗಿ ತೋರುವುದು. ಇದನ್ನೇ ಪ್ರಕಾರಾಂತರವಾಗಿ ಹೀಗೆ ವರ್ಣಿಸಿರುವರು.)

೨೧. ಆ ಸೂರ್ಯದೇವನ ರಥವು. ದೇವತೆಗಳಿಂದಲೂ, ದ್ವಾದಶಾದಿತ್ಯರಿಂದಲೂ, ಋಷಿಗಳಿಂದಲೂ, ಗಂಧರ್ವರಿಂದಲೂ, ಅಪ್ಸರ ಸ್ತ್ರೀಯರಿಂದಲೂ, ನಾಗಶ್ರೇಷ್ಠರೇ ಮೊದಲಾದ ರಾಕ್ಷಸರಿಂದಲೂಸಹ ಕೂಡಿದೆ. ಅಂದರೆ ಇವರೆಲ್ಲರೂ ಆ ರಥದಲ್ಲಿ ಸೂರ್ಯದೇವನ ಜೊತೆಯಲ್ಲಿಯೇ ಇರುವರು.

೨೨-೨೫. ಧಾತಾ, ಅರ್ಯಮ, ಪುಲಸ್ತ್ಯ, ಪುಲಹ, ವಾಸುಕಿ ಎಂಬ ಸರ್ಪ, ಕಚ್ಛನೀರನೆಂಬ ಸರ್ಪ, ಗಾನವಿದ್ಯಾ ನಿಪುಣರಾದ ತುಂಬುರು ಮತ್ತು ನಾರದರು, ಕೃತಸ್ಥಲೀ ಮತ್ತು ಪುಂಜಿಕಸ್ಥಲಾ ಎಂಬೀರ್ವರು, ಅಪ್ಸರಸ್ತ್ರೀಯರು, ರಥಗೃತ್ಸ್ನ ಮತ್ತು ರಥೌಜಾ ಎಂಬ ಇಬ್ಬರು ರಾಕ್ಷಸರೂ, ವಸಂತ ಮತ್ತು ಮಹಾಲಕ್ಷ್ಮಿಯ ಪತಿಯಾದ ನಾರಾಯಣ ಇವರೂ ಕ್ರಮವಾಗಿ, ಎರಡೆರಡು ತಿಂಗಳು

ರಕ್ಷೋಹೇತಿಃ ಪ್ರಹೇತಿಶ್ಚ ಯಾತುಧಾನೌ ಸ್ಮೃತಾವುಭೌ ।
ಮಧುಮಾಧವಯೋರೇವ ಗಣೋ ವಸತಿ ಭಾಸ್ಕರೇ ॥ ೨೫ ॥

ವಸಂತೋ ಗ್ರೈಷ್ಮಿಕೌ ಮಾಸೌ ಮಿತ್ರಶ್ಚ ವರುಣಶ್ಚ ಹ ।
ಋಷಿರತ್ರಿರ್ವಸಿಷ್ಠಶ್ಚ ತಕ್ಷಕೋಽನಂತ ಏವಚ ॥ ೨೬ ॥

ಮೇನಕಾ ಸಹಜನ್ಯಾಚ ಗಂಧರ್ವೌಚ ಹಹಾಹುಹೂಃ ।
ರಥಸ್ವನಶ್ಚ ಗ್ರಾಮಣ್ಯೌ ರಥಚಿತ್ರಶ್ಚ ತಾವುಭೌ ॥ ೨೭ ॥

ಪೌರುಷೇಯೋ ವಧಶ್ಚೈವ ಯಾತುಧಾನೌ ಚ ತಾವುಭೌ ।
ಶುಚಿಶುಕ್ರೌ ತು ದ್ವೌ ಮಾಸೌ ಸೂರ್ಯೇ ಹ್ಯೇತೇ ವಸಂತಿ ವೈ ॥ ೨೮ ॥

ಅಥ ಸೂರ್ಯೇ ಪುನಸ್ತ್ವನ್ಯಾ ನಿವಸಂತಿ ಸ್ಮ ದೇವತಾಃ ।
ಇಂದ್ರಶ್ಚೈವ ವಿವಸ್ವಾಂಶ್ಚ ಅಂಗಿರಾ ಭೃಗುರೇವ ಚ ॥ ೨೯ ॥

---

ಕಾಲ ಸೂರ್ಯದೇವನಲ್ಲಿ ನೆಲಸುವರು. ಅದರಲ್ಲಿ ವಸಂತಋತುವಿಗೆ ಸಂಬಂಧಿಸಿದ ದೇವತೆಗಳೆಂದರೆ ಮೇಲೆಹೇಳಿದವರೇ.

೨೬-೨೮. ಜ್ಯೇಷ್ಠ, ಆಷಾಢ ಮಾಸಾತ್ಮಕವಾದ ಗ್ರೀಷ್ಮ ಋತುವಿನಲ್ಲಿ, ಮಿತ್ರ ಮತ್ತು ವರುಣ ಇವರಿಬ್ಬರೂ ಸೂರ್ಯಮಂಡಲದಲ್ಲಿ ವಾಸಿಸುವರು. ಅಲ್ಲದೆ ಅತ್ರಿ ಮತ್ತು ವಸಿಷ್ಠಮಹರ್ಷಿಗಳೂ, ತಕ್ಷಕ, ಅನಂತ ಎಂಬ ಸರ್ಪಶ್ರೇಷ್ಠರೂ ಮೇನಕ, ಸಹಜನ್ಯ ಎಂಬ ಇಬ್ಬರು ಅಪ್ಸರಸ್ತ್ರೀಯರೂ, ಹಾಹಾ, ಹೂಹೂ ಎಂಬ ಇಬ್ಬರು ಗಂಧರ್ವರೂ, ರಥಸ್ವನ ಮತ್ತು ರಥಚಿತ್ರರೆಂಬ, ಇಬ್ಬರು ಗ್ರಾಮಣಿ ದೇವತೆಗಳೂ, ಪೌರುಷೇಯ ಮತ್ತು ವಧ ಎಂಬ ಇಬ್ಬರು ರಾಕ್ಷಸರೂ, ಅಗ್ನಿ ಮತ್ತು ಶುಕ್ರರೂ, ಸೂರ್ಯಮಂಡಲದಲ್ಲಿ ವಾಸಮಾಡುವರು. .

೨೯-೩೧. ಶ್ರಾವಣ, ಭಾದ್ರಪದಮಾಸಗಳಿಂದ ಉಂಟಾದ ವರ್ಷಋತುವಿನಲ್ಲಿ ಇಂದ್ರನೂ, ವಿವಸ್ವಂತನೂ ಮತ್ತು ಅಂಗಿರಸಮಹರ್ಷಿಗಳೂ ಮತ್ತು ಭೃಗುಮಹರ್ಷಿಗಳೂ, ಏಲಾಪತ್ರ ಮತ್ತೂ ಶಂಖಪಾಲರೆಂಬ ಇಬ್ಬರು ಸರ್ಪಶ್ರೇಷ್ಠರೂ

ಏಲಾಪತ್ರಸ್ತಥಾ ಶಂಖಪಾಲಃ ಸರ್ಪೌ ಚ ತಾವುಭೌ ।
ವಿಶ್ವಾವಸೂಗ್ರಸೇನೌ ಚ ಪ್ರೋತೋಽಸಮುರಥಸ್ತಥಾ ॥ ೩೦ ॥

ಪ್ರಮ್ಲೋಚಂತ್ಯಪ್ಸರಾಶ್ಚೈವಾಽನುಮ್ಲೋಚಂತೀ ಚ ತೇ ಶುಭೇ ।
ಯಾತುಧಾನೌ ತಥಾ ಸರ್ಪೋ ವ್ಯಾಘ್ರಶ್ಚೈವ ಸ್ಮೃತಾವುಭೌ ॥ ೩೧ ॥

ಏತೇ ನಭೋ ನಭಸ್ಯೌ ಚ ನಿವಸಂತಿ ದಿವಾಕರೇ ।
ಶರದ್ಯನ್ಯಾಃ ಪುನಃ ಶುಭ್ರಾ ನಿವಸಂತಿಸ್ಮ ದೇವತಾಃ ॥ ೩೨ ॥

ಪರ್ಜನ್ಯಶ್ಚೈವ ಪೂಷಾ ಚ ಭಾರದ್ವಾಜಃ ಸಗೌತಮಃ ।
ಚಿತ್ರಸೇನಶ್ಚ ಗಂಧರ್ವಃ ತಥಾ ವಸುರುಚಿಶ್ಚ ಯಃ ॥ ೩೩ ॥

ವಿಶ್ವಾಚೀಚ ಘೃತಾಚೀ ಚ ಉಭೇ ತೇ ಪುಣ್ಯಲಕ್ಷಣೇ ।
ನಾಗಸ್ತ್ವೈರಾವತಶ್ಚೈವ ವಿಶ್ರುತಶ್ಚ ಧನಂಜಯಃ ॥ ೩೪ ॥

---

ವಿಶ್ವಾವಸು ಮತ್ತು ಉಗ್ರಸೇನರೂ, ಪ್ರೋತ ಮತ್ತು ಅಸಮುರ್ಥರೆಂಬ ಇಬ್ಬರೂ ಪ್ರಮ್ಲೋಚಂತೀ ಮತ್ತು ಅನುಮ್ಲೋಚಂತೀ ಎಂಬ ಇಬ್ಬರು ಅಪ್ಸರಸ್ತ್ರೀಯರೂ, ಸರ್ಪ ಮತ್ತು ವ್ಯಾಘ್ರರೆಂಬ ಇಬ್ಬರು ರಾಕ್ಷಸರೂ, ಕೂಡ ಸೂರ್ಯನಲ್ಲಿ ಅಂದರೆ ಸೂರ್ಯಮಂಡಲದಲ್ಲಿ ವಾಸಮಾಡುವರು.

೩೨-೩೫. ಆಶ್ವಯುಜ ಮತ್ತು ಕಾರ್ತಿಕಮಾಸಗಳೆರಡೂ ಶರದೃತುವಿಗೆ ಸೇರಿದ ತಿಂಗಳುಗಳು. ಈ ಎರಡು ತಿಂಗಳುಗಳಲಿ ಸೂರ್ಯಮಂಡಲದಲ್ಲಿ, ಪರಿಶುದ್ಧರಾದ, ಪರ್ಜನ್ಯ, ಪೂಷಾ, ಎಂಬಿಬ್ಬರೂ, ಭಾರದ್ವಾಜ ಮತ್ತು ಗೌತಮ ಋಷಿಗಳೂ, ಚಿತ್ರಸೇನ ಮತ್ತು ವಸುರುಚಿಯೆಂಬ ಇಬ್ಬರು ಗಂಧರ್ವರೂ, ಮಂಗಳಸ್ವರೂಪರಾದ, ವಿಶ್ವಾಚೀ ಮತ್ತು ಘೃತಾಚೀ ಎಂಬೀರ್ವರೂ, ಅಪ್ಸರಸ್ತ್ರೀಯರೂ, ಐರಾವತವೆಂಬ ಸರ್ಪವೂ, ಪ್ರಸಿದ್ಧನಾದ ಧನಜನೆಂಬ ನಾಗನೂ, ಸೇನಾಪತಿಯಾದ ಸೇನಜಿತ್ ಎಂಬುವನೂ, ಸುಷೇಣನೆಂಬ ಗ್ರಾಮಣೀ ದೇವತೆಯೂ, ಮತ್ತು ಆಪವಾತ ಎಂಬ ಇಬ್ಬರು ರಾಕ್ಷಸರೂ, ಸಹ ವಾಸಮಾಡುವರು.

ಸೇನಜಿಚ್ಚ ಸುಷೇಣಶ್ಚ ಸೇನಾನೀಗ್ರಾಮಣೀಶ್ಚ ತೌ ।
ಅಪೋವಾತಶ್ಚ ದ್ವಾವೇತೌ ಯಾತುಧಾನೌ ಪ್ರಕೀರ್ತಿತೌ ॥ ೩೫ ॥

ವಸಂತ್ಯೇತೇ ತು ವೈ ಸೂರ್ಯೇ ಇಷೋರ್ಜೌ ಕಾಲಪರ್ಯಯಾತ್ ।
ಹೈಮಂತಿಕೌ ತು ದ್ವೌ ಮಾಸೌ ವಸಂತಿ ತು ದಿವಾಕರೇ ॥ ೩೬ ॥

ಅಂಶೋಭಾಗಶ್ಚ ದ್ವಾವೇತೌ ಕಶ್ಯಪಶ್ಚ ಕ್ರತುಶ್ಚ ತೌ ।
ಭುಜಂಗಶ್ಚ ಮಹಾಪದ್ಮಃ ಸರ್ಪಃ ಕರ್ಕೋಟಕಸ್ತಥಾ ॥ ೩೭ ॥

ಚಿತ್ರಾಂಗದಶ್ಚ ಗಂಧರ್ವ ಊರ್ಣಾಯುಶ್ಚೈವ ತಾವುಭೌ ।
ಅಪ್ಸರಾಃ ಪೂರ್ವಚಿತ್ತಿಶ್ಚ ಗಂಧರ್ವಾಚೋರ್ವಶೀ ತಥಾ ॥ ೩೮ ॥

ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಸೇನಾನೀಗ್ರಾಮಣೀಶ್ಚ ತೌ ।
ಅವಸ್ಫೂರ್ಜಶ್ಚ ವಿದ್ಯುಚ್ಚ ಯಾತುಧಾನೌ ತು ತೌ ಸ್ಮೃತೌ ॥ ೩೯ ॥

---

ಇಷ, ಊರ್ಜ, ಎಂಬ ಮಾಸಾಭಿಮಾನ ದೇವತೆಗಳು ಕಾಲವನ್ನು ಅನುಸರಿಸಿ ಸೂರ್ಯನ ಸಮೀಪದಲ್ಲಿಯೇ ವಾಸಿಸುವರು.

೩೬-೩೯. ಮಾರ್ಗಶಿರ ಮತ್ತು ಪುಷ್ಯ ಈ ಎರಡುಮಾಸಗಳಿಗೆ ಹೇಮಂತ ಋತುವೆನ್ನುವರು. ಈ ಹೇಮಂತಋತುವಿನ ಎರಡು ತಿಂಗಳಲ್ಲಿ ಸೂರ್ಯನ ಸಮೀಪದಲ್ಲಿ ಅಂಶ ಮತ್ತು ಭಾಗ ಎಂಬ ನಾಮಾಂತರಗಳುಳ್ಳ ಕಶ್ಯಪ ಮತ್ತು ಕ್ರತು ಎಂಬೀವರರೂ, ಮಹಾ ಪದ್ಮನೆಂಬ ಭುಜಂಗನೂ, ಕರ್ಕೋಟಕನೆಂಬ ಸರ್ಪನೂ, ಚಿತ್ರಾಂಗದ ಮತ್ತು ಊರ್ಣಾಯು ಎಂಬ ಗಂಧರ್ವರೂ, ಪೂರ್ವಚಿತ್ತಿಯೆಂಬ ಅಪ್ಸರಸ್ತ್ರೀಯೂ, ಊರ್ವಶಿಯೆಂಬ ಗಂಧರ್ವಸ್ತ್ರೀಯೂ, ತಾರ್ಕ್ಷ್ಯನೆಂಬ ಸೇನಾಪತಿಯೂ, ಅರಿಷ್ಟನೇಮಿಯೆಂಬ ಗ್ರಾಮಣೀ ದೇವತೆಯೂ, ಅವಸ್ಫೂರ್ಜ ಮತ್ತು ವಿದ್ಯುತ್ ಎಂಬ ಇಬ್ಬರು ರಾಕ್ಷಸರೂ, ಸಹೇ ಮತ್ತು ಸಹಸ್ಯೇ ಎಂಬ ಮಾಸಾಭಿಮಾನಿ ದೇವತೆಗಳೂ, ವಾಸಮಾಡುವರು.

ಸಹೇಚೈವ ಸಹಸ್ಯೇಚ ವಸಂತ್ಯೇತೇ ದಿವಾಕರೇ ।
ತತಃ ಶೈಶಿರಯೋಶ್ಚಾಪಿ ಮಾಸಯೋರ್ನಿವಸಂತಿ ವೈ ॥ ೪೦ ॥

ತ್ವಷ್ಟಾ ವಿಷ್ಣುರ್ಜಮದಗ್ನಿರ್ವಿಶ್ವಾಮಿತ್ರಸ್ತಥೈವ ಚ ।
ಕಾದ್ರವೇಯೌ ತಥಾ ನಾಗೌ ಕಂಬಲಾಶ್ವತರಾವುಭೌ ॥ ೪೧ ॥

ಗಂಧರ್ವೌ ಧೃತರಾಷ್ಟ್ರಶ್ಚ ಸೂರ್ಯವರ್ಚಾಶ್ಚ ತಾವುಭೌ ।
ಇತ್ಯೇತೇ ನಿವಸಂತಿ ಸ್ಮ ದ್ವೌ ದ್ವೌ ಮಾಸೌ ದಿವಾಕರೇ ॥ ೪೨ ॥

ಸ್ಥಾನಾಭಿಮಾನಿನೋ ಹ್ಯೇತೇ ಗಣಾ ದ್ವಾದಶಸಪ್ತಕಾಃ ।
ತಿಲೋತ್ತಮಾ ಚ ರಂಭಾ ಚ ಶುಭೇ ಚಾಪ್ಸರಸಾಂ ವರೇ ॥ ೪೩ ॥

---

೪೦-೪೨. ಮಾಘ, ಫಾಲ್ಗುಣ ಈ ಎರಡು ತಿಂಗಳುಗಳಿಗೂ ಶಿಶಿರ ಋತುವೆಂದು ವ್ಯವಹಾರವಿದೆ. ಈ ಎರಡುತಿಂಗಳಲ್ಲಿ, ತ್ವಷ್ಟಾ, ವಿಷ್ಣು, ಜಮದಗ್ನಿ, ವಿಶ್ವಾಮಿತ್ರ ಇವರೂ, ಕಂಬಲ ಮತ್ತು ಅಶ್ವತರ ಎಂಬ ಇಬ್ಬರು ಕದ್ರೂದೇವಿಯ ಮಕ್ಕಳಾದ ಸರ್ಪಗಳೂ, ಧೃತರಾಷ್ಟ್ರ ಮತ್ತು ಸೂರ್ಯವರ್ಚಸ್ಸು ಎಂಬ ಇಬ್ಬರು ಗಂಧರ್ವರೂ, ಸೂರ್ಯನ ಸಮೀಪದಲ್ಲಿ ವಾಸಮಾಡುವರು. ಈರೀತಿ ಒಂದೊಂದು ಋತುವಿನಲ್ಲಿಯೂ ಅಂದರೆ ಎರಡೆರಡು ತಿಂಗಳುಕಾಲ ಮೇಲೆ ಹೇಳಿದಂತೆ ಆಯಾಯ ದೇವತೆಗಳು ಸೂರ್ಯನ ಸಮೀಪದಲ್ಲಿ ವಾಸಿಸುತ್ತ ಅವನ ಸೇವೆ ಮಾಡುತ್ತಿರುವರು.

ಈ ರೀತಿ, ಸೂರ್ಯನ ಸಮೀಪದಲ್ಲಿ ಆಯಾಯ ಸ್ಥಾನಗಳಲ್ಲಿ ಇರುವ ದೇವತೆಗಳ ಸಮೂಹವು ಒಟ್ಟು ಎಂಬತ್ತುನಾಲ್ಕು (84) ಎಂದು ತಿಳಿಯಬೇಕು.

೪೩-೪೪. ತಿಲೋತ್ತಮೆ ಮತ್ತು ರಂಭೆ ಈ ಇಬ್ಬರು ಶ್ರೇಷ್ಠರಾದ ಅಪ್ಸರಸ್ತ್ರೀಯರೂ, ಋತುಜಿತ್ ಮತ್ತು ಸತ್ಯಜಿತ್ತೆಂಬ ಇಬ್ಬರು ತುಂಬಾ ಕೀರ್ತಿಶಾಲಿಗಳಾದ ಗ್ರಾಮಣೀ ದೇವತೆಗಳೂ, ಬ್ರಹ್ಮ, ಪ್ರೇತ, ಮತ್ತೂ ಯಕ್ಷಪ್ರೇತರೆಂಬ ಇಬ್ಬರು ರಾಕ್ಷಸರೂ ಕೂಡ ತೇಜಸ್ವಿಗಳಲ್ಲೆಲ್ಲಾ ಅತ್ಯಂತ ತೇಜಸ್ವಿಗಳಾಗಿಯೂ ಉತ್ತಮ

ಗ್ರಾಮಣೀಃ ಋತುಜಿಚ್ಚೈವ ಸತ್ಯಜಿಚ್ಚ ಮಹಾಯಶಾಃ ।
ಬ್ರಹ್ಮಪ್ರೇತಶ್ಚ ರಕ್ಷೋ ವೈ ಯಕ್ಷಪ್ರೇತಶ್ಚ ತಾವುಭೌ ॥ ೪೪ ॥

ಸೂರ್ಯಮಾಪ್ಯಾಯಯಂತ್ಯೇತೇ ತೇಜಸಾಂ ತೇಜಉತ್ತಮಮ್ ।
ಪ್ರಥಿತೈಸ್ಸ್ವೈರ್ವಚೋಭಿಶ್ಚ ಸ್ತುವಂತಿ ಋಷಯೋ ರವಿಂ ॥ ೪೫ ॥

ಗಂಧರ್ವಾಪ್ಸರಸಶ್ಚೈವ ಗೀತನೃತ್ಯೈರುಪಾಸತೇ ।
ವಿದ್ಯುದ್‌ಗ್ರಾಮಣಿನೋ ಯಕ್ಷಾಃ ಪ್ರಕುರ್ವಂತಿ ಪ್ರದಕ್ಷಿಣಂ ॥ ೪೬ ॥

ಸರ್ಪಾ ವಹಂತಿ ಸೂರ್ಯಂ ವೈ ಯಾತುಧಾನಾನುಯಾಂತಿ ಚ ।
ವಾಲಖಿಲ್ಯಾ ನಯಂತ್ಯಸ್ತಂ ಪರಿವಾರ್ಯೋದಯಾದ್ರವಿಂ ॥ ೪೭ ॥

---

ರೆನಿಸಿಯೂ ಸೂರ್ಯದೇವನನ್ನು ಸೇವೆಮಾಡುತ್ತಾ ಸೂರ್ಯನಿಗೆ ಸಂತೋಷ ವನ್ನುಂಟುಮಾಡುತ್ತಿರುವರು.

೪೫. ಆಗಾಗ ಋಷಿಗಳು, ಪ್ರಸಿದ್ಧವಾದ ತಮ್ಮ ಮಾತುಗಳಿಂದ ಯಾವಾಗಲೂ ಸೂರ್ಯನನ್ನು ಸ್ತೋತ್ರಮಾಡುತ್ತಿರುವರು.

೪೬. ಗಂಧರ್ವರೂ, ಮತ್ತೂ ಅಪ್ಸರ ಸ್ತ್ರೀಯರುಗಳೂ ಸಹ ತಮ್ಮ ಇಂಚರ ಗಳಿಂದಲೂ ಮತ್ತೂ ಅಭಿನಯದಿಂದಲೂ ಸೂರ್ಯನನ್ನು ಸಂತೋಷಗೊಳಿಸುವರು. ವಿದ್ಯುತ್, ಗ್ರಾಮಿಣೀ, ಮತ್ತು ಯಕ್ಷರು ಇವರೆಲ್ಲರೂ ಸೂರ್ಯನನ್ನು ಸದಾ ಪ್ರದಕ್ಷಿಣೆಮಾಡುತ್ತಿರುವರು.

೪೭. ಸರ್ಪಗಳು ಸೂರ್ಯನನ್ನು ಹೊರುತ್ತಿರುವುವು. ರಾಕ್ಷಸರು. ಸೂರ್ಯನನ್ನು ಹಿಂಬಾಲಿಸುತ್ತಿರುವರು. ಉದಯಕಾಲದಿಂದ ಕೊನೆಯವರೆವಿಗೂ ಸೂರ್ಯನ ಸಮೀಪದಲ್ಲಿಯೇ ಇರುತ್ತಾ ವಾಲಖಿಲ್ಯರು, ಸೂರ್ಯನು ಅಸ್ತನಾಗು ವಂತೆ ಮಾಡುವರು.

ಏತೇಷಾಮೇವ ದೇವಾನಾಂ ಯಥಾವೀರ್ಯಂ ಯಥಾ ತಪಃ ।
ಯಥಾಯೋಗಂ ಯಥಾತತ್ವಂ ಯಥಾಸತ್ವಂ ಯಥಾಬಲಂ ॥ ೪೮ ॥

ತಥಾ ತಪತ್ಯಸೌ ಸೂರ್ಯಃ ತೇಷಾಮಿಂದ್ರಸ್ತು ತೇಜಸಾಂ ।
ಏತೇ ತಪಂತಿ ವರ್ಷಂತಿ ಯಾಂತಿ ಭಾಂತಿ ಸೃಜಂತಿ ಚ ॥ ೪೯ ॥

ಭೂತಾನಾಮಶುಭಂ ಕರ್ಮ ವ್ಯಪೋಹಂತಿ ಚ ಕೀರ್ತಿತಾಃ ।
ಏತೇ ಸಹೈವ ಸೂರ್ಯೇಣ ಭ್ರಮಂತೇ ಸಾನುಗಾ ದಿವಿ ॥ ೫೦ ॥

ತಪಂತಶ್ಚ ಜಪಂತಶ್ಚ ಹ್ಲಾದಯಂತಶ್ಚ ವೈ ಪ್ರಜಾಃ ।
ಗೋಪಾಯಂತಿ ಸ್ಮ ಭೂತಾನಿ ಸರ್ವಾಣೀವಾನುಕಂಪಯಾ ॥ ೫೧ ॥

ಸ್ಥಾನಾಭಿಮಾನಿನಾಮೇತತ್ ಸ್ಥಾನಂ ಮನ್ವಂತರೇಷು ವೈ ।
ಅತೀತಾನಾಗತಾಶ್ಚೈವ ವರ್ತಂತೇ ಸಾಂಪ್ರತಂ ಚ ಯೇ ॥ ೫೨ ॥

---

೪೮-೪೯. ಈ ಹಿಂದೆ ಹೇಳಿದ ದೇವತೆಗಳ, ಬಲ, ತಪಸ್ಸು, ಯೋಗ, ತತ್ವ, ಸತ್ವ, ಮತ್ತು ವೀರ್ಯ ಇವುಗಳನ್ನನುಸರಿಸಿ, ಇವರುಗಳಿಗೆಲ್ಲಾ ಈಶ್ವರನಾದ ಸೂರ್ಯನು, ಸ್ಥಾನಮಾನಾದಿಗಳನ್ನು ಕೊಟ್ಟು ಪ್ರಕಾಶಿಸುವನು. ಈ ದೇವತೆಗಳೇ ತಾಪವನ್ನುಂಟುಮಾಡುವರು. ಮಳೆಗರೆಯುವವರು. ಸಂಚರಿಸುವವರು. ಪ್ರಕಾಶಿಸುವವರು. ಇವರೇ ಸೃಷ್ಟಿ ಕಾರ್ಯವನ್ನೂ ಸಹ ಮಾಡುವರು.

೫೦. ಈ ದೇವತೆಗಳು ಸೂರ್ಯನ ಜೊತೆಯಲ್ಲಿಯೇ ಸಂಚರಿಸುತ್ತಾ, ಪ್ರಾಣಿಗಳ ಪಾಪಕರ್ಮಗಳನ್ನು ಹೋಗಲಾಡಿಸುತ್ತಾ, ಮಹಿಮಾಶಾಲಿಗಳೆನಿಸಿರುವರು.

೫೧. ಈ ದೇವತೆಗಳು, ತಪಸ್ಸನ್ನಾಚರಿಸುತ್ತಲೂ, ಜಪಮಾಡುತ್ತಲೂ, ಮತ್ತೂ ಎಲ್ಲಾ ಪ್ರಜೆಗಳನ್ನೂ ಸಂತೋಷಪಡಿಸುತ್ತಲೂ, ಸಕಲ ಭೂತಗಳನ್ನೂ, ದಯೆಯಿಂದ ಕಾಪಾಡುತ್ತಲೂ ಇರುವರು.

೫೨. ಸ್ಥಾನಾಭಿಮಾನಿಗಳಾದ ಈ ದೇವತೆಗಳಿಗೆ ಪ್ರತಿ ಮನ್ವಂತರಗಳಲ್ಲಿಯೂ, ಇದೇರೀತಿ ಸ್ಥಾನಗಳೇರ್ಪಟ್ಟಿರುವುವು. ಈಗ ಹೇಳಪ ಇರುವ ದೇವತೆಗಳು ಹಿಂದೆ ಕಳೆದುಹೋದ ಸ್ವಾಯಂಭುವಾದಿ ಮನ್ವಂತರಗಳಲ್ಲಿಯೂ, ಮುಂದೆ ನಡೆಯುವ ಮನ್ವಂತರಗಳಲ್ಲಿಯೂ ಸಹ ಆಯಾಯಾ ಸ್ಥಾನಗಳನ್ನು ಹೊಂದುವರು.

ಗ್ರೈಷ್ಮೇ ಹಿಮೇ ಚ ವರ್ಷಾಸು ವಿಮುಂಚಮಾನೋ ।
ಘರ್ಮಂ ಹಿಮಂ ಚ ವರ್ಷಂ ಚ ದಿವಾನಿಶಂ ಚ ॥
ಗಚ್ಛತ್ಯಸಾವೃತುವಶಾತ್ ನ ನಿವರ್ತ್ಯ ರಶ್ಮೀನ್ ।
ದೇವಾನ್ ಪಿತ್ರ್ಯಾಂಶ್ಚ ಮನುಜಾಂಶ್ಚ ಸ ತರ್ಪಯನ್ ವೈ ॥ ೫೩ ॥

ಪ್ರೀಣಾತಿ ದೇವಾನಮೃತೇನ ಸೂರ್ಯಃ ।
ಸೋಮಂ ಸುಷುಮ್ನೇನ ವಿವರ್ಧಯಿತ್ವಾ ॥
ಶುಕ್ಲೇ ತು ಪೂರ್ಣಂ ದಿವಸಕ್ರಮೇಣ ।
ತಂ ಕೃಷ್ಣಪಕ್ಷೇ ವಿಬುಧಾಃ ಪಿಬಂತಿ ॥ ೫೪ ॥

ಪೀತಂ ತು ಸೋಮಂ ಹಿ ಕಲಾವಿಶಿಷ್ಟಂ ।
ಕೃಷ್ಣೇ ಚ ಪಕ್ಷೇ ರುಚಿಭಿಃ ಕ್ಷರಂತಂ ॥

---

೫೩. ಸೂರ್ಯದೇವನು, ಆಯಾಯ ಋತುಗಳಿಗನುಸಾರವಾಗಿ, ಗ್ರೀಷ್ಮ ಋತುವಿನಲ್ಲಿ, ಬಿಸಿಲನ್ನೂ (ಸೆಖೆಯನ್ನೂ) ಹೇಮಂತ ಋತುವಿನಲ್ಲಿ ಹಿಮವನ್ನೂ, ವರ್ಷಋತುವಿನಲ್ಲಿ ಮಳೆಯನ್ನೂ ಸಹ ಸುರಿಸುತ್ತ, ಕಿರಣಗಳನ್ನು ಹಿಂದಕ್ಕೆ ತೆಗೆದುಕೊಳ್ಳದೆ ಅದೇ ಕಿರಣಗಳಿಂದಲೇ ಫಲ ಭೇದವನ್ನು ನಿರೂಪಿಸುತ್ತಾ, ಈ ದೇವತೆಗಳನ್ನೂ, ಪಿತೃಗಳನ್ನೂ, ಮತ್ತು ಮನುಷ್ಯರನ್ನೂ ತೃಪ್ತಿಗೊಳಿಸುತ್ತಿರುವನು.

೫೪. ಸೂರ್ಯನು ದೇವತೆಗಳನ್ನು ಅಮೃತಪಾನಗಳಿಂದ ಸಂತೋಷಗೊಳಿಸುವನು. ಶುಕ್ಲಪಕ್ಷದಲ್ಲಿ ಸೂರ್ಯನು ಚಂದ್ರನನ್ನು ತನ್ನ ಸುಷುಮ್ನವೆಂಬ ಕಿರಣದಿಂದ ಪ್ರತಿದಿವಸವೂ ಕ್ರಮವಾಗಿ ಪಾಡ್ಯದಿಂದ ಪೂರ್ಣಿಮೆಯ ವರೆವಿಗೂ ಅಭಿವೃದ್ಧಿಗೊಳಿಸುವನು. ಕೊನೆಗೆ ಚಂದ್ರನು ಅಮೃತಮಯನಾಗಿರುವನು. ದೇವತೆಗಳು ಕೃಷ್ಣಪಕ್ಷದಲ್ಲಿ ಅದೇ ಚಂದ್ರನ ಕಿರಣಗಳನ್ನು ಪಾನಮಾಡುವರು. ಪೂರ್ಣಿಮೆಯಿಂದ ಮುಂದೆ ಕೃಷ್ಣಪಕ್ಷದಲ್ಲಿ ತನ್ನಲ್ಲಿದ್ದ ಅಮೃತವನ್ನೆಲ್ಲಾ ಹಾಗೆ ದೇವತೆಗಳು ಪಾನ ಮಾಡುವುದರಿಂದ ಚಂದ್ರನು ಕ್ಷಯಿಸುವನು. ಪುನಃ ಶುಕ್ಲಪಕ್ಷದಲ್ಲಿ ಸೂರ್ಯನ ಸುಷುಮ್ನಾ ಕಿರಣದಿಂದ ಅಭಿವೃದ್ಧಿಗೊಳ್ಳುತ್ತ ಅಮೃತಮಯನಾಗುವನು.

೫೫. ದೇವತೆಗಳು ಅಮೃತಮಯನಾದ ಚಂದ್ರನನ್ನು ಕೃಷ್ಣಪಕ್ಷದಲ್ಲಿ ಪಾನ ಮಾಡುವರು. ಹಾಗೆಯೇ, ಕೃಷ್ಣಪಕ್ಷದಲ್ಲಿ ತನ್ನ ಕಲೆಗಳಿಂದ ಸುರಿಸುತ್ತಿರುವ ಸ್ವಧಾ

ಸ್ವಧಾಽಮೃತಂ ತಂ ಪಿತರಃ ಪಿಬಂತಿ ।
ಸರ್ಪಾಶ್ಚ ಸೌಮ್ಯಾಶ್ಚ ತಥೈವ ಕಾವ್ಯಾಃ ॥ ೫೫ ॥

ಸೂರ್ಯೇಣ ಗೋಭಿಸ್ತು ಸಮುದ್ಧೃತಾಭಿಃ ।
ಅದ್ಭಿಃ ಪುನಶ್ಚೈವ ಸಮುಚ್ಛ್ರಿತಾಭಿಃ ॥
ವೃಷ್ಟ್ಯಾಽಭಿವೃದ್ಧ್ಯಾಽಪಿ ತಥೌಷಧೀಭಿಃ ।
ಮರ್ತ್ಯಾಃ ಸುಧಾಮನ್ನರಸೈರ್ಜಯಂತಿ ॥ ೫೬ ॥

ಮಾಸಾರ್ಧತೃಪ್ತಿಸ್ತ್ವಮೃತಾತ್ ಸುರಾಣಾಂ ।
ಮಾಸಂ ಚ ತೃಪ್ತಿಃ ಸ್ವಧಯಾ ಪಿತೄಣಾಂ ॥
ಅನ್ನೇನ ಶಶ್ವಚ್ಚ ದಧಾತಿ ಮರ್ತ್ಯಾನ್ ।
ಸೂರ್ಯಃ ಸ್ವಯಂ ತತ್ರ ವಿಭಾತಿ ಗೋಭಿಃ ॥ ೫೭ ॥

---

ನಾಮಕವಾದ ಅಮೃತವನ್ನು ಪಿತೃದೇವತೆಗಳು ಪಾನಮಾಡುವರು. ಹಾಗೆಯೇ ಸರ್ಪಗಳೂ, ಚಂದ್ರನ ಲೋಕದಲ್ಲಿರುವವರೂ, ಶುಕ್ರನ ಸಂಬಂಧಿಗಳೂ, ಸಹ ಈ ಚಂದ್ರನಿಂದ ತೃಪ್ತಿ ಹೊಂದುವರು.

೫೬. ಸೂರ್ಯನು ತನ್ನ ಕಿರಣಗಳಿಂದ ನೀರನ್ನು ಸಂಗ್ರಹಿಸಿ ಪುನಃ ಅದನ್ನು ತನ್ನ ಕಿರಣಗಳಿಂದಲೇ ಮಳೆರೂಪಕ್ಕೆ ಪರಿವರ್ತಿಸುವನು. ಆ ಮಳೆಯ ನೀರಿನಿಂದಲೇ ಜ್ಯೋತಿರ್ಲತೆಗಳೆಲ್ಲಾ ಹುಲುಸಾಗಿ ಬೆಳೆಯುವವು. ಈ ಔಷಧಿಗಳ ಸೇವನೆಯಿಂದ ಮನುಷ್ಯರು ಭೂಲೋಕದಲ್ಲಿ ಸದಾ ಅಮೃತಪಾನಕ್ಕಿಂತಲೂ ಹೆಚ್ಚಿನದಾದ ತೃಪ್ತಿಯನ್ನು ಹೊಂದುವರು.

೫೭. ಅಮೃತಪಾನದಿಂದ ದೇವತೆಗಳಿಗೆ ಹದಿನೈದುದಿವಸಗಳು, ತೃಪ್ತಿಯಾಗುವುದು. ಸ್ವಧಾಽಮೃತದಿಂದ ಪಿತೃದೇವತೆಗಳಿಗೆ ಒಂದು ತಿಂಗಳುಕಾಲ ತೃಪ್ತಿಯೊದಗುವುದು. ಅನ್ನದಿಂದ ಮನುಷ್ಯರಿಗೆ ಆಗಾಗ ಸಂತೋಷವು ದೊರೆಯುವುದು.

ಈ ರೀತಿ ಸೂರ್ಯನು ತನ್ನ ಕಿರಣಗಳಿಂದ, ದೇವತೆಗಳಿಗೂ, ಪಿತೃಗಳಿಗೂ, ಮತ್ತು ಮನುಷ್ಯರಿಗೂ ಸಂತೋಷವುಂಟುಮಾಡುತ್ತಾ ಪ್ರಕಾಶಿಸುತ್ತಿರುವನು.

ಅಯಂ ಚರದ್ಭಿರ್ಹರಿತೈಸ್ತುರಂಗೈಃ ।
ಹರದ್ಭಿರಾಪೋ ಹರಿತೈಶ್ಚ ರಶ್ಮಿಭಿಃ ॥
ವಿಸರ್ಜಕಾಲೇವಿಸೃಜಂಶ್ಚ ತಾಃ ಪುನಃ ।
ಬಿಭರ್ತಿ ಶಶ್ವತ್ ಸವಿತಾ ಚರಾಚರಮ್ ॥ ೫೮ ॥

ಅಹೋರಾತ್ರಾದ್ರಥೇನಾಸೌ ಏಕಚಕ್ರೇಣ ವೈ ಭ್ರಮನ್ ।
ಸಪ್ತದ್ವೀಪಸಮುದ್ರಾಂಗಾಂ ಸಪ್ತಭಿಃ ಸಪ್ತಭಿರ್ಧೃತಂ ॥ ೫೯ ॥

ಛಂದೋಭಿರ್ವಾಜಿರೂಪೈಸ್ತೈರ್ಯತಶ್ಚಕ್ರಂ ತತಃ ಸ್ಥಿತೈಃ ।
ಕಾಮರೂಪೈಃ ಸಕೃದ್ಯುಕ್ತೈರ್ವಹದ್ಭಿಸ್ತೈರ್ಮನೋಜವೈಃ ॥ ೬೦ ॥

ಹರಿತೈರಥ ಯ್ಯೈಃ ಪಿಂಗೈರೀಶ್ವರೈರ್ಬ್ರಹ್ಮವಾದಿಭಿಃ ।
ತ್ರ್ಯಶೀತಿಮಂಡಲಶತಂ ಅಹ್ನೋರ್ಧೇನ ವಿಭಾವಸೋಃ ॥ ೬೧ ॥

---

೫೮. ಈ ಸೂರ್ಯದೇವನು ತನ್ನ ಏಳು ಹಸುರಾದ ಕುದುರೆಗಳಿಂದ ಎಳೆಯಲ್ಪಡುತ್ತಿರುವ ರಥದಲ್ಲಿ ಸಂಚರಿಸುತ್ತಾನೆ. ಹಾಗೆ ಸಂಚರಿಸುವಾಗ ತನ್ನ ಹಸುರು ಕಿರಣಗಳಿಂದ ನೀರನ್ನು ಸಂಗ್ರಹಿಸುವನು. ಅನಂತರ ಹಾಗೆ ಸಂಗ್ರಹಿಸಿದ ನೀರನ್ನೆಲ್ಲಾ ವರ್ಷಋತುವಿನಲ್ಲಿ ತನ್ನ ಕಿರಣಗಳ ಮೂಲಕವೇ ಭೂಮಿಯಲ್ಲಿ ವೃಷ್ಟಿರೂಪದಿಂದ ಸುರಿಸುವನು. ಅಂತೂ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವನ್ನೆಲ್ಲಾ ತನ್ನ ಕಿರಣಗಳಿಂದಲೇ ಧರಿಸಿರುವನೆಂದು ಹೇಳಬಹುದು.

೫೯-೬೨. ಸೂರ್ಯದೇವನು, ಹಗಲೂ ಮತ್ತೂ ರಾತ್ರಿವೇಳೆಗಳಲ್ಲಿ ಒಂದು ಚಕ್ರದ ತನ್ನ ರಥದಲ್ಲಿಯೇ ಕುಳಿತು ಸಂಚರಿಸುತ್ತಾ, ಜಂಬು, ಪ್ಲಕ್ಷ ಮೊದಲಾದ ಏಳು ದ್ವೀಪಗಳನ್ನೂ, ದಧಿ, ಕ್ಷೀರ ಮೊದಲಾದ ಏಳು ಸಮುದ್ರಗಳನ್ನೂ ಒಳಗೊಂಡಿರುವ ಭೂಮಿಯನ್ನು ಜಾಗ್ರತೆಯಾಗಿ ಸುತ್ತುತ್ತಿರುವನು. ಇವನ ಏಳು ಕುದುರೆಗಳೂ, ಛಂದೋರೂಪಗಳಾಗಿರುವುವು. ಮನೋವೇಗವುಳ್ಳ ಈ ಕುದುರೆಗಳು ಇಚ್ಛಾನುಸಾರ ರೂಪಗಳನ್ನು ಪಡೆಯಬಲ್ಲವು. ಇವು ಸದಾ ಚಕ್ರದ ಸಮೀಪದಲ್ಲಿಯೇ ಕಟ್ಟಲ್ಪಟ್ಟಿರುವುವು. ಈ ಕುದುರೆಗಳು, ಹಸುರುಬಣ್ಣದಿಂದಲೂ ಹೊಂಬಣ್ಣದಿಂದಲೂ

ವಹಂತಿ ಹರಯಶ್ಚೈವ ಮಂಡಲಂ ದಿವಸಕ್ರಮಾತ್ ।
ಕಲ್ಪಾದೌ ಸಂಪ್ರಯುಕ್ತಾಸ್ತೇ ವಹಂತ್ಯಾಭೂತಸಂಪ್ಲವಂ ॥ ೬೨ ॥

ಆವೃತೋ ವಾಲಖಿಲ್ಯೈಸ್ತೈ ರ್ಭ್ರಮತೋ ರಾತ್ರ್ಯಹಾನಿ ತು ।
ಗ್ರಥಿತೈಃ ಸ್ವರ್ವಚೋಭಿಶ್ಚ ಸ್ತೂಯಮಾನೋ ಮಹರ್ಷಿಭಿಃ ॥ ೬೩ ॥

ಸೇವ್ಯತೇ ಗೀತನೃತ್ಯೈಶ್ಚ ಗಂಧರ್ವೈರಪ್ಸರೋಗಣೈಃ ।
ಪತಂಗಪತಗೈ ರಶ್ವೈ ರ್ಭ್ರಮಮಾಣೈರ್ದಿವಸ್ಪತಿಃ ॥ ೬೪ ॥

---

ರಂಜಿಸುವುವು. ಅಂದರೆ ಕಾಲಭೇದದಿಂದ ಎರಡು ಬಣ್ಣಗಳೂ ತೋರಿಬರುವುದುಂಟು. ಅಲ್ಲದೇ ಸರ್ವಸಮರ್ಥರಾಗಿರುವ ಈ ಕುದುರೆಗಳಿಗೆ ಬ್ರಹ್ಮಜ್ಞಾನದ ಅರಿವಿದೆ. ಇಂತಹ ಮಹಿಮೆಗಳಿಂದ ಕೂಡಿರುವ ಸೂರ್ಯಾಶ್ವಗಳು, ಹಗಲಿನ ಅರ್ಧಭಾಗದಲ್ಲಿ ಎಂಟು ಸಾವಿರದ ಮುನ್ನೂರು ಮಂಡಲಗಳನ್ನು ದಾಟುವುವು. ಅಂದರೆ ಅಷ್ಟುಸಾರಿ ಚಕ್ರವನ್ನು ಉರುಳಿಸುವುವು. ಹೀಗೆಯೇ ದಿನಕ್ರಮದಲ್ಲಿ ಎಲ್ಲಾ ಮಂಡಲವನ್ನೂ ಪೂರ್ತಿಗೊಳಿಸುತ್ತಾ ಕಲ್ಪದ ಪ್ರಾರಂಭದಲ್ಲಿ ರಥಕ್ಕೆ ಕಟ್ಟಿದ ಈ ಕುದುರೆಗಳು, ಪಂಚಮಹಾಭೂತಗಳ ಪ್ರಳಯವಾಗುವವರೆವಿಗೂ ರಥವನ್ನು ಎಳೆಯುತ್ತಲೇ ಸಂಚರಿಸುವುವು.

೬೩. ಸೂರ್ಯನ ಸುತ್ತಲೂ ವಾಲಖಿಲ್ಯರೇ ಮೊದಲಾದ ಮಹರ್ಷಿಗಳು ಹಗಲು ರಾತ್ರಿ ಸೂರ್ಯನ ಜೊತೆಯಲ್ಲಿಯೇ ಇರುತ್ತಾ ವೇದವಾಕ್ಯಗಳಿಂದ ಇವನನ್ನು ಸ್ತೋತ್ರಮಾಡುತ್ತಿರುವರು.

೬೪. ಹೀಗೆ ಶ್ರೇಷ್ಠವಾದ ಕುದುರೆಗಳಿಂದಲೂ, ಏಕಚಕ್ರಾತ್ಮಕವಾದ ರಥದಿಂದಲೂ, ಸೂರ್ಯನು ಸಂಚರಿಸುತ್ತಿರುವಾಗ, ಗಂಧರ್ವರು ಇಂಪಾಗಿ ಹಾಡುತ್ತಿರುವರು. ಅಪ್ಸರಸ್ತ್ರೀಯರುಗಳು ಗುಂಪುಗುಂಪಾಗಿ ಬಂದು ತಮ್ಮ ನಾಟ್ಯಕಲೆಯಿಂದ ಸೂರ್ಯದೇವನನ್ನು ಸಂತೋಷಗೊಳಿಸುತ್ತಿರುವರು.

ವೀಥ್ಯಾ ಪ್ರಯಾತಿ ಚರತಿ ನಕ್ಷತ್ರಾನುಗತಃ ಶಶೀ ॥ ೭೫ ॥

ಇತಿ ಶ್ರೀ ಸಾಂಬಪುರಾಣೇ ಆದಿತ್ಯರಥವರ್ಣನಂ ನಾಮ
ಏಕವಿಂಶೋಽಧ್ಯಾಯಃ

---

೭೫. ಆಗಲೇ ಚಂದ್ರನು ನಕ್ಷತ್ರಗಳನ್ನು ಅನುಸರಿಸಿ, ತನ್ನ ಮಾರ್ಗದಲ್ಲಿ ಸಂಚರಿಸುತ್ತಾ ಮುಂದುವರಿಯುವನು.

ಇಲ್ಲಿಗೆ ಸಾಂಬಪುರಾಣದಲ್ಲಿ ಸೂರ್ಯನ ರಥನಿರೂಪಣವೆಂಬ ಇಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವಾವಿಂಶೋಽಧ್ಯಾಯಃ

---

॥ ಸಾಂಬ ಉವಾಚ ॥

**ಸೂರ್ಯಲೋಕಸ್ತ್ವಯಾ ದೃಷ್ಟಃ ಸೂರ್ಯಸೋಮಸಮಾಗಮಃ ।**
**ಸ ಕಥಂ ಕ್ಷೀಯತೇ ಸೋಮಃ ಕ್ಷೀಣಶ್ಚಾಪ್ಯಾಯತೇ ಕಥಂ ॥ ೧ ॥**

**ಯಥಾ ಸೋಮಂ ಪಿಬಂತಿ ಸ್ಮ ಕೃಷ್ಣಪಕ್ಷೇಽಮೃತಾಶಿನಃ ।**
**ದೇವತಾಃ ಪಿತರಶ್ಚೈವ ತನ್ಮಮಾಚಕ್ಷ್ವ ಸುವ್ರತ ॥ ೨ ॥**

---

## ಇಪ್ಪತ್ತೆರಡನೆಯ ಅಧ್ಯಾಯ.

೧-೨. ಆಗ ಸಾಂಬನು, ನಾರದನನ್ನು ಕುರಿತು "ಮಹರ್ಷಿ ಶ್ರೇಷ್ಠರಾದ ನಾರದರೇ, ನೀವು ಸೂರ್ಯಲೋಕವನ್ನು ನೋಡಿದ್ದೀರೆಂದು ಹೇಳಿದರಲ್ಲವೇ! ಆ ಸೂರ್ಯಲೋಕದಲ್ಲಿ ಸೂರ್ಯನಿಗೂ ಮತ್ತು ಚಂದ್ರನಿಗೂ ಸಮಾಗಮವಾಗುವುದು ಹೇಗೆ? ಚಂದ್ರನು ಕೃಷ್ಣಪಕ್ಷದಲ್ಲಿ ಕ್ಷಯವಾಗಲು ಕಾರಣವೇನು? ಹೀಗೆ ಕ್ಷೀಣನಾದ ಚಂದ್ರನು ಪಿತೃದೇವತೆಗಳಿಗೆ ಸಂತೋಷವನ್ನು ಉಂಟುಮಾಡುವುದು ಹೇಗೆ?

ಕೃಷ್ಣಪಕ್ಷದಲ್ಲಿ ದೇವತೆಗಳು ಮತ್ತು ಪಿತೃಗಳೂ ಅಮೃತವನ್ನೂ ಮತ್ತು ಸ್ವಧೆಯನ್ನೂ ಸಹ ಚಂದ್ರನಿಂದ ಪಾನಮಾಡುವರೆಂದು ತಿಳಿಸಿದೆಯಲ್ಲಾ! ಇದು ಹೇಗೆ? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸಬೇಕು" ಎಂದು ಕೇಳಿದನು.

॥ ನಾರದ ಉವಾಚ ॥

ರಾಕಾ ಚಾಽನುಮತಿಶ್ಚೈವ ಪೌರ್ಣಮಾಸೀ ದ್ವಿಧಾ ಸ್ಮೃತಾ ।
ಸಿನೀವಾಲೀ ಕುಹೂಶ್ಚೈವ ಅಮಾವಾಸ್ಯಾ ದ್ವಿಧೈವ ತು ॥ ೩ ॥

ಅಮಾನಾಮ ರವಿಸ್ತಸ್ಮಿನ್ ಚಂದ್ರಲೋಕೇ ಪ್ರತಿಷ್ಠಿತಾ ।
ತಸ್ಯಾಂ ಸೋಮೋ ವಸೇದ್ಯಸ್ಮಾದಮಾವಾಸ್ಯಾ ತತಃ ಸ್ಮೃತಾ ॥ ೪ ॥

ಪೂರ್ವೋದಿತೇ ಕಲಾಹೀನೇ ಪೌರ್ಣಮಾಸ್ಯಾಂ ನಿಶಾಕರೇ ।
ಪೂರ್ಣಮಾಽನುಮತಿರ್ಜ್ಞೇಯಾ ಪಶ್ಚಾದ್ಗಚ್ಛತಿ ಭಾಸ್ಕರಃ ॥ ೫ ॥

---

೩. ರಾಕಾ ಮತ್ತು ಅನುಮತಿಯೆಂದು ಪೂರ್ಣಿಮೆಯು ಎರಡು ವಿಧವಾಗಿರುವುದು. ಅಮಾವಾಸ್ಯೆಯು, ಸಿನೀವಾಲೀ ಮತ್ತು ಕುಹೂ ಎಂಬುದಾಗಿ ಎರಡು ಬಗೆಯಾಗಿರುವುದು.

೪. ಅಮಾ ಎಂಬುದು ಸೂರ್ಯನಾಮಕವಾದ ಒಂದು ದೇವತೆ. ಅವನು ಅಮಾವಾಸ್ಯೆಯ ಸಮಯದಲ್ಲಿ ಚಂದ್ರಲೋಕದಲ್ಲಿರುವನು. ಚಂದ್ರನು ಆ ಅಮಾರೂಪನಾದ ಸೂರ್ಯನಲ್ಲಿ ವಾಸಮಾಡುವುದರಿಂದ, ಆ ದಿನಕ್ಕೆ ಅಮಾವಾಸ್ಯೆಯೆಂದು ಹೆಸರು ಬಂದಿದೆ ; ಅಮಾಯಾಂ+ವಸತೀತಿ = ಅಮಾವಾಸ್ಯಾಂ ಎಂದು ವಿಗ್ರಹವಾಕ್ಯವಾಗುವುದು. (ಅಮಾ, ಸಹ, ವಸತಃ, ಚಂದ್ರಸೌರ್ಯೌ, ಯಸ್ಯಾಂ ಎಂಬ ವಿಗ್ರಹವಾಕ್ಯದಿಂದ ಸೂರ್ಯಚಂದ್ರರು ಒಟ್ಟಾಗಿ ವಾಸಮಾಡುತ್ತಾರೆ ಎಂಬರ್ಥವು ಯಥಾಶ್ರುತಾರ್ಥ)

೫. ಹಿಂದೆ ಹೇಳಿದ ಚಂದ್ರನು ಪೂರ್ಣಿಮೆಯಲ್ಲಿ ಕಲಾಹೀನನಾಗಿದ್ದಾಗ ಆ ಪೂರ್ಣಿಮೆಯನ್ನು, ಅನುಮತಿ ಎಂದು ತಿಳಿಯಬೇಕು. ಅನಂತರ ಸೂರ್ಯನು ಚಂದ್ರಮಂಡಲದಿಂದ ಮುಂದೆ ಸಂಚರಿಸುವನು. (ಅಂದರೆ ಚತುರ್ದಶೀ ವಿದ್ಧವಾದ ಪೂರ್ಣಿಮಾ ತಿಥಿಯಲ್ಲಿ ಚಂದ್ರನು ಒಂದು ಕಳೆಯಿಂದ ಕಮ್ಮಿಯಾಗಿರುವನು. ಅಂತಹ ಪೂರ್ಣಿಮಾ ತಿಥಿಗೆ ಅನುಮತಿ ಎಂದು ಹೆಸರು.)

ಯಸ್ಮಾತ್ ತಾಂ ಅನುಮನ್ಯಂತೇ ಪಿತರೋ ದೈವತೈಃ ಸಹ ।
ತಸ್ಮಾದನುಮತಿರ್ನಾಮ ಪೂರ್ಣಿಮಾ ಪ್ರಥಮಾ ಸ್ಮೃತಾ ॥ ೬ ॥

ಯದಾಽಸ್ತಮಿಯಾತ್ಸೂರ್ಯಃ ಪೂರ್ಣಚಂದ್ರಸ್ಯ ಚೋದ್ಗಮಃ ।
ಯುಗಪತ್ ಸಾ ತು ವೈ ರಾಕಾ ತದಾ ಭವತಿ ಪೂರ್ಣಿಮಾ ॥ ೭ ॥

ರಾಕಾಂ ತಾಮನುಮನ್ಯಂತೇ ದೇವತಾಃ ಪಿತೃಭಿಃ ಸಹ ।
ರಕ್ಷಣಾಚ್ಚೈವ ಸೂರ್ಯಸ್ಯ ರಾಕೇತಿ ಕವಯೋಽಬ್ರುವನ್ ॥ ೮ ॥

ಸಿನೀವಾಲೀಪ್ರಮಾಣಂ ತು ಕ್ಷೀಣಶೇಷೋ ನಿಶಾಕರಃ ।
ಅಮಾವಾಸ್ಯಾಂ ವಿಶತ್ಯರ್ಕಂ ಸಿನೀವಾಲೀ ತತಃ ಸ್ಮೃತಾ ॥ ೯ ॥

---

೬. ಪಿತೃಗಳು, ಆಗ ದೇವತೆಗಳೊಡನೆ ಪೂರ್ಣಿಮೆಯನ್ನು ಅನುಸರಿಸಿ ಚಂದ್ರನ ಸಾನ್ನಿಧ್ಯವನ್ನು ಪಡೆದು ಅಮೃತಪಾನಮಾಡುವುದರಿಂದ ಆ ಪೂರ್ಣಿಮೆಗೆ ಅನುಮತಿ ಪೂರ್ಣಿಮೆ ಎಂದು ಹೆಸರು ಬಂದಿದೆ. ಇದು ಪೂರ್ಣಿಮೆಯ ಮೊದಲನೆಯ ಭೇದವೆಂದು ತಿಳಿಯಬೇಕು.

೭. ಸೂರ್ಯನು ಮುಳುಗುವುದೂ, ಪೂರ್ಣಚಂದ್ರನು ಉದಯಿಸುವುದೂ. ಒಟ್ಟಿಗೆ ಯಾವ ಪೂರ್ಣಿಮೆಯಲ್ಲಿ ಉಂಟಾಗುವುದೋ ಆ ಪೂರ್ಣಿಮೆಯನ್ನು ರಾಕಾ ಪೂರ್ಣಿಮಾ ಎಂದು ತಿಳಿಯಬೇಕು. (ಅಂದರೆ ಚತುರ್ದಶೀ ಅಥವಾ ಪ್ರತಿಪತ್ ಇವುಗಳ ಸಂಬಂಧವಿಲ್ಲದ ಪೂರ್ಣಿಮೆಗೆ ರಾಕಾ ಎಂದು ಹೆಸರು.)

೮. ಹಾಗೆ ಸೂರ್ಯಚಂದ್ರರ ಏಕಕಾಲಿಕವಾದ ಅಸ್ತೋದಯ ಕಾಲವನು ಸೂಚಿಸುವ ರಾಕಾ ಪೂರ್ಣಿಮೆಯಲ್ಲಿ ದೇವತೆಗಳು ಪಿತೃದೇವತೆಗಳೊಡನೆ ಕೂಡಿ ಅಮೃತಪಾನ ಮಾಡಲೋಸುಗ ಚಂದ್ರನನ್ನು ಅನುಸರಿಸುವರು. ಆದರಿಂದ ಕವಿಗಳು ಸೂರ್ಯನು ಈ ತಿಥಿಯಲ್ಲಿ ದೇವತೆಗಳನ್ನೂ ರಕ್ಷಿಸುವವನಾದ್ದರಿಂದ, ಪೂರ್ಣಿಮೆಗೆ ರಾಕಾ ಎಂದು ಹೆಸರಿಟ್ಟಿರುವರು.

೯. ಸಿನೀವಾಲೀ ಸ್ವರೂಪವನ್ನು ತಿಳಿಸುವೆನು ಕೇಳು. ಅಮಾವಾಸ್ಯೆಯಲ್ಲಿ ಕಲಾರಹಿತನಾಗಿ, ಪ್ರತಿಪತ್ಸಂಬಂಧದಿಂದ ಹೊಂದಿದ ಸ್ವಲ್ಪ ಕಲೆಯುಳ್ಳ ಚಂದ್ರನು ಸೂರ್ಯನನ್ನು ಪ್ರವೇಶಿಸುವನು. ಆ ಅಮಾವಾಸ್ಯೆಗೆ ಸಿನೀವಾಲಿ ಎಂದು ಹೆಸರು. ಅಂದರೆ ಪ್ರತಿಪತ್ಸಂಬಂಧವಾದ ಅಮಾವಾಸ್ಯೆಗೆ ಸಿನೀವಾಲೀ ಎಂದು ಹೇಳಲ್ಪಡು ವುದು.

ಕುಹೇತಿ ಕೋಕಿಲಸ್ಯೋಕ್ತಿರ್ಯಾವತ್ಕಾಲಂ ಸಮಾಪ್ಯತೇ ।
ತತ್ಕಾಲತುಲ್ಯಾಚ್ಚೈಷಾ ವೈ ಹ್ಯಮಾವಾಸ್ಯಾ ಕುಹೂಃ ಸ್ಮೃತಾ ॥ ೧೦ ॥
ಅನುಮತ್ಯಾಂ ಸ ರಾಕಾಯಾಂ ಸಿನೀವಾಲ್ಯಾಂ ಕುಹೂಂ ವಿನಾ ।
ಏತಾಸಾಂ ಪುರತಃ ಕಾಲಃ ಕುಹೂಮಾತ್ರಂ ಕುಹೂಃ ಸ್ಮೃತಾ ॥ ೧೧ ॥
ಕಲಾಃ ಷೋಡಶ ಸೋಮಸ್ಯ ಶುಕ್ಲೇ ವರ್ಧಯತೇ ರವಿಃ ।
ಅಮೃತಾ ನಾಮತಃ ಕೃಷ್ಣೇ ಪೀಯಂತೇ ದೈವತೈಃ ಕ್ರಮಾತ್ ॥ ೧೨ ॥
ಪ್ರಥಮಾಂ ಪಿಬತೇ ವಹ್ನಿಃ ದ್ವಿತೀಯಾಂ ತು ರವಿಃ ಕಲಾಂ ।
ವಿಶ್ವೇದೇವಾಸ್ತೃತೀಯಂ ತು ಚತುರ್ಥೀಂ ತು ಪ್ರಜಾಪತಿಃ ॥ ೧೩ ॥

---

೧೦. ಕೋಗಿಲೆಯ ಧ್ವನಿಗೆ ಕುಹೂ ಎನ್ನುವರು. ಈ ಕುಹೂ ಧ್ವನಿಯು ಎಷ್ಟುಕಾಲದಲ್ಲಿ ಮುಗಿಯುವುದೋ ಆ ಕಾಲಕ್ಕೆ ಸಮಾನವಾದ ಕಾಲವುಳ್ಳ ಅಮಾವಾಸ್ಯೆಗೆ ಕುಹೂ ಅಮಾವಾಸ್ಯೆ ಎಂದು ಹೆಸರು. ಅಂದರೆ ಪ್ರತಿಪತ್ತು ಅಥವಾ ಚತುರ್ದಶೀ ವೇಧೆಯಿಲ್ಲದ ಶುದ್ಧ ಅಮಾವಾಸ್ಯೆಯ ಸ್ವಲ್ಪಕಾಲದಲ್ಲಿ ಚಂದ್ರನು ಸಂಪೂರ್ಣವಾಗಿ ಕಣ್ಮರೆಯಾಗಿರುವನು. ಅಂತಹ ತಿಥಿಗೆ ಕುಹೂ ಎಂದು ಹೆಸರು.

೧೧. ಹಿಂದೆಹೇಳಿದ ಅನುಮತಿ, ರಾಕಾ, ಮುಂತಾದ ತಿಥಿಗಳಲ್ಲಿಯೂ, ಸಿನೀವಾಲಿಯೆಂಬ ತಿಥ್ಯಂತರವಿದ್ಧವಾದ ಅಮಾವಾಸ್ಯೆಯಲ್ಲಿಯೂ, ಚಂದ್ರನಲ್ಲಿ ಪಿತೃದೇವತೆಗಳು ಅಮೃತ ಲೇಶವನ್ನಾದರೂ ಕಾಣುವರು. ಆದರೆ ಕುಹೂ ನಾಮಕವಾದ ಅಮಾತಿಥಿಯಲ್ಲಿ ಪಿತೃಗಳು ಯಾವ ಅಮೃತಕಲೆಯನ್ನೂ ಹೊಂದದೆ ಕೋಗಿಲೆಯ ಧ್ವನಿಯಂತೆ ಕೂಗುತ್ತಾ ಅಮೃತಪಾನ ವಿಹೀನರಾಗಿ ವ್ಯಥೆಪಡುವರು. ಅವರ ತೃಪ್ತಿಗಾಗಿ ಅಲ್ಲಿಂದ ಮುಂದಕ್ಕೆ ಸೂರ್ಯದೇವನು ಚಂದ್ರನಲ್ಲಿ ಕಲೆಯನ್ನು ತುಂಬುತ್ತಾ ಬರುವನು.

೧೨. ಸೂರ್ಯನು ಶುಕ್ಲಪಕ್ಷದಲ್ಲಿ ಚಂದ್ರನನ್ನು ಹದಿನಾರು ಕಲೆಗಳಿಂದ ಕ್ರಮವಾಗಿ ಪಾಡ್ಯದಿಂದ ಪೂರ್ಣಿಮೆಯ ವರೆವಿಗೂ ಅಭಿವೃದ್ಧಿಗೊಳಿಸುವನು. ಈ ರೀತಿ ಅಭಿವೃದ್ಧಿಗೊಂಡ ಕಲಾಮಯನಾದ ಚಂದ್ರನ ಹದಿನಾರು ಕಲೆಗಳನ್ನೂ ಅಮೃತವೆಂಬ ಹೆಸರಿನಿಂದ ಕೃಷ್ಣಪಕ್ಷದಲ್ಲಿ ದೇವತೆಗಳು ಕ್ರಮವಾಗಿ ಪಾನಮಾಡುವರು

೧೩-೧೬. ಚಂದ್ರನ ಮೊದಲನೆಯ ಕಲೆಯನ್ನು ಅಗ್ನಿಯು ಪಾನಮಾಡುವನು. ಸೂರ್ಯನು ಎರಡನೆಯ ಕಲೆಯನ್ನೂ, ವಿಶ್ವೇದೇವತೆಗಳು ಮೂರನೆಯ

**ಪಂಚಮೀಂ ವರುಣಶ್ಚಾಪಿ ಷಷ್ಠೀಂ ಪಿಬತಿ ವಾಸವಃ ।**
**ಸಪ್ತಮೀಂ ಋಷಯೋ ದಿವ್ಯಾ ವಸವೋಽಷ್ಟೌ ತಥಾಽಷ್ಟಮೀಂ ॥ ೧೪ ॥**

**ನವಮೀಂ ಕೃಷ್ಣಪಕ್ಷಸ್ಯ ಪಿಬತೀಂದೋಃ ಕಲಾಂ ಯಮಃ ।**
**ದಶಮೀಂ ಮರುತಶ್ಚಾಪಿ ರುದ್ರಾ ಏಕಾದಶೀಂ ಕಲಾಂ ॥ ೧೫ ॥**

**ದ್ವಾದಶೀಂ ತು ಕಲಾಂ ವಿಷ್ಣುಃ ಧನದಶ್ಚ ತ್ರಯೋದಶೀಂ ।**
**ಚತುರ್ದಶೀಂ ಪಶುಪತಿಃ ಕಲಾಂ ಪಿಬತಿ ನಿತ್ಯಶಃ ॥ ೧೬ ॥**

**ತತಃ ಪಂಚದಶೀಂ ಚಾಪಿ ಪಿಬಂತಿ ಪಿತರಂ ಕಲಾಃ ।**
**ಕಲಾವಶಿಷ್ಟೋ ನಿಃಪೀತಃ ಪ್ರವಿಷ್ಟಃ ಸೂರ್ಯಮಂಡಲಂ ।**
**ಅಮಾಯಾಂ ವಿಶತೇ ತಸ್ಮಾದಮಾವಾಸ್ಯಾ ತತಃ ಸ್ಮೃತಃ ॥ ೧೭ ॥**

---

ಕಲೆಯನ್ನೂ ನಾಲ್ಕನೆಯ ಕಲೆಯನ್ನು ಬ್ರಹ್ಮನೂ, ಐದನೆಯ ಕಲೆಯನ್ನು ವರುಣನೂ, ಆರನೆಯ ಕಲೆಯನ್ನು ಇಂದ್ರನೂ ಪಾನಮಾಡುವರು. ಹಾಗೆಯೇ ಚಂದ್ರನ ಏಳನೆಯ ಕಲೆಯನ್ನು ದೇವಲೋಕದ ಋಷಿಗಳೂ, ಎಂಟನೆಯ ಕಲೆಯನ್ನು ಅಷ್ಟವಸುಗಳೂ, ಚಂದ್ರನ ಒಂಬತ್ತನೆಯ ಕಲೆಯನ್ನು ಕೃಷ್ಣಪಕ್ಷದಲ್ಲಿ ಯಮನೂ ಸಹ ಪಾನಮಾಡುವನು.

ಹತ್ತನೆಯ ಚಂದ್ರನ ಕಲೆಯನ್ನು ಸಪ್ತ ಮರುತ್ತುಗಳೂ, ಹನ್ನೊಂದನೆಯ ಕಲೆಯನ್ನು ಏಕಾದಶರುದ್ರರೂ, ಹನ್ನೆರಡನೆಯ ಕಲೆಯನ್ನು ವಿಷ್ಣುವೂ, ಹದಿಮೂರನೆಯ ಕಲೆಯನ್ನು ಕುಬೇರನೂ, ಹದಿನಾಲ್ಕನೆಯ ಕಲೆಯನ್ನು ರುದ್ರನೂ ಮತ್ತು ಹದಿನೈದನೆಯ ಕಲೆಯನ್ನೂ ಪಿತೃದೇವತೆಗಳೂ ಸಹ ಕ್ರಮವಾಗಿ ಯಾಮಾಗಲೂ ಪಾನಮಾಡುತ್ತಿರುವರು. ಪಾಡ್ಯದಿಂದ ಹುಣ್ಣಿಮೆಯುವರೆವಿಗೆ ದಿವಸಕ್ಕೊಂದು ಕಲೆಯಂತೆ ಚಂದ್ರನು ಅಭಿವೃದ್ಧಿ ಹೊಂದುವನು. ಪೂರ್ಣಿಮೆಯಲ್ಲಿ ಹದಿನೈದು ಕಲೆಗಳೂ ಪೂರ್ಣವಾಗಿರುತ್ತವೆ. ಅನಂತರ, ದೇವತೆಗಳು ಕೃಷ್ಣಪಕ್ಷದಲ್ಲಿ ಕ್ರಮವಾಗಿ ಪಾಡ್ಯದಿಂದ ಚಂದ್ರನ ಕಲೆಯನ್ನು ಹಿಂದೆ ಹೇಳಿದಂತೆಯೇ ಪಾನಮಾಡುತ್ತಾ ಬರುವರು.

೧೭. ಕಲೆಯಿಂದ ಪರಿಪೂರ್ಣವಾಗಿದ್ದ ಚಂದ್ರನ ಕಲೆಗಳನ್ನೆಲ್ಲಾ ಕ್ರಮವಾಗಿ ದೇವತೆಗಳು ಪಾನಮಾಡುವುದರಿಂದ ಸೂರ್ಯಮಂಡಲವನ್ನು ಪ್ರವೇಶಿಸಿ ನುತ್ತೆ ಕಲೆಗಳನ್ನು ಪಡೆಯುವನು. ಆದುದರಿಂದ ಆ ಕಾಲಕ್ಕೆ ಅಮಾವಾಸ್ಯೆ ಎಂದು ಹೆಸರುಬಂದಿದೆ.

ಪೂರ್ವಾಹ್ಣೇ ಪ್ರವಿಶತ್ಯರ್ಕಂ ಮಧ್ಯಾಹ್ನೇ ಚ ವನಸ್ಪತಿಂ ।
ಅಪರಾಹ್ಣೇ ವಿಶತ್ಯಪ್ಸು ಸ್ವಯೋನಿಂ ವಾರಿಸಂಭವಃ ॥ ೧೮ ॥

ವನಸ್ಪತಿಗತೇ ಸೋಮೇ ಯಶ್ಛಿನತ್ತಿ ವನಸ್ಪತಿಂ ।
ಪಾತಯೇದಪಿ ವಾಪನ್ನೇ ಯುಜ್ಯತೇ ಬ್ರಹ್ಮಹತ್ಯಯಾ ॥ ೧೯ ॥

ಅಪಃ ಪ್ರವಿಶ್ಯ ಸೋಮಸ್ತು ಶೇಷರ್ಗಾ ಕಲಯೈಕಯಾ ।
ತೃಣಗುಲ್ಮಲತಾವೃಕ್ಷಾನ್ ನಿಷ್ಪಾದಯತಿ ಚೌಷಧೀಃ ॥ ೨೦ ॥

ತಮೋಷಧೀಗತಂ ಗಾವಃ ಚರಂತ್ಯಾಪಃ ಪಿಬಂತಿ ವೈ ।
ತದಂಗಾನುಗತಂ ಗೋಭ್ಯಃ ಕ್ಷೀರತ್ವಮುಪಗಚ್ಛತಿ ॥ ೨೧ ॥

---

೧೮. ಚಂದ್ರನು ಪೂರ್ವಾಹ್ಣದಲ್ಲಿ ಅಂದರೆ, ಪ್ರಾತಃಕಾಲದಲ್ಲಿ ಸೂರ್ಯನನ್ನು ಪ್ರವೇಶಿಸುವನು. ಮಧ್ಯಾಹ್ನದಲ್ಲಿ ವನಸ್ಪತಿಗಳಲ್ಲಿ ನೆಲಸುವನು. ಅಪರಾಹ್ಣದಲ್ಲಿ ಚಂದ್ರನು ತನಗೆ ಉತ್ಪತ್ತಿ ಸ್ಥಾನವಾದ ನೀರನ್ನೂ ಹೊಂದುವನು.

೧೯. ಚಂದ್ರನು ವನಸ್ಪತಿಯಲ್ಲಿರುವಾಗ ಆ ವನಸ್ಪತಿಗಳನ್ನು ಕತ್ತರಿಸುವವರೂ ಮತ್ತು ಕೆಡವುವರೂ ಸಹ ಬ್ರಹ್ಮಹತ್ಯಾ ದೋಷವನ್ನು ಹೊಂದುವರು.

೨೦. ಆದರೆ ಚಂದ್ರನು ನೀರನ್ನು ಪ್ರವೇಶಿಸಿ ಅಲ್ಲಿಬಿಟ್ಟ ಒಂದುಕಲೆಯಿಂದ ಹುಲ್ಲು, ಪೊದೆ, ಬಳ್ಳಿ, ಮತ್ತು ಮರಗಳೂ ಔಷಧ ಶಕ್ತಿಯನ್ನು ಹೊಂದುವುವು. ಅವುಗಳನ್ನು ಹಾಗೆ ಬೆಳಸುವನು.

೨೧. ಆ ಹುಲ್ಲುಗರಿಕೆ ಮೊದಲಾದವುಗಳಲ್ಲಿ ಕಲಾಂತರ್ಭಾವವಿರುವುದರಿಂದ ಅವನ್ನು ಹಸುಗಳು ತಿನ್ನುವುವು. ಮತ್ತು ನೀರನ್ನು ಕುಡಿಯುವುವು. ಇದರಿಂದ ಆ ಚಂದ್ರನ ಕಲೆಯಿಂದುಂಟಾದ ಔಷಧಿಗಳ ಪ್ರಭಾವದಿಂದ ಆ ಗೋವುಗಳ ಅವಯವದಲ್ಲಿ ಹಾಲಿನ ರೂಪವನ್ನು ಹೊಂದುವುವು.

ತಕ್ಷೀರಮಮೃತಂ ಭೂತ್ವಾ ಮಂತ್ರಪೂತಂ ದ್ವಿಜಾತಿಭಿಃ ।
ಸ್ವಾಹಾಕಾರವಷಟ್ಕಾರೈರ್ಹುತಾಶ್ಚಾಹುತಯಃ ಕ್ರಮಾತ್ ॥ ೨೨ ॥

ಹುತಮಗ್ನಿಷು ದೇವಾರ್ಥೇ ಪುನಃ ಸೋಮಂ ವಿವರ್ಧಯೇತ್ ।
ಏವಂ ಸಂಕ್ಷೀಯತೇ ಸೋಮಃ ಕ್ಷೀಣಶ್ಚಾಪ್ಯಾಯತೇ ಪುನಃ ॥ ೨೩ ॥

ತಸ್ಮಾತ್ಸೂರ್ಯಃ ಶಶಾಂಕಸ್ಯ ವೃದ್ಧಿಕರ್ತಾ ಸ್ವರಶ್ಮಿಭಿಃ ।
ಏವಂ ಸಂಪೂಜ್ಯತೇ ದೇವೈಃ ಪರಮಾತ್ಮಾ ಮಹಾದ್ಯುತಿಃ ॥ ೨೪ ॥

ಗತ್ವಾ ಮಿತ್ರವನಂ ಸಾಂಬ ತ್ವಮಾರಾಧಯ ಭಾಸ್ಕರಂ ।
ನ ಹಿ ಪಾಪಕೃತಃ ಸಾಂಬ ಭಕ್ತಿರ್ಭವತಿ ಭಾಸ್ಕರೇ ॥
ತಸ್ಮಾತ್ ತ್ವಂ ಪರಯಾ ಭಕ್ತ್ಯಾ ಪ್ರಪದ್ಯಸ್ವ ದಿವಾಕರಂ ॥ ೨೫ ॥

---

೨೨. ಆ ಹಾಲನ್ನು ಬ್ರಾಹ್ಮಣರು ಮಂತ್ರಗಳಿಂದ ಪರಿಶುದ್ಧವನ್ನಾಗಿ ಮಾಡಿ ಅಮೃತ ಸದೃಶವನ್ನಾಗಿ ಮಾಡುವರು. ಮತ್ತು ಅದನ್ನು ಸ್ವಾಹಾಕಾರ ಮತ್ತು ವಷಟ್ಕಾರಗಳಿಂದ ಅಗ್ನಿಯಲ್ಲಿ ದೇವತೆಗಳಿಗೋಸ್ಕರ ಹೋಮಮಾಡುವರು. ಇದರಿಂದ ಕ್ಷೀಣನಾಗಿದ್ದ ಚಂದ್ರನು ಪುನಃ ಅಭಿವೃದ್ಧಿ ಹೊಂದುವನು.

೨೩. ಅಯ್ಯ ಸಾಂಬನೇ, ಈ ರೀತಿ ಚಂದ್ರನು ಕ್ಷಯಹೊಂದುವನು. ಮತ್ತು ಕ್ಷಯಹೊಂದಿದರೂ ತನ್ನ ಅಮೃತಕಲೆಯಿಂದ ಎಲ್ಲರನ್ನೂ ಸಂತೋಷಪಡಿಸುವನು. ಹಾಗೆ ಚಂದ್ರನಿಗೆ ಕಲಾವೃದ್ಧಿಯನ್ನುಂಟುಮಾಡುವವನು ಸೂರ್ಯನೇ ಅಲ್ಲವೆ!

೨೪. ಆದುದರಿಂದ ಸೂರ್ಯನೇ ಚಂದ್ರನನ್ನು ತನ್ನ ಕಿರಣಗಳಿಂದ ಅಭಿವೃದ್ಧಿಗೊಳಿಸುವನು ಎಂದು ತಿಳಿ. ಈರೀತಿ ಮಹಾ ತೇಜಸ್ವಿಯಾದ ಸೂರ್ಯ ಪರಮಾತ್ಮನು ಎಲ್ಲಾ ದೇವತೆಗಳಿಂದಲೂ ಯಾವಾಗಲೂ ಪೂಜಿಸಲ್ಪಡುವನು.

೨೫. ಎಲೈ ಸಾಂಬನೆ; ನೀನು ಮಿತ್ರವನಕ್ಕೆ ಹೋಗಿ ಅಲ್ಲಿ ಸೂರ್ಯದೇವನನ್ನು ಭಕ್ತಿಯಿಂದ ಪೂಜಿಸು. ಸಾಂಬನೆ, ಪಾಪಿಗಳಿಗೆ ಸೂರ್ಯನಲ್ಲಿ ಭಕ್ತಿಯುಂಟಾಗುವುದಿಲ್ಲವೆಂದು ತಿಳಿ. ಆದುದರಿಂದ ನಿನಗೆ ಪ್ರಾಪ್ತವಾಗಿರುವ ನಿನ್ನ ತಂದೆಯ ಶಾಪರೂಪವಾದ ಕುಷ್ಠರೋಗ ನಿವಾರಣೆಗಾಗಿ ಅತ್ಯಂತ ಭಕ್ತಿಯಿಂದ ಸೂರ್ಯದೇವನನ್ನು ಪೂಜಿಸಿ ಧ್ಯಾನಮಾಡು; ಎಂದು ನಾರದರು ಸಾಂಬನಿಗೆ ಹೇಳಿದರು.

ಇತಿ ಶ್ರೀ ಸಾಂಬಪುರಾಣೇ ಸೋಮವೃದ್ಧಿಕ್ಷಯೋ ನಾಮ
ದ್ವಾವಿಂಶೋಽಧ್ಯಾಯಃ.

---

ಸಾಂಬಪುರಾಣದಲ್ಲಿ ಚಂದ್ರನ ಅಭಿವೃದ್ಧಿ ಮತ್ತು ಕ್ಷಯನಿರೂಪಣವೆಂಬ
ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಯೋವಿಂಶೋಽಧ್ಯಾಯಃ

---

॥ ಸಾಂಬ ಉವಾಚ ॥

ಸೂರ್ಯಲೋಕೇ ತ್ವಯಾ ವಿಪ್ರ ಗತೇನ ಋಷಿಸತ್ತಮ ।
ಆಶ್ಚರ್ಯಾಣಿ ವಿಚಿತ್ರಾಣಿ ದೃಷ್ಟಾನಿ ಸುಬಹೂನಿ ವೈ ॥ ೧ ॥

ಜನ್ಮವಿಸ್ಮಯಕರ್ತ್ರ್ಯಾಣಿ ದುರ್ವಿಜ್ಞೇಯಾನಿ ಮಾನುಷೈಃ ।
ತದಿದಂ ಮಮ ಸಂದೇಹಂ ಚಿರಕಾಲಂ ಸ್ಥಿತಂ ಹೃದಿ ॥ ೨ ॥

ಯದಿ ಶ್ರಾವ್ಯಮಿದಂ ವಾಪಿ ಮನ್ಯಸೇ ಕಥಯಸ್ವ ಮೇ ।
ಸೂರ್ಯಸ್ಯ ಗ್ರಹಣಂ ದೃಷ್ಟ್ವಾ ಮಮಾಽಽಸೀದ್ವ್ಯಾಕುಲಂ ಮನಃ ॥ ೩ ॥

---

## ಇಪ್ಪತ್ತುಮೂರನೆಯ ಅಧ್ಯಾಯ.

೧-೨. "ಎಲೈ ಪೂಜ್ಯನಾದ ನಾರದಮಹರ್ಷಿಯೇ, ನೀನು ಸೂರ್ಯಲೋಕದಲ್ಲಿ ಆಶ್ಚರ್ಯವನ್ನುಂಟುಮಾಡುವ ಅನೇಕ ವಿಚಿತ್ರ ವಸ್ತುಗಳನ್ನು ನೋಡಿರುವೆ; ನನಗೆ ಮಾತ್ರ ಈಗ ಕೆಲವು ಸಂದೇಹಗಳಿರುವುವು. ಅವು ಯಾರಿಂದಲೂ ನಿವಾರಣೆಮಾಡಲಾಗದವು. ಬಹುಕಾಲದಿಂದ ಈ ಅನೇಕ ಸಂದೇಹಗಳು ನನ್ನ ಮನಸ್ಸಿನಲ್ಲಿ ನೆಲಸಿರುವುವು. ಈ ಸಂದೇಹಗಳನ್ನು ನಿವಾರಿಸಿಕೊಳ್ಳುವ ಯೋಗ್ಯತೆಯು ನನಗಿರುವುದಾದರೆ ದಯವಿಟ್ಟು ತತ್ತ್ವಜ್ಞಾನವನ್ನುಪದೇಶಿಸಿ ನನ್ನ ಸಂದೇಹ ನಿವೃತ್ತಿ ಮಾಡಬೇಕು.

೩-೫. ಅಲ್ಲದೇ, ಸೂರ್ಯನ ಗ್ರಹಣವನ್ನು ನೋಡಿ ನನ್ನ ಮನಸ್ಸು ತುಂಬಾ ವ್ಯಾಕುಲವಾಗಿರುವುದು. ರಾಹುಗ್ರಹವು ಅಂಧಕಾರಸ್ವರೂಪನು. ಸೂರ್ಯನಾದರೋ

ರಾಹುಸ್ತು ತಮಸೋ ರಾಶಿಃ ತೇಜೋರಾಶಿರ್ದಿವಾಕರಃ ।
ಸ ಕಥಂ ಗ್ರಸ್ಯತೇ ತೇನ ಭಾನುಃ ಸ್ವರ್ಭಾನುನಾ ಮುನೇ ॥ ೪ ॥

ಯಸ್ಯ ತೇಜೋಭಿರಖಿಲೈಃ ಪ್ರಕಾಶಂ ಕ್ರಿಯತೇ ಜಗತ್ ।
ತದತ್ರ ಪರಮಾರ್ಥೋಽಯಂ ತಂ ಸಮಾಖ್ಯಾತುಮರ್ಹಸಿ ॥ ೫ ॥

॥ ನಾರದ ಉವಾಚ ॥

ಅವಿಜ್ಞೇಯಮನಾಲಕ್ಷ್ಯಂ ಜ್ಞಾನಗಮ್ಯಂ ಮಹಾತ್ಮನಾಂ ।
ರವೇಃ ಗ್ರಹಣಸಂಯೋಗಂ ಕಥ್ಯಮಾನಂ ನಿಬೋಧ ಮೇ ॥ ೬ ॥

ರಾಹುಣಾ ಗ್ರಸ್ಯತೇ ನಾऽರ್ಕೋ ವ್ಯೇತು ತೇ ಹೃದಯವ್ಯಥಾ ।
ಕಸ್ಯ ಶಕ್ತಿಃ ಗೃಹೀತುಂ ವೈ ತೇಜೋರಾಶಿಂ ದಿವಾಕರಂ ॥ ೭ ॥

---

ತೇಜೋರಾಶಿಯು. ಹೀಗಿರುವಾಗ ನಾರದಮಹರ್ಷಿಯೇ! ತೇಜಃಸ್ವರೂಪನಾದ ಸೂರ್ಯನನ್ನು, ಅಂಧಕಾರ ಸ್ವರೂಪನಾದ ರಾಹುವು, ನುಂಗುವುದು ತಾನೆ ಹೇಗೆ ?

ಯಾವ ಸೂರ್ಯನ ಸಕಲ ತೇಜಸ್ಸುಗಳಿಂದಲೇ ಪ್ರಪಂಚವೆಲ್ಲಾ ಪ್ರಕಾಶವನ್ನು ಹೊಂದಿರುವುದೋ ಅಂತಹವನಿಗೆ ಈ ರೀತಿ ಗ್ರಹಣ ಉಂಟಾಗುವುದು ಹೇಗೆ ? ಇದರ ಪರಮಾರ್ಥವನ್ನು ಸಮರ್ಥನಾದ ನೀನು ನನಗೆ ತಿಳಿಸಬೇಕು." ಎಂದು ಸಾಂಬನು ನಾರದರನ್ನು ಕೇಳಿದನು.

೬. "ಎಲೈ ಸಾಂಬನೇ! ಈ ಸೂರ್ಯಗ್ರಹಣ ವಿಷಯವು ತಿಳಿಯಲು ಅಸಾಧ್ಯವಾಗಿರುವುದು. ಇತರರಿಗೆ ಗೋಚರವಾಗುವುದೂ ಬಹಳ ಕಷ್ಟ. ಮಹಾತ್ಮರು ತಮ್ಮ ದಿವ್ಯಜ್ಞಾನದಿಂದ ಮಾತ್ರ ಅದನ್ನು ತಿಳಿಯಬಲ್ಲರು. ಇಂತಹ ಸೂರ್ಯಗ್ರಹಣ ಸ್ವರೂಪವನ್ನು ನಿನಗೆ ನಾನು ಹೇಳುವೆನು. ಕೇಳು" ಎಂದು ನಾರದರು ಹೀಗೆಂದರು.

೭-೮. ಸೂರ್ಯನನ್ನು ರಾಹುವು ನುಂಗುವುದಿಲ್ಲ. ಈ ವಿಷಯದಲ್ಲಿ ನೀನು ಮನೋವ್ಯಥೆಯನ್ನು ಬಿಡು. ತೇಜೋರಾಶಿಯಾದ ಸೂರ್ಯನನ್ನು ಹಿಡಿಯಲು ಯಾರು ತಾನೆ ಸಮರ್ಥರೆನಿಸುವರು ?

ಸರ್ವಸ್ಯೋಽಯಮಸಂಗ್ರಾಹ್ಯೋ ಹ್ಯಬುಧಸ್ಯ ಜನಸ್ಯ ತು ।
ಇದಂ ತ್ವದ್ದರ್ಶನಂ ಸಾಂಬ ಶೃಣು ಯತ್ತೇ ವದಾಮ್ಯಹಂ ॥ ೮ ॥

ಯದ್‌ಜ್ಞಾತ್ವಾ ತು ಮಹಾಜ್ಞಾನಂ ನ ಕರಿಷ್ಯತಿ ಸಂಶಯಃ ।
ಯದಿ ಸತ್ಯಮಯಂ ಗ್ರಸ್ತಃ ತೇಜೋರಾಶಿ ರ್ದಿವಾಕರಃ ॥ ೯ ॥

ತತ್ಕಥಂ ನೋದರಸ್ಥೇನ ರಾಹುಃ ಭಸ್ಮೀಕೃತಃ ಕ್ಷಣಾತ್ ।
ಅಥಾಪಿ ರಾಹುಣಾಕ್ರಮ್ಯ ಭಾನುಃ ವಕ್ತ್ರಪ್ರವೇಶಿತಃ ॥ ೧೦ ॥

ತತ್ಕಥಂ ದರ್ಶನೈಸ್ತೀಕ್ಷ್ಣೈಃ ಶತಧಾ ನ ವಿಖಂಡಿತಃ ।
ನಿರ್ಮುಕ್ತಸ್ತು ಪುನರ್ದೃಷ್ಟಃ ತಥೈವಾಽಖಂಡಮಂಡಲಃ ॥ ೧೧ ॥

---

ಈ ಸೂರ್ಯನು ಸರ್ವಪ್ರಾಣಿಗಳಲ್ಲಿ ಅಡಗಿದ್ದರೂ ಅಜ್ಞಾನಿಗಳಾದ ಜನಗಳಿಗೆ ಅಗೋಚರನೆನಿಸಿರುವನು. ಎಲೈ ಸಾಂಬನೇ! ಈ ರೀತಿ ಸೂರ್ಯನು ಎಲ್ಲರಿಗೂ ಗೋಚರನಾಗದೇ ಇರುವ ತತ್ತ್ವವನ್ನು ನಿನಗೆ ಹೇಳುವೆನು ಕೇಳು.

೯-೧೦. ಯಾವ ಈ ಸೂರ್ಯನ ಗ್ರಹಣ ವಿಷಯಕವಾದ ಮಹಾಜ್ಞಾನವು ಉಂಟಾದರೆ ನಿನ್ನ ಎಲ್ಲಾ ಸಂಶಯವೂ ನಿವೃತ್ತವಾಗುವುದೋ ಅದನ್ನು ಈಗ ತಿಳಿಸುವೆನು. ನಿಜವಾಗಿಯೂ ತೇಜೋರಾಶಿಯಾದ ಸೂರ್ಯನನ್ನು ರಾಹುವು ನುಂಗುವುದೇ ಆದರೆ, ಹಾಗೆ ನುಂಗಿದ ರಾಹುವಿನ ಹೊಟ್ಟೆಯು ತೇಜೋರಾಶಿಯಾದ ಸೂರ್ಯನಿಂದ ಕ್ಷಣಮಾತ್ರದಲ್ಲಿ ಭಸ್ಮವಾಗುತ್ತಲಿದ್ದಿತು. ಅಲ್ಲದೆ ರಾಹುವು ಸೂರ್ಯನನ್ನು ಬಲಾತ್ಕಾರದಿಂದ ಬಾಯಲ್ಲಿ ನುಂಗಲು ಪ್ರಾರಂಭಿಸಿದರೆ;

೧೧-೧೨. ಆ ಸೂರ್ಯನ ತೀಕ್ಷ್ಣವಾದ ನೋಟಗಳಿಂದ ರಾಹುವು ನೂರಾರು ಚೂರಾಗಬೇಕಾಗಿತ್ತು. ಅಲ್ಲದೆ ರಾಹುವು ಸೂರ್ಯನನ್ನು ಬಿಟ್ಟಮೇಲೆ ಸೂರ್ಯನು ಸಂಪೂರ್ಣ ಮಂಡಲ ಸ್ವರೂಪನಾಗಿ ಇರುವನು. ಇವನ ತೇಜಸ್ಸು ಅಪಹರಿಸಲ್ಪಡುವುದಿಲ್ಲ. ಅಥವಾ ಇಲ್ಲಿಂದ ಇನ್ನೊಂದು ಕಡೆಗೆ ಬದಲಾಯಿಸಿಯೂ ಇರುವುದಿಲ್ಲ. ಎಲೈ ಸಾಂಬನೆ! ನೀನು ಹೇಳುವಂತೆ ಸೂರ್ಯನನ್ನು

ನ ವಾಽಸ್ಯಾಪಹೃತಂ ತೇಜೋ ನ ಸ್ಥಾನಾದವರೋಪಿತಃ ।
ಯದಿ ಚಾಪ್ಯೇಷ ನಿಷ್ಪೀತಃ ಕಥಂ ದೀಪ್ತತರೋ ಭವೇತ್ ॥ ೧೨ ॥

ತಸ್ಮಾನ್ನ ತೇಜಸೋ ರಾಶೀ ರಾಹೋರ್ವಕ್ತ್ರಂ ಗಮಿಷ್ಯತಿ ।
ಭಕ್ಷಾರ್ಥಂ ಸರ್ವಭೂತಾನಾಂ ಸೋಮಃ ಸೃಷ್ಟಃ ಸ್ವಯಂಭುವಾ ॥ ೧೩ ॥

ತತ್ರಸ್ಥಮಮೃತಂ ಚಾಪಿ ಸಂಭೂತಂ ಸೂರ್ಯತೇಜಸಾ ।
ಪಿಬಂತ್ಯಂಬುಮಯಂ ದೇವಾಃ ಪಿತರಶ್ಚ ಸ್ವಧಾಮಯಂ ॥ ೧೪ ॥

ತ್ರಯಸ್ತ್ರಿಂಶತ್ ತ್ರಯಶ್ಚೈವ ತ್ರಯಸ್ತ್ರಿಂಶತ್ತಥೈವ ಚ ।
ತ್ರಯಸ್ತ್ರಿಂಶತ್ ಸಹಸ್ರಾಶ್ಚ ದೇವಾಃ ಸೋಮಂ ಪಿಬಂತಿ ತೇ ॥ ೧೫ ॥
ರಾಹೋರ್ಯದಾಮೃತಾದ್ಭಾಗಃ ಪುರಾ ಸೃಷ್ಟಃ ಸ್ವಯಂಭುವಾ ।
ತಸ್ಮಾತ್ತಂ ರಾಹುರಭ್ಯೇತ್ಯ ಪಾತುಮಿಚ್ಛತಿ ಪರ್ವಸು ॥ ೧೬ ॥

---

ರಾಹುವು ಪಾನಮಾಡುವುದೇ ಆದರೆ ಅತ್ಯಂತ ತೇಜಸ್ವಿಯಾಗಿ ಇರಲು ಹೇಗೆ ಸಾಧ್ಯವಾಗುತ್ತಲಿತ್ತು.? ಆದುದರಿಂದ ತೇಜೋರಾಶಿಯಾದ ಸೂರ್ಯನನ್ನು ರಾಹುವು ನುಂಗಲು ಸರ್ವಥಾ ಸಾಧ್ಯವಿಲ್ಲ.

೧೩-೧೪. ಬ್ರಹ್ಮನು ಸಕಲ ಭೂತಗಳಿಗೂ ಭಕ್ಷಣೆಮಾಡಲು ಯೋಗ್ಯವಾಗುವಂತೆ ಚಂದ್ರಗ್ರಹವನ್ನು ಸೃಷ್ಟಿಸಿರುವನು. ಸೂರ್ಯನು ತನ್ನ ತೇಜಸ್ಸಿನಿಂದ ಚಂದ್ರನಲ್ಲಿ ಅಮೃತವನ್ನು ಉಂಟುಮಾಡಿರುವನು ದೇವತೆಗಳು ಜಲಮಯನಾದ ಚಂದ್ರನಲ್ಲಿ ಅಮೃತವನ್ನು ಪಾನಮಾಡುವರು. ಪಿತೃಗಳು ಸ್ವಧಾಮಯವಾದ ಅಮೃತವನ್ನು ಸೇವಿಸುವರು.

೧೫. ಮೂವತ್ತುಮೂರು ಕೋಟಿ ದೇವತೆಗಳೂ, ಚಂದ್ರನಲ್ಲಿ ಕಂಡುಬರುವ ಅಸಂಖ್ಯಾತವಾದ ಅಮೃತಕಿರಣಗಳನ್ನು ಸರ್ವದಾ ಮನಸ್ತೃಪ್ತಿಯಾಗುವಂತೆ ಸೇವಿಸುತ್ತಿರುವರು.

೧೬. ಬ್ರಹ್ಮನು ಎಲ್ಲಾ ದೇವತೆಗಳಂತೆ ರಾಹುವಿಗೂ ಅಮೃತದಲ್ಲಿ ಒಂದು ಭಾಗವನ್ನು ಹಿಂದೆ ಕಲ್ಪಿಸಿರುವನು. ಆದುದರಿಂದ ರಾಹುವು ಪರ್ವಕಾಲಗಳಲ್ಲಿ ಚಂದ್ರನನ್ನು ಸಮೀಪಿಸಿ ಅಮೃತ ಪಾನಮಾಡಲು ಅಪೇಕ್ಷಿಸುವನು.

**ಉದ್ಧೃತ್ಯ ಪಾರ್ಥಿವೀಂ ಛಾಯಾಮುಮ್ನಾಕಾರ ಸ್ತಮೋಮಯಃ ।**
**ಪಾತುಮಿಚ್ಛಂಸ್ತತಶ್ಚಂದ್ರಮಾಚ್ಛಾದಯತಿ ಛಾಯಯಾ ॥ ೧೭ ॥**

**ಶುಕ್ಲೇ ಸ ಚಂದ್ರಮಭ್ಯೇತಿ ಕೃಷ್ಣೇ ಪರ್ವಣಿ ಭಾಸ್ಕರಂ ।**
**ಸೂರ್ಯಮಂಡಲಸಂಸ್ಥಂ ತು ಚಂದ್ರಮೇವ ಜಿಘಾಂಸತಿ ॥ ೧೮ ॥**

**ತಸ್ಮಾತ್ಪಿಬತಿ ತಂ ರಾಹುಸ್ತನುಮಸ್ಯಾ ವಿನಾಶಯನ್ ।**
**ಅವಿಹಿಂಸನ್ ಯಥಾ ಪದ್ಮಂ ಪಿಬತೇ ಭ್ರಮರೋ ಮೃದು ॥ ೧೯ ॥**

**ಚಂದ್ರಸ್ಯೇವಾಮೃತಂ ತದ್ವತ್ ಅಭೇದಾತ್ ರಾಹುರಶ್ನುತೇ ।**
**ಚಂದ್ರಕಾಂತಾಮಣಿರ್ಯದ್ವತ್ ಹೀನಂ ಕ್ಷರತಿ ತತ್ಕ್ಷಣಾತ್ ॥ ೨೦ ॥**

---

೧೭. ಅಂಧಕಾರ ಸ್ವರೂಪನೂ ಕೇವಲ ಶಿರೋಮಾತ್ರ ಆಕಾರವುಳ್ಳವನೂ, ಆದ ರಾಹುವು ಭೂಮಿಯ ನೆರಳನ್ನು ಮೇಲೆ ಬೀಳುವಂತೆ ಮಾಡಿ ಅನಂತರ ಅಮೃತವನ್ನು ಪಾನಮಾಡಲು ಅಪೇಕ್ಷಿಸುವವನಾಗಿ, ಆ ಭೂಮಿಯ ಛಾಯೆಯಿಂದ ಚಂದ್ರನನ್ನು ಮರೆಮಾಡುವನು.

೧೮. ಶುಕ್ಲಪಕ್ಷದ ಪೂರ್ಣಿಮೆಯಲ್ಲಿ ಚಂದ್ರನನ್ನು ಸಮೀಪಿಸುವನು. ಕೃಷ್ಣ ಪಕ್ಷದ ಅಮಾವಾಸ್ಯೆದಿನ ಸೂರ್ಯನ ಸಮೀಪಕ್ಕೆ ಹೋಗುವನು. ರಾಹುವು ಕೃಷ್ಣ ಪಕ್ಷವಲ್ಲಿ ಚಂದ್ರನು ಸೂರ್ಯಮಂಡಲದಲ್ಲಿರುವುದರಿಂದಲೇ ಸೂರ್ಯನ ಸಮೀಪಕ್ಕೆ ಹೋಗಿ ಅವನಿಂದ ಅಮೃತಭಾಗವನ್ನು ಹೊಂದುವನು.

೧೯. ರಾಹುವು ಈರೀತಿ ಚಂದ್ರನ ಸಮೀಪಕ್ಕೆ ಬಂದು ಅವನ ಶರೀರವನ್ನು ಹಿಂಸಿಸದೆ, ದುಂಬಿಯು ಪದ್ಮ (ಕಮಲದ) ಪುಷ್ಪವನ್ನು ಬಾಡಿಸದೆ ಅಲ್ಲಿರುವ ಮಕರಂದವನ್ನು ಮಾತ್ರ ಪಾನಮಾಡುವಂತೆ ಚಂದ್ರನಲ್ಲಿರುವ ಅಮೃತವನ್ನು ಮಾತ್ರ ಪಾನಮಾಡಿ ತೃಪ್ತನಾಗುವನು.

೨೦. ಚಂದ್ರನ ದೇಹವು ಸೂರ್ಯನ ಕಿರಣ ಸ್ವರೂಪವೇ ಆಗಿರುವುದರಿಂದ ಸೂರ್ಯಚಂದ್ರರಲ್ಲಿ ಭೇದವೆಣಿಸದೆ ರಾಹುವು ಚಂದ್ರನಲ್ಲಿಯೇ ಅಮೃತಪಾನ ಮಾಡುವನು. ಚಂದ್ರಕಾಂತ ಮಣಿಯು ತಾನು ಚಂದ್ರದರ್ಶನದಿಂದ ದ್ರವರೂಪ ವಾಗಿ ಹರಿದರೂ ಸ್ವಲ್ಪವೂ ಬದಲಾಯಿಸದೆ ಹಿಂದಿನ ರೂಪದಲ್ಲಿಯೇ ಹೇಗೆ ಇರುವುದೋ, ಹಾಗೆಯೇ ರಾಹುವಿನಿಂದ ಪಾನಮಾಡಲ್ಪಟ್ಟ ಚಂದ್ರನೂ ಸಹ ಹಿಂದಿನಂತೆಯೇ ಅವಿಕಾರಿಯಾಗಿಯೇ ನಿಲ್ಲುವನು. ಇದರಿಂದ ಚಂದ್ರನಿಗೆ ಯಾವ ವಿಧವಾದ ಬಾಧೆಯೂ ಉಂಟಾಗಲಾರದು.

ತುಷಾರೋಽಪಿ ನ ಹೀಯೇತ ತೇಜಸಾ ನೈವ ಮುಚ್ಯತೇ ।
ಯಥಾ ಸೂರ್ಯಮಣಿಶ್ಚಾಽಪಿ ಸೂರ್ಯಾದುತ್ಪಾದ್ಯ ಪಾವಕಂ ॥ ೨೧ ॥

ನ ಭವತ್ಯಂಗಹೀನೋ ವೈ ತೇಜಸಾ ನೈವ ಮುಚ್ಯತೇ ।
ಏವಂ ಚಂದ್ರಶ್ಚ ಸೂರ್ಯಶ್ಚ ಛಾದಿತಾವಪಿ ರಾಹುಣಾ ॥ ೨೨ ॥

ತೇಜಸಾ ನ ವಿಮುಚ್ಯೇತೇ ನಾಂಗಹೀನೌ ಬಭೂವತುಃ ।
ಪರ್ವಸ್ವಥ ತು ಚಂದ್ರಸ್ಯ ಮಾಣಿಕ್ಯಫಲಸಾತ್ಕೃತಿಃ ॥ ೨೩ ॥

ಸೋಮೋ ದೈವತಸಂಯೋಗಾತ್ ಛಾಯಾಯೋಗಾಚ್ಚ ಪಾರ್ಥಿವಾತ್ ।
ರಾಹೋಶ್ಚ ವರದಾನಾದ್ಯೈಃ ಪ್ರಸ್ರವತ್ಯಮೃತಂ ಶಶೀ ॥ ೨೪ ॥

---

೨೧-೨೨. ರಾಹುವು ಚಂದ್ರನಲ್ಲಿ ಅಮೃತಪಾನಮಾಡಿದರೂ, ಚಂದ್ರನಲ್ಲಿ ಇರುವ ಹಿಮಕಿರಣಗಳು ಎಂದಿಗೂ ನಷ್ಟವಾಗುವುದಿಲ್ಲ. ಪ್ರಕಾಶವೂ ಸಹ ಕಡಿಮೆ ಯಾಗಲಾರದು. ಸೂರ್ಯನ ಕಿರಣಸಂಪರ್ಕದಿಂದ ಸೂರ್ಯಕಾಂತ ಮಣಿಯು ಅಗ್ನಿಯನ್ನುಂಟುಮಾಡಿದರೂ, ಸೂರ್ಯಕಾಂತವು ಮಾತ್ರ ಎಂದಿಗೂ ಮಂಕಾಗದು. ಅದರಂತೆ ಚಂದ್ರಸೂರ್ಯರು, ರಾಹುವಿನಿಂದ ಮರೆಮಾಡಲ್ಪಟ್ಟರೂ, ತೇಜಸ್ಸನ್ನು ಮಾತ್ರ ಕಳೆದುಕೊಳ್ಳದೆ ಸರ್ವದಾ ಸ್ವಪ್ರಕಾಶದಿಂದ ಸ್ಫುರಿಸುತ್ತಲೇ ಇರುವರು.

೨೩. ಚಂದ್ರನು ಪರ್ವಕಾಲದಲ್ಲಿ ಇನ್ನೂ ಹೆಚ್ಚಾಗಿ ಮುಕ್ತಾಫಲದಂತೆಯೂ ರತ್ನಗಳಂತೆಯೂ ಸ್ಫುಟವಾದ ಆಕಾರದಿಂದಿರುವನು.

೨೪. ಚಂದ್ರನು, ದೈವ ಸಂಘಟನೆಯಿಂದಲೂ, ಭೂಮಿಯ ನೆಳಲಿನ ಸಂಪರ್ಕದಿಂದಲೂ, ರಾಹುವಿಗೆ ಕೊಟ್ಟಿರುವ ವರದಿಂದಲೂ, ಅಮೃತವನ್ನು ತನ್ನ ಕಿರಣಗಳಮೂಲಕ ಸುರಿಸುವನು.

ಸ್ವದೋಹಕಾಲೇ ಸಂಪ್ರಾಪ್ತೇ ವತ್ಸಂ ದೃಷ್ಟ್ವಾ ಯಥಾ ಚ ಗೌಃ ।
ಸ್ವಾಂಗಾದಿವ ಕ್ಷರೇತ್ ಕ್ಷೀರಂ ತಥೇಂದುಃ ಕ್ಷರತೇಽಮೃತಂ ॥ ೨೫ ॥

ಪಿತೇವ ಸೂರ್ಯೋ ದೇವಾನಾಂ ಸೋಮೋ ಮಾತೇವ ಲಕ್ಷ್ಯತೇ ।
ಮಾತುಸ್ತನಂ ಯಥಾ ಪೀತ್ವಾ ತೃಪ್ಯಂತೇ ಸರ್ವಜಂತವಃ ।
ಪೀತ್ವಾಽಮೃತಂ ತಥಾ ಸೋಮೇ ತೃಪ್ಯಂತೇ ಪಿತೃದೇವತಾಃ ॥ ೨೬ ॥

ಸಂಭೃತಂ ಪರ್ವಯೋಗೇ ತು ತಥಾಽಯಂ ಕ್ಷರತೇ ಶಶೀ ।
ತಂ ಕ್ಷರಂತಂ ಯಥಾಭಾಗಮುಪಯುಂಜಂತಿ ದೇವತಾಃ ॥ ೨೭ ॥

---

೨೫. ಹಾಲುಕೊಡುವ ಸಮಯದಲ್ಲಿ ಹಸುವು ಕರುವನ್ನು ನೋಡಿ ತನ್ನ ಅವಯವದಿಂದ (ಕೆಚ್ಚಲಿನಿಂದ) ಹಾಲನ್ನು ಸಂತೋಷದಿಂದ ಕರೆಯುವಂತೆ, ಚಂದ್ರನು, ತನ್ನ ಪ್ರಜೆಗಳನ್ನು ನೋಡಿ ಆಯಾಯಾ ಕಾಲದಲ್ಲಿ ಅವರವರಿಗೆ ಬೇಕಾದ ಅಮೃತ ಭಾಗಗಳನ್ನು ಆನಂದದಿಂದ ಕೊಡುವನು.

ಇದರಿಂದ ದೇವತೆಗಳಿಗೆ ಸೂರ್ಯನು ತಂದೆಯಂತೆಯೂ, ಚಂದ್ರನು ತಾಯಿಯಂತೆಯೂ ಇರುವರೆಂದು ಭಾವಿಸಬೇಕು. ಏಕೆಂದರೆ ಸೂರ್ಯನು ತಂದೆಯಂತೆ ಕಷ್ಟಗಳನ್ನು ನಿವಾರಣಮಾಡಿ ಬೇಕಾದ ಪೋಷಕ ದ್ರವ್ಯವನ್ನು ಒದಗಿಸಿಕೊಡುವನು. ತಾಯಿಯು ಕಾಲಕಾಲದ ಸ್ತನ್ಯಪಾನಗಳಿಂದಲೂ, ಆಹಾರ ದಾನಗಳಿಂದಲೂ ಮಕ್ಕಳನ್ನು ಸಲಹುವಂತೆ ಚಂದ್ರನು ದೇವತಾವರ್ಗಗಳನ್ನು ಬೆಳೆಸುವನು.

೨೬. ತಾಯಿಯ ಎದೆ ಹಾಲನ್ನು ಕುಡಿದು ಪ್ರಾಣಿವರ್ಗವು ತೃಪ್ತಿಹೊಂದುವಂತೆ ಚಂದ್ರನಿಂದ ಅಮೃತಪಾನಮಾಡಿ ಪಿತೃಗಳೂ ದೇವತೆಗಳೂ ಸಹ ಆನಂದಪಡುವರು.

೨೭. ಚಂದ್ರನು ಸೂರ್ಯನಿಂದ ಅಮೃತಸಂಗ್ರಹಮಾಡಿ ಅದನ್ನು ಪರ್ವ ಕಾಲಗಳಲ್ಲಿ ದೇವತೆಗಳಿಗೋಸ್ಕರ ಕಿರಣಗಳ ಮೂಲಕ ಸುರಿಸುವನು. ದೇವತೆಗಳು ತಮ್ಮ ತಮ್ಮ ಭಾಗವನ್ನು ತಾವು ಸರಿಯಾಗಿ ಉಪಯೋಗಿಸಿಕೊಂಡು ಅದರಿಂದ ನಿತ್ಯಸುಖವನ್ನು ಪಡೆಯುವರು.

ತಸ್ಮಿನ್ಕಾಲೇ ಸಮಭ್ಯೇತ್ಯ ರಾಹುರಪ್ಯಪಕರ್ಷತಿ ।
ಸರ್ವಮರ್ಧಂ ತ್ರಿಭಾಗಂ ವಾ ಪಾದಂ ಪಾದಾರ್ಧಮೇವ ವಾ ॥ ೨೮ ॥

ಆಕ್ರಮ್ಯ ಪಾರ್ಥಿವೀಂ ಛಾಯಾಂ ಯಾವತೀಂ ಚಂದ್ರಮಂಡಲಂ ।
ಸ್ಮೃತಃ ಸ ಭಾಗೋ ರಾಹೋಸ್ತು ದೇವಭಾಗಶ್ಚ ಶೇಷಕಃ ॥ ೨೯ ॥

ತೃಪ್ತಿಂ ವಿಧಾಯ ದೇವಾನಾಂ ರಾಹೋಃ ಪರ್ವಗತಸ್ಯ ಚ ।
ಚಂದ್ರೋ ನ ಕ್ಷೀಣತಾಂ ಯಾತಿ ತೇಜಸಾ ನೈವ ಮುಚ್ಯತೇ ॥ ೩೦ ॥

ತಿಥಿಭಾಗಸ್ತು ಯಾವಂತಂ ಪುನರರ್ಕಪ್ರಮಾಣತಃ ।
ಏವಂ ಛಾಯಾಸ್ಥಿತೇ ಕಾಲೇ ಭಗವಾನೇವ ಕೀರ್ತಿತಃ ॥ ೩೧ ॥

---

೨೮-೨೯. ಆ ಸಮಯದಲ್ಲಿ ಅಂದರೆ ಚಂದ್ರನು ಅಮೃತವನ್ನು ಸುರಿಸುವ ವೇಳೆಯಲ್ಲಿ ರಾಹುವೂ ಅಲ್ಲಿಗೆ ಬಂದು ಚಂದ್ರನಲ್ಲಿರುವ ಅಮೃತದ ಎಲ್ಲಾಭಾಗವನ್ನೂ ಕೆಲವು ವೇಳೆ ನಾಲ್ಕನೇ ಮೂರು ಭಾಗವನ್ನೂ, ಕೆಲವು ಸಲ ಅರ್ಧ ಭಾಗವನ್ನೂ ಮತ್ತೆ ಕೆಲವು ಸಲ ನಾಲ್ಕನೇ ಒಂದು ಭಾಗವನ್ನೂ ಸ್ವೀಕರಿಸುವನು. ಭೂಮಿಯ ನೆರಳು ಚಂದ್ರಮಂಡಲಕ್ಕೆ ಎಷ್ಟುಭಾಗ ಮರೆಮಾಡುವುದೋ ಅಷ್ಟುಭಾಗದ ಅಮೃತ ವನ್ನು ಪಾನಮಾಡುವನು. ಮಿಕ್ಕಭಾಗವು ದೇವಭಾಗವೆನಿಸುವುದು.

೩೦. ಹೀಗೆ ಚಂದ್ರನು ಪರ್ವಕಾಲದಲ್ಲಿ, ದೇವತೆಗಳಿಗೂ ಮತ್ತೂ ರಾಹುವಿಗೂ ಅಮೃತದಾನದಿಂದ ತೃಪ್ತಿಯುಂಟುಮಾಡಿ, ತಾನು ಮಾತ್ರ ಕ್ಷೀಣ ನಾಗುವನೆಂದು ತಿಳಿಯಬೇಡ. ಅವನ ತೇಜಸ್ಸು ಮತ್ತೂ ವೃದ್ಧಿಯಾಗುವುದು.

೩೧. ಸೂರ್ಯಚಂದ್ರರ ಅಂತರದಿಂದ ತೋರಿಬರುವ ಭಾಗಗಳಿಗನುಸಾರವಾಗಿ ತಿಥಿಗಳು ಉತ್ಪನ್ನವಾಗುವುವು. ಆ ತಿಥಿಗೆ ಅನುಸಾರವಾಗಿ ಭೂಛಾಯೆಯು ಚಂದ್ರನ ಮಂಡಲದ ಅಲ್ಪಸ್ವಲ್ಪ ಭಾಗವನ್ನು ಮುಚ್ಚಿಬಿಡುವುದು.

ಅಧೋ ರಾಹುಃ ಪರಂ ಸೋಮಃ ಸೋಮಾದೂರ್ಧ್ವಂ ದಿವಾಕರಃ ।
ಪರ್ವಕಾಲೇ ಸ್ಥಿತಿಸ್ತ್ವೇವಂ ವಿಪರೀತಾ ಗತೌ ಪುನಃ ॥ ೩೨ ॥

ಅತಶ್ಛಾದಯತೇ ರಾಹುರಭ್ರವಚ್ಛಶಿಭಾಸ್ಕರೌ ।
ರಾಹುರಭ್ರಕಸಂಸ್ಥಾನಂ ಸೋಮಮಾಚ್ಛಾದ್ಯ ತಿಷ್ಠತಿ ॥ ೩೩ ॥

ಉದ್ಧೃತ್ಯ ಪಾರ್ಥಿವೀಂ ಛಾಯಾಂ ಧೂಮಾನ್ಮೇಘ ಇವೋತ್ಥಿತಃ ।
ಚಂದ್ರಸ್ಯ ಯದವಸ್ಪೃಷ್ಟಂ ರಾಹುಣಾ ಭಾಸ್ಕರಸ್ಯ ಚ ॥ ೩೪ ॥

ತೇಽಭ್ರಾವಖಂಡಿತಂ ತಸ್ಯ ಕೇವಲಂ ಶ್ಯಾಮಲೀಕೃತಂ ।
ಕರ್ದಮೇನ ಯಥಾ ವಸ್ತ್ರಂ ಶುಕ್ಲತ್ವಮುಪಹನ್ಯತೇ ॥ ೩೫ ॥

ಏಕದೇಶೇ ಚ ಸರ್ವಂ ವಾ ರಾಹುಣಾ ಚಂದ್ರಮಾಸ್ತಥಾ ।

---

೩೨. ಪರ್ವಕಾಲದಲ್ಲಿ, ಕೆಳಗಡೆ ರಾಹುವೂ, ಅವನಿಗಿಂತ ಮೇಲೆ ಚಂದ್ರನೂ ಚಂದ್ರನಿಗಿಂತ ಮೇಲುಭಾಗದಲ್ಲಿ ಸೂರ್ಯನೂ ಸಹ ಇರುವರು. ಮುಂದೆ ಪರ್ವಕಾಲದಿಂದ ಸಂಚರಿಸುವಾಗ ಇದಕ್ಕೆ ವಿಪರೀತವಾಗಿ ಇವರುಗಳ ಸ್ಥಿತಿ ತೋರುವುದು. ಅಂದರೆ ಸೂರ್ಯನು ಮೊದಲು, ಅವನ ಮೇಲೆ ಚಂದ್ರ, ಅವನ ಮೇಲೆ ರಾಹು ಈ ರೀತಿ ಸಂಚರಿಸುವರು.

೩೩. ಆದುದರಿಂದ ರಾಹುವು ಪರ್ವಕಾಲಗಳಲ್ಲಿ ಸೂರ್ಯಚಂದ್ರರಿಗಿಂತಲೂ ಕೆಳಭಾಗದಲ್ಲಿರುವುದರಿಂದ ಮೇಘದಂತೆ ಸೂರ್ಯಚಂದ್ರರನ್ನು ಮರೆಮಾಡುವನು. ಈಗ ರಾಹುವು ಮೇಘಸ್ಥಾನೀಯನೆಂದು ತಿಳಿಯಬೇಕು.

೩೪-೩೬ ರಾಹುವು ಭೂಛಾಯೆಯನ್ನು ಚಂದ್ರಸೂರ್ಯರಿಗೆ ಮರೆ ಮಾಡಿ ಮೇಘವು ಸೂರ್ಯಚಂದ್ರರನ್ನು ಮುಚ್ಚುವಹಾಗೆ ಅವರಿಂದ ಮುಚ್ಚಿಸುವನು. ಚಂದ್ರಸೂರ್ಯರಿಗೆ ರಾಹುವಿಗೆ ಸ್ಪರ್ಶವಾಗಿರುವ ಭಾಗವು, ತುಂಡಾದ ಮೇಘದಂತೆ ಕೃಷ್ಣವರ್ಣದಲ್ಲಿರುವುದರಿಂದ ಗ್ರಹಣ ಸಮಯದಲ್ಲಿ ಜನಗಳಿಗೆ ಆ ಭಾಗವು ಕಪ್ಪಾಗಿ ತೋರುವುದು.

ಪ್ರಕ್ಷಾಲಿತಂ ತದೇವೇಹ ಪುನಃ ಶುಕ್ಲತರಂ ಭವೇತ್ ॥ ೩೬ ॥

ರಾಹುಮುಕ್ತಂ ಭವೇತ್ತದ್ವನ್ನಿರ್ಮಲಂ ಚಂದ್ರಮಂಡಲಂ ।
ರಾಹುಣಾಚ್ಛಾದಿತೌ ವಾಪಿ ದೃಷ್ಟ್ವಾ ಚಂದ್ರದಿವಾಕರೌ ॥ ೩೭ ॥

ವಿಪ್ರಾಃ ಶಾಂತಿಪದಾ ಭೂತ್ವಾ ಪುನರಾಪ್ಯಾಯಯಂತಿ ವೈ ।
ಏವಂ ಚ ಗೃಹ್ಯತೇ ಸೂರ್ಯಶ್ಚಂದ್ರಮಾಸ್ತತ್ರ ಗೃಹ್ಯತೇ ॥ ೩೮ ॥

ಅಬುಧಾಸ್ತನ್ನ ಪಶ್ಯಂತಿ ಮನುಷ್ಯಾ ಮಾಂಸಚಕ್ಷುಷಃ ।
ಜಗತ್ಸಂಮೋಹನಂ ಚೈವ ಗ್ರಹಣಂ ಚಂದ್ರಸೂರ್ಯಯೋಃ ॥ ೩೯ ॥

---

ಬಿಳುಪಾದ ವಸ್ತ್ರಕ್ಕೆ ಕೆಸರು ಸೇರಿದರೆ ಆ ವಸ್ತ್ರವು ಹೇಗೆ ಮಲಿನವಾಗುವುದೋ ಮತ್ತು ಪುನಃ ಅದನ್ನು ತೊಳೆದರೆ ಮೊದಲಿಗಿಂತಲೂ ಹೇಗೆ ಹೆಚ್ಚು ಶುಭ್ರವಾಗುವುದೋ, ಅದರಂತೆಯೇ ಚಂದ್ರಸೂರ್ಯರನ್ನು ಏಕ ದೇಶದಲ್ಲಿಯಾಗಲೀ (ಸ್ವಲ್ಪ ಭಾಗದಲ್ಲಿಯಾಗಲಿ) ಅಥವ ಸಂಪೂರ್ಣವಾಗಿಯಾಗಲೀ ರಾಹುವು ಭೂಛಾಯೆಯಿಂದ ಮರೆಮಾಡಿದಾಗ ಆ ಸೂರ್ಯಚಂದ್ರರ ಭಾಗಗಳು ಕಪ್ಪಾಗಿಕಂಡು ಅನಂತರ ಮೊದಲಿಗಿಂತಲೂ ಹೆಚ್ಚು ಕಾಂತಿಯುಕ್ತಗಳಾಗಿ ತೋರುವುವು.

೩೭-೩೮. ಗ್ರಹಣಕಾಲದಲ್ಲಿ ರಾಹುವಿನಿಂದ ಮರೆಮಾಡಲ್ಪಟ್ಟಿರುವ ಚಂದ್ರಸೂರ್ಯರನ್ನು ನೋಡಿ ಬ್ರಾಹ್ಮಣರು ಶಾಂತಿತತ್ಪರರಾಗಿ ತರ್ಪಣಾದಿಗಳಿಂದ ಚಂದ್ರಸೂರ್ಯರನ್ನು ಪುನಃ ಸಂತೋಷಗೊಳಿಸುವರು. ಅಯ್ಯ ಸಾಂಬನೆ, ಈರೀತಿ ಸೂರ್ಯಗ್ರಹಣವೂ ಮತ್ತು ಚಂದ್ರಗ್ರಹಣವೂ ಸಹ ನಡೆಯುವುದೆಂದು ತಿಳಿಯುವವನಾಗು.

೩೯. ಮಾಂಸಮಯವಾದ ಕಣ್ಣುಗಳುಳ್ಳ ಅಜ್ಞಾನಿಗಳಾದ ಮನುಷ್ಯರು, ಪ್ರಪಂಚವನ್ನೇ ಮೋಹಗೊಳಿಸುವ ಈ ಸೂರ್ಯಚಂದ್ರಗ್ರಹಣಗಳನ್ನು ತಮ್ಮ ಕಣ್ಣಿನಿಂದ ನೋಡಲಾರರು. ಅಂದರೆ ಸೂಕ್ಷ್ಮಗ್ರಹಣವು ಚರ್ಮಚಕ್ಷುಸ್ಸುಗಳಿಗೆ ಸುಲಭವಾಗಿ ಗೋಚರಿಸಲಾರದು.

**ಪುಣ್ಯಂ ಮಹಾಪವಿತ್ರಂ ತು ಸ್ನಾನೇ ದಾನೇ ತಥಾ ಜಪೇ ।**
**ವಿದಿತ್ವಾ ಚಾಸ್ಯ ಮಾಹಾತ್ಮ್ಯಂ ಸರ್ವದೇವಸಮಾಗಮಂ ।**
**ಧ್ಯಾತ್ವಾ ಶ್ರುತ್ವಾ ಪಠಿತ್ವಾ ಚ ಸರ್ವಪಾಪೈಃ ಪ್ರಮುಚ್ಯತೇ ॥ ೪೦ ॥**

**ಇತಿ ಶ್ರೀ ಸಾಂಬಪುರಾಣೇ ರಾಹುಗ್ರಹಣವಿಚಾರೋ ನಾಮ**
**ತ್ರಯೋವಿಂಶತಿತಮೋಽಧ್ಯಾಯಃ.**

---

೪೦. ಸ್ನಾನ, ದಾನ, ಮತ್ತು ಜಪ ಇವುಗಳಿಂದ ಅತ್ಯಂತ ಪುಣ್ಯಕರವೂ ಮಹಾ ಪವಿತ್ರವೂ, ಆಗಿ ಸಕಲ ದೇವತೆಗಳ ಸಮಾಗಮರೂಪವಾದ ಸೂರ್ಯ ಚಂದ್ರಗ್ರಹಣಗಳ ಮಹಿಮೆಯನ್ನು ತಿಳಿದು, ಯಾರು ಇದನ್ನು ತಿಳಿಯುವರೋ ಕೇಳುವರೋ, ಅಥವ ತಾವೇ ಓದುವರೋ, ಅಂತಹವರು ಸಕಲ ಪಾಪಗಳಿಂದ ದೂರರಾಗುವರು. ಎಂದು ನಾರದರು ಸಾಂಬನಿಗೆ ಹೇಳಿದರು.

ಸಾಂಬಪುರಾಣದಲ್ಲಿ ರಾಹುಗ್ರಹಣದ ವಿಚಾರನಿರೂಪಣವೆಂಬ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಚತುರ್ವಿಂಶೋಽಧ್ಯಾಯಃ



॥ ವಸಿಷ್ಠ ಉವಾಚ ॥

ಏವಂ ಸೂರ್ಯಸ್ಯ ಮಾಹಾತ್ಮ್ಯಂ ವರ್ಣಿತಂ ಹರ್ಷವರ್ಧನಂ ।
ಪ್ರೀತಿತ್ವಮಾಪ್ತವಾನೇವ ತತಃ ಸಂಶ್ರುತ್ಯ ನಾರದಾತ್ ॥ ೧ ॥

ವಿನಯಾದುಪಸಂಗಮ್ಯ ದೇವಸ್ಯ ಪುರತಸ್ತದಾ ।
ನಿಪತ್ಯ ದೀನಯಾ ವಾಚಾ ಸಾಂಬಃ ಪಿತರಮಬ್ರವೀತ್ ॥ ೨ ॥

॥ ಸಾಂಬ ಉವಾಚ ॥

ಕಶ್ಮಲೇನಾಽಭಿಭೂತೋಽಸ್ಮಿ ಮಲೇನಾಂಗಾವಸೇವಿನಾ ।
ನೈದ್ಯೈರ್ನೌಷಧಿಭಿರ್ವಾಪಿ ನ ಶಾಂತಿರ್ವಿದ್ಯತೇ ಮಮ ॥ ೩ ॥

---

## ಇಪ್ಪತ್ತುನಾಲ್ಕನೆಯ ಅಧ್ಯಾಯ.

೧-೨. ಸಾಂಬನು, ಹಾಗೆ ನಾರದಮಹರ್ಷಿಯಿಂದ ಹೇಳಲ್ಪಟ್ಟ ಸಂತೋಷ ಜನಕವಾಗಿರುವ ಸೂರ್ಯದೇವನ ಮಹಿಮೆಯನ್ನು ಕೇಳಿ, ಆನಂದಪಟ್ಟು ವಿನಯ ಪೂರ್ವಕವಾಗಿ ತಂದೆಯಾದ ಕೃಷ್ಣದೇವನ ಸಮೀಪಕ್ಕೆ ಹೋಗಿ, ತಂದೆಗೆ ನಮಸ್ಕರಿಸಿ ಮೃದುವಾದ ಮಾತುಗಳಿಂದ ಶ್ರೀ ಕೃಷ್ಣನನ್ನು ಕುರಿತು ಮುಂದೆ ಹೇಳುವಂತೆ ಹೇಳಿದನೆಂದು ವಸಿಷ್ಠಮಹರ್ಷಿಗಳು ಬೃಹದ್ಬಲ ಮಹಾರಾಜರಿಗೆ ಹೇಳಿದರು.

೩-೪. ತಂದೆಯೇ, ನನ್ನ ಅವಯವಗಳೆಲ್ಲವೂ, ಕುಷ್ಠರೋಗ ರೂಪವಾದ ಕೊಳೆಯಿಂದ ಆವರಿಸಲ್ಪಟ್ಟು, ಶರೀರ ವಾದ್ಯಂತವೂ ಮಲಿನವಾಗಿರುವುದು. ಈ

ವನಂ ಯಾಸ್ಯಾಮಿ ಗೋವಿಂದ ಅನುಜ್ಞಾಂ ದಾತುಮರ್ಹಸಿ ।
ಶಿವೇನ ಪುಂಡರೀಕಾಕ್ಷ ಧ್ಯಾಯಸ್ವ ಪುರುಷೋತ್ತಮ ॥ ೪ ॥

ಅನುಜ್ಞಾತಃ ಸ ಕೃಷ್ಣೇನ ಸಿಂಧೋರುತ್ತರಕೂಲತಃ ।
ಜ್ಞಾತ್ವಾ ಸಂತಾರಯಾಮಾಸ ಚಂದ್ರಭಾಗಾಂ ಮಹಾನದೀಂ ॥ ೫ ॥

ತತೋ ಮಿತ್ರವನಂ ಗತ್ವಾ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಉಪವಾಸಕೃಶಃ ಸಾಂಬಃ ಶುಷ್ಕೋ ಧಮನಿ ಸಂತತಃ ॥ ೬ ॥

ಆರಾಧನಾರ್ಥೇ ಸೂರ್ಯಸ್ಯ ಗುಹ್ಯಂ ಸ್ತೋತ್ರಮಿದಂ ಜಗೌ ।
ಚತುರ್ಭಿಸ್ಸಂಮಿತಂ ವೇದೈಃ ಪುರಾಣಾಶಯುಬೃಂಹಿತಂ ॥ ೭ ॥

---

ಕಷ್ಟಲವನ್ನು ಯಾವ ವೈದ್ಯರೂ, ಯಾವ ಔಷದವೂ ನಿವಾರಣೆ ಮಾಡಲಾರವು ಈಗ ನನ್ನ ಮನಸ್ಸಿಗೆ ಈ ಕಷ್ಟಲವು ಹೋದಹೊರತೂ ಶಾಂತಿಯಿಲ್ಲ. ಆದುದರಿಂದ ಎಲೈ ಕಮಲನೇತ್ರನಾದ ಗೋವಿಂದನೇ, ನಾನು ಕಾಡಿಗೆ ಹೋಗಿ ಅಲ್ಲಿ ಈ ರೋಗ ನಿವಾರಣೆಗಾಗಿ ಸೂರ್ಯದೇವನನ್ನು ಧ್ಯಾನಮಾಡಬೇಕೆಂದು ಅಪೇಕ್ಷಿಸುತ್ತೇನೆ. ಎಲೈ ಪುರುಷೋತ್ತಮನೆ, ನೀನು ಆಲೋಚಿಸಿ ಒಳ್ಳೆಯ ಮನಸ್ಸಿನಿಂದ ನಾನು ಅರಣ್ಯಕ್ಕೆ ಹೋಗಲು ಅನುಜ್ಞೆ ಕೊಡಬೇಕೆಂದು ಸಾಂಬನು ಕೃಷ್ಣನನ್ನು ಪ್ರಾರ್ಥಿಸಿದನು.

೫. ಹೀಗೆ, ಪುತ್ರನಾದ ಸಾಂಬನು ಪ್ರಾರ್ಥಿಸಿದಮೇಲೆ, ಕೃಷ್ಣದೇವನು ಸಾಂಬನಿಗೆ ಅವನ ಕೋರಿಕೆಯಂತೆ ಅಪ್ಪಣೆಕೊಟ್ಟನು. ಸಾಂಬನು ತಂದೆಯ ಅಪ್ಪಣೆಪಡೆದು, ಸಿಂಧೂನದಿಯ ಉತ್ತರದಿಕ್ಕಿನಲ್ಲಿ ಹರಿಯುತ್ತಿರುವ ಚಂದ್ರಭಾಗಾ ಮಹಾನದಿಯನ್ನು ದಾಟಿ ಮುಂದುವರಿದನು.

೬-೭. ಅಲ್ಲಿಯೇ ದೊರೆತ ಮಿತ್ರವನಕ್ಕೆ ಹೋಗಿ ಮೂರುಲೋಕದಲ್ಲಿಯೂ ಪ್ರಸಿದ್ಧಿಹೊಂದಿರುವ ಆ ತೀರ್ಥಕ್ಷೇತ್ರದಲ್ಲಿ, ಉಪವಾಸ ವ್ರತಗಳನ್ನಾಚರಿಸುತ್ತಾ ಕೃಶನಾದ ಸಾಂಬನು, ಸೂರ್ಯದೇವನನ್ನು ಪೂಜಿಸುವುದಕ್ಕೋಸ್ಕರ ನಾಲ್ಕು ವೇದಗಳಲ್ಲಿಯೂ ಹೇಳಲ್ಪಟ್ಟಿರುವ ಮತ್ತು ಪುರಾಣಾರ್ಥಗಳಿಂದ ಕೂಡಿರುವ ರಹಸ್ಯವಾದ ಈ ಸ್ತೋತ್ರಗಳನ್ನು ಮುಂದೆ ಹೇಳುವಂತೆ ಪಠಿಸಿದನು.

ಯದೇತನ್ಮಂಡಲಂ ಶುಕ್ಲಂ ದಿವ್ಯಂ ಹ್ಯಜರಮವ್ಯಯಂ ।
ಯುಕ್ತಂ ಮನೋಜವೈರಶ್ವೈಃ ಹರಿತೈರ್ಬ್ರಹ್ಮವಾದಿಭಿಃ ॥ ೮ ॥

ಆದಿರೇವ ಹಿ ಭೂತಾನಾಂ ಆದಿತ್ಯ ಇತಿ ಸಂಜ್ಞಿತಃ ।
ತ್ರೈಲೋಕ್ಯಚಕ್ಷುರೇಷೋಽತ್ರ ಪರಮಾತ್ಮಾ ಪ್ರಜಾಪತಿಃ ॥ ೯ ॥

ಯ ಏಷ ಮಂಡಲೇ ಹ್ಯಸ್ಮಿನ್ ಪುರುಷೋ ದೀಪ್ಯತೇ ಮಹಾನ್ ।
ಏಷ ವಿಷ್ಣುರಚಿಂತ್ಯಾತ್ಮಾ ಬ್ರಹ್ಮಾ ಚೈವ ಪ್ರಜಾಪತಿಃ ॥ ೧೦ ॥

ರುದ್ರೋ ಮಹೇಂದ್ರೋ ವರುಣ ಆಕಾಶಃ ಪೃಥಿವೀ ಜಲಂ ।
ವಾಯುಃ ಶಶಾಂಕಃ ಪರ್ಜನ್ಯೋ ಧನಾಧ್ಯಕ್ಷಸ್ತಥೈವ ಚ ॥ ೧೧ ॥

---

೮-೯. "ದಿವ್ಯವಾದ ಸೂರ್ಯಮಂಡಲವು, ಶುಭ್ರವಾದ ವರ್ಣವುಳ್ಳದ್ದು ಮತ್ತೂ ವಿಕಾರವಿಲ್ಲದುದು, ಸರ್ವದಾ ನಾಶರಹಿತವೆನಿಸಿದೆ. ಈ ಸೂರ್ಯಮಂಡಲವು ಮನೋವೇಗವುಳ್ಳ ಬ್ರಹ್ಮಜ್ಞಾನಿಗಳಾದ ಹಸುರು ಬಣ್ಣದ ಏಳು ಕುದುರೆಗಳಿಂದ ಕೂಡಿದೆ.

ಸಕಲ ಭೂತಗಳಿಗೂ ಮೂಲಭೂತನಾದ ಈ ಸೂರ್ಯನು ಆದಿತ್ಯನೆನಿಸಿ ರುವನು. ಪರಮಾತ್ಮನೂ, ಪ್ರಜಾಪತಿಸ್ವರೂಪನೂ ಆದ ಸೂರ್ಯದೇವನಿಗೆ ಮೂರು ಲೋಕಗಳೇ ಕಣ್ಣುಗಳಾಗಿವೆ. ಎಲ್ಲ ಪ್ರಪಂಚವನ್ನೂ ತನ್ನ ಕಿರಣಗಳಿಂದ ಬೆಳಗಿಸಿ, ಜಗತ್ಕಾರ್ಯವನ್ನೆಲ್ಲಾ ನೋಡುತ್ತಿರುವನು.

೧೦-೧೧. ಈ ತೇಜೋರೂಪವಾದ ಸೂರ್ಯಮಂಡಲದಲ್ಲಿ ಪ್ರಕಾಶಿಸುತ್ತಿರುವ ಮಹಾಪುರುಷನೇ. ಅವ್ಯಕ್ತ ಸ್ವರೂಪನಾದ ವಿಷ್ಣುವು. ಪ್ರಜಾಸೃಷ್ಟಿಮಾಡುವ ಬ್ರಹ್ಮನ ಸ್ವರೂಪವುಳ್ಳವನು. ರುದ್ರ, ಮಹೇಂದ್ರ, ಆಕಾಶ, ಭೂಮಿ, ನೀರು, ವಾಯು, ಚಂದ್ರ, ಮೇಘ ಮತ್ತೂ ಕುಬೇರನೂ ಸಹ ಇವನೇ ಆಗಿರುವನು. ಇವರೆಲ್ಲರೂ ಸೂರ್ಯನ ಆಕಾರಗಳೇ ಆಗಿವೆ.

ಯ ಏಷ ಮಂಡಲೇ ಹ್ಯಸ್ಮಿನ್ ಅಗ್ನಿವರ್ಚಾಃ ಪ್ರಕಾಶತೇ ।
ಸಹಸ್ರರಶ್ಮಿಃಶೋಭತೋಽತ್ರ ದ್ವಾದಶಾತ್ಮಾ ದಿವಾಕರಃ ॥ ೧೨ ॥

ಯ ಏಷ ಮಂಡಲೇ ಹ್ಯಸ್ಮಿನ್ ಪುರುಷೋ ದೀಪ್ಯತೇ ಮಹಾನ್ ।
ಏಷ ಸಾಕ್ಷಾನ್ಮಹಾದೇವೋ ವೃತ್ತಕುಂಭನಿಭಃ ಶುಭಃ ॥ ೧೩ ॥

ಕಾಲೇ ಹ್ಯೇಷ ಮಹಾಯೋಗೀ ಸಂಹಾರೋತ್ಪತ್ತಿಲಕ್ಷಣಃ ।
ಯ ಏಷ ಮಂಡಲೇ ಹ್ಯಸ್ಮಿನ್ ತೇಜೋಭಿಃ ಪೂರಯನ್ಮಹೀಂ ॥ ೧೪ ॥

ಭ್ರಮತೇ ಹ್ಯವ್ಯವಚ್ಛಿನ್ನೋ ಧಾತ್ಯೈಷೋಽಮೃತಲಕ್ಷಣಃ ।
ನಾತಃ ಪರತರೋ ದೇವಸ್ತೇಜಸಾ ವಿದ್ಯತೇ ಕ್ವಚಿತ್ ॥ ೧೫ ॥

---

೧೨. ಈ ಮಂಡಲದಲ್ಲಿ ಅಗ್ನಿಯಂತೆ ಕಾಂತಿಯುಳ್ಳವನಾಗಿ ಪ್ರಕಾಶಮಾನವಾದ ಸೂರ್ಯಪುರುಷನು, ಸಹಸ್ರಕಿರಣಗಳುಳ್ಳವನಾಗಿಯೂ, ದ್ವಾದಶಾತ್ಮಕನಾಗಿಯೂ ಶೋಭಿಸುತ್ತಿರುವನು.

೧೩. ಈ ಸೂರ್ಯಮಂಡಲದಲ್ಲಿ ಪ್ರಕಾಶಿಸುತ್ತಿರುವ ಮಹಾಪುರುಷನು, ದುಂಡು ಮಡಿಕೆಯಂತೆ ವರ್ತುಲಾಕಾರವುಳ್ಳವನು. ಇವನೇ ಸಾಕ್ಷಾತ್ ಪರಮೇಶ್ವರ ಸ್ವರೂಪನು. ಈ ಮಹಾಯೋಗಿ ಸ್ವರೂಪನಾದ ಪುರುಷನು ಕಾಲವನ್ನು ಅನುಸರಿಸಿ ಸಂಹಾರ ಮತ್ತು ಸೃಷ್ಟಿಕಾರ್ಯಗಳನ್ನು ಮಾಡುವನು.

೧೪-೧೫. ಈ ಸೂರ್ಯಮಂಡಲದಲ್ಲಿ ತನ್ನ ತೇಜಸ್ಸುಗಳಿಂದ ಭೂಮಂಡಲವನ್ನು ಬೆಳಗಿಸುತ್ತಾ ಸಂಚರಿಸುತ್ತಿರುವ ಪರಮಾತ್ಮನು ಪರಿಪೂರ್ಣಸ್ವರೂಪನು. ಬ್ರಹ್ಮಸ್ವರೂಪನು. ಮತ್ತೂ ಅಮೃತಮಯನೂ ಆಗಿರುವನು. ಈ ಪರಮಾತ್ಮನಿಗಿಂತಲೂ ಶ್ರೇಷ್ಠವಾದ ತೇಜಸ್ವಿಯಾದ ದೇವರು ಮತ್ತಾರಿರುವರು ?

ಪುಷ್ಣಾತಿ ಸರ್ವಭೂತಾನಿ ಹ್ಯೇಷ ಏವ ಸ್ವಧಾಽಮೃತೈಃ ।
ಅಂತಃಸ್ಥೋ ಮ್ಲೇಚ್ಛಜಾತೀಯಾಂಸ್ತಿರ್ಯಗ್ಯೋನಿಗತಾನಪಿ ॥ ೧೬ ॥

ಕಾರುಣ್ಯಾತ್ಸರ್ವಭೂತಾನಿ ಪಾಸಿ ದೇವ ವಿಭಾವಸೋ ।
ಆಪತ್ಸು ಚ ವಿನೋಕ್ತಾರ್ಥಂ ತ್ವಂ ಭಕ್ತಾನಭಿರಕ್ಷಸೇ ॥ ೧೭ ॥

ಚಿತ್ರಕುಷ್ಠಾಂಗಬಧಿರಾನ್ ಖಂಜಾನ್ ಪಂಗೂನ್ ಜಡಾಂಸ್ತಥಾ ।
ಪ್ರಸನ್ನವತ್ಸಲೋ ದೇವ ನೀರುಜಃ ಕುರುಷೇ ನರಾನ್ ॥ ೧೮ ॥

ದದ್ರುಗಂಡನಿಮುಗ್ನಾಂಶ್ಚ ನಿರ್ವಾಣಾನ್ ಪುರುಷಾಂಸ್ತಥಾ ।
ಪ್ರತ್ಯಕ್ಷದರ್ಶೀ ತ್ವಂ ದೇವ ಸಮುದ್ಧರಸಿ ಲೀಲಯಾ ॥ ೧೯ ॥

---

೧೬-೧೭. ಸೂರ್ಯಪರಮಾತ್ಮನು ಸಕಲ ಭೂತಗಳನ್ನೂ ಸ್ವಧಾರೂಪವಾದ ಅಮೃತಗಳಿಂದ ಪುಷ್ಟಿಗೊಳಿಸುವನು. ಸಕಲ ಪ್ರಾಣಿಗಳ ಅಂತರಂಗದಲ್ಲಿಯೂ ವಾಸ ಮಾಡುತ್ತಾ ದಯೆಯಿಂದ, ಮ್ಲೇಚ್ಛಜಾತಿಯವರನ್ನೂ, ತಿರ್ಯಕ್ ಪ್ರಾಣಿಗಳನ್ನೂ ಮತ್ತೂ ಸಕಲ ಚರಾಚರಸ್ವರೂಪವಾದ ಭೂತಗಳನ್ನು ಸಹ ರಕ್ಷಿಸುವನು. ಸೂರ್ಯಪರಮಾತ್ಮನೆ, ನಿನ್ನಿಂದಲೇ ಅಲ್ಲವೇ ಈ ಜಗತ್ತು ರಕ್ಷಿತವಾಗಿದೆ! ದೇವ ದೇವನೇ, ಆದರ ನಿವಾರಣೆಗಾಗಿ ಭಕ್ತಿಯಿಂದ ನಿನ್ನನ್ನು ಪೂಜಿಸುತ್ತಿರುವ ನಿನ್ನ ಭಕ್ತರನ್ನು ದಯೆಯಿಂದ ಉದ್ಧಾರಮಾಡುತ್ತಿರುವೆಯಲ್ಲವೆ!

೧೮. ಶರಣಾಗತರಾದ ತನ್ನ ಭಕ್ತರಲ್ಲಿ ಪ್ರೀತಿಯುಳ್ಳ ಎಲೈ ಸೂರ್ಯದೇವನೆ, ಅನೇಕ ವಿಧವಾದ ಕುಷ್ಠರೋಗಗಳಿಂದ ನರಳುತ್ತಿರುವವರೂ, ಕಿವುಡರೂ, ಮೂಗರೂ ಕುಂಟರೂ ಮತ್ತು ಮೂಖರೂ ಸಹ ನಿನ್ನನ್ನು ಸೇವಿಸಿ ತಮ್ಮ ಎಲ್ಲಾ ರೋಗಗಳನ್ನೂ ಕಳೆದುಕೊಂಡು ಆರೋಗ್ಯವಾಗಿರುವರು.

೧೯. ಮೈಯೆಲ್ಲಾ ಒಡೆದು ಬಿರುಕುಗಳಿಂದ ಕೂಡಿ ತುಂಬಾ ಸಂಕಟಪಡುತ್ತಿರುವ ಜನಗಳನ್ನೂ ಎಲೈ ಸೂರ್ಯದೇವನೆ, ನೀನು ಉದ್ಧರಿಸಿ, ಅವರಿಗೆ ಪ್ರತ್ಯಕ್ಷವಾಗಿ, ಲೀಲೆಯಿಂದ ಅವರನ್ನು ರಕ್ಷಿಸುತ್ತಿರುವೆಯಲ್ಲವೆ!

ಕಾನೋ ಶಕ್ತಿಸ್ತವ ಸ್ತೋತುಂ ಮಾರ್ತೋಽಹಂ ರೋಗಪೀಡಿತಃ ।
ಸ್ತೂಯಸೇ ತ್ವಂ ಸದಾ ದೇವ ಬ್ರಹ್ಮವಿಷ್ಣುಶಿವಾದಿಭಿಃ ॥ ೨೦ ॥

ಮಹೇಂದ್ರಸಿದ್ಧಗಂಧರ್ವೈರಪ್ಸರೋಭಿಃ ಸಗುಹ್ಯಕೈಃ ।
ಸ್ತುತಿಭಿಃ ಕಿಂ ಪವಿತ್ರೈರ್ವಾ ತವ ದೇವ ಸಮೀರಿತೈಃ ॥ ೨೧ ॥

ಯಸ್ಯ ತೇ ಋಗ್ಯಜುಃ ಸಾಮ್ನಾಂ ತ್ರಿತಯಂ ಮಂಡಲೇ ಸ್ಥಿತಂ ।
ಧ್ಯಾನಿನಾಂ ತು ಪರಂ ಧ್ಯಾನಂ ಮೋಕ್ಷದ್ವಾರಂ ಚ ಮೋಕ್ಷಿಣಾಂ ॥ ೨೨ ॥

ಅನಂತಂ ತೇಜಸಾಂ ತೇಜೋ ಹ್ಯಚಿಂತ್ಯಾಽವ್ಯಕ್ತನಿರ್ಮಲಂ ।
ಯದಸ್ಯಾಪಾಹೃತಂ ಕಿಂಚಿತ್ ಸ್ತೋತ್ರೇಽಸ್ಮಿನ್ ಜಗತಃ ಪತೇ ॥ ೨೩ ॥

---

೨೦. ಎಲೈ ಸೂರ್ಯದೇವನೆ, ನಿನ್ನನ್ನು ಸ್ತೋತ್ರಮಾಡುವ ಸಾಮರ್ಥ್ಯವು ನನ್ನಲಿಲ್ಲ. ನಾನು ಕುಷ್ಠರೋಗದಿಂದ ನರಳುತ್ತಿರುವೆನು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಇವರೆಲ್ಲರೂ ನಿನ್ನನ್ನು ಯಾವಾಗಲೂ ಸ್ತೋತ್ರ ಮಾಡುತ್ತಿರುವರು. ಅಂತಹ ತ್ರಿಮೂರ್ತಿಗಳೇ ನಿನ್ನನ್ನು ಸ್ತೋತ್ರಮಾಡುತ್ತಿರುವರೆಂದು ಹೇಳಿದಮೇಲೆ ನನ್ನಂತಹ ಸಣ್ಣ ಮನುಷ್ಯನು ನಿನ್ನನ್ನು ಯಾವರೀತಿ ಸ್ತುತಿಸುವೆನು.

೨೧. ಸೂರ್ಯದೇವನೆ, ಮಹೇಂದ್ರರು, ಸಿದ್ಧರು. ಗಂಧರ್ವರು, ಅಪ್ಸರಸ್ತ್ರೀಯರು, ಮತ್ತು ಗುಹ್ಯಕರೂ ಸಹ ನಿನ್ನನ್ನು ಪವಿತ್ರವಾದ ಸ್ತೋತ್ರಗಳಿಂದ ಹೊಗಳುತ್ತಿರುವರು.

೨೨. ಎಲೈ ಸೂರ್ಯಪರಮಾತ್ಮನೆ, ನಿನ್ನ ಮಂಡಲದಲಿ. ಋಗ್ವೇದ, ಯಜುರ್ವೇದ, ಮತ್ತು ಸಾಮವೇದಾತ್ಮಕವಾದ ವೇದತ್ರಯಗಳೂ ನೆಲಸಿರುವುವು. ಈ ಸೂರ್ಯಮಂಡಲವು ಧ್ಯಾನಮಾಡುವವರಿಗೆ ಧ್ಯಾನ ಸ್ವರೂಪವೂ, ಮೋಕ್ಷಾಪೇಕ್ಷಿಗಳಿಗೆ ಮೋಕ್ಷದ ಬಾಗಿಲಂತೆಯೂ, ಆಗಿರುವುದು.

೨೩. ನಾಶರಹಿತನೂ, ಅತ್ಯಂತ ತೇಜಸ್ವಿಯೂ, ಯೋಚಿಸಲು ಸಾಧ್ಯವಾಗದ ಸ್ವರೂಪವುಳ್ಳವನೂ, ಇತರರಿಗೆ ಗೋಚರನಾಗದೇ ಪರಿಶುದ್ಧಸ್ವರೂಪನಾಗಿರುವವನೂ ಆದ ನಿನ್ನನ್ನು ಸ್ತೋತ್ರಮಾಡುವಾಗ ಎಷ್ಟೋ ನ್ಯೂನಾತಿರೇಕಗಳಿರಬಹುದು. ಎಲೈ ಜಗದೊಡೆಯನೆ, ಅದನ್ನೆಲ್ಲಾ ನೀನು ಕ್ಷಮಿಸಿ, "ಇದು ರೋಗದ ಬೇಸೆಯಿಂದ ಪೀಡಿತನಾದ ಭಕ್ತನೊಬ್ಬನು ತೋರಿಸಿರುವ ಭಕ್ತಿ" ಯೆಂದು ತಿಳಿದು ನನ್ನನ್ನು ಕ್ಷಮಿಸಬೇಕು, ಎಂದು ಸಾಂಬನು ಸೂರ್ಯನನ್ನು ಸ್ತೋತ್ರಮಾಡಿದನು.

ಆರ್ತಭಕ್ತಿಂ ಚ ವಿಜ್ಞಾಯ ತತ್ಸರ್ವಂ ಕ್ಷಂತುಮರ್ಹಸಿ ।
ತಮುವಾಚ ನರಃ ಪ್ರೀತಃ ಸೂರ್ಯೋ ಜಾಂಬವತೀಸುತಂ ।
ಪ್ರೀತೋಽಸ್ಮಿ ತಪಸಾ ವತ್ಸ ವರಂ ಬ್ರೂಹಿ ಯಮಿಚ್ಛಸಿ ॥ ೨೪ ॥

॥ ಸಾಂಬ ಉವಾಚ ॥

ಯದಿ ಪ್ರಸನ್ನೋ ಭಗವಾನ್ ಏಷ ಏವ ವರೋ ಮಮ ।
ಭಕ್ತಿರ್ಭವತು ಮೇ ನಿತ್ಯಂ ತ್ವಯಿ ದೇವೇ ಸನಾತನೇ ॥ ೨೫ ॥

॥ ಸೂರ್ಯ ಉವಾಚ ॥

ಭೂಯಸ್ತುಷ್ಟೋಽಸ್ಮಿ ಭದ್ರಂ ತೇ ವರಂ ವರಯ ಸುವ್ರತ ।
ಸ ದ್ವಿತೀಯಂ ವರಂ ವವ್ರೇ ತಂ ದೇವಂ ವರದಂ ಶುಭಂ ॥ ೨೬ ।

---

೨೪. ಅನಂತರ ಸೂರ್ಯದೇವನು ಸಾಂಬನ ಸ್ತೋತ್ರದಿಂದ ತುಷ್ಟನಾಗಿ ಜಾಂಬವತೀ ಪುತ್ರನಾದ ಸಾಂಬನನ್ನು ಕುರಿತು: "ವತ್ಸ ಸಾಂಬನೆ, ನಿನ್ನ ತಪಸ್ಸಿನಿಂದ ನಾನು ಪ್ರೀತನಾಗಿರುವೆ. ನಿನಗೆ ಬೇಕಾದ ವರವನ್ನು ಬೇಡು, ಕೊಡುವೆನು" ಎಂದು ಹೇಳಿದನು.

೨೫. ಸೂರ್ಯದೇವನು ಹೀಗೆ ಪ್ರೀತಿಯಿಂದ ಹೇಳಿದುದನ್ನು ಕೇಳಿ ಸಾಂಬನು, "ಎಲೈ ಭಗವಂತನಾದ ಸೂರ್ಯದೇವನೆ, ನೀನು ನನ್ನಲಿ ಪ್ರಸನ್ನನಾಗಿರುವುದಾದರೆ ಸದಾ ನನಗೆ ನಿನ್ನಲಿಯೇ ಭಕ್ತಿಯುಂಟಾಗುವಂತೆ ಅನುಗ್ರಹಿಸು. ಇದೇ ನನಗೆ ಇಷ್ಟವಾದ ವರವು" ಎಂದು ಕೇಳಿಕೊಂಡನು.

೨೬-೨೮. ಸಾಂಬನು ಹಾಗೆ ಕೇಳಿಕೊಳ್ಳಲು ಸೂರ್ಯದೇವನು ಪುನಃ ಸಾಂಬನನ್ನು ಕುರಿತು, ಮಂಗಳಪ್ರದನೆ, ನಿನ್ನಲಿ ಹೆಚ್ಚು ಸಂತೋಷದಿಂದಿರುವೆನು. ನಿನಗೆ ಮಂಗಳವಾಗಲಿ, ಬೇರೆ ವರವನ್ನು ಕೇಳು ಅದನ್ನು ಕೊಡುವೆನು ಎಂದು ಆಶ್ವಾಸನೆ ಕೊಡಲು, ಆಗ ಸಾಂಬನು ದೇವದೇವನಾದ ಸೂರ್ಯದೇವನನ್ನು ಕುರಿತು, ದೇವನೆ, ನಿನ್ನ ಅನುಗ್ರಹದಿಂದ ನನ್ನ ಶರೀರದಲ್ಲಿ ವ್ಯಾಪ್ತವಾಗಿರುವ ಈ ಕುಷ್ಠರೋಗರೂಪ ವ್ಯಾಧಿ ಕಶ್ಮಲವು ಹೊರಟುಹೋಗಲಿ ಎಂದು ಕೇಳಿಕೊಂಡನು. ಸೂರ್ಯದೇವನು

ಮಲಂ ಶರೀರಸ್ಥಮಿದಂ ತ್ವತ್ಪ್ರಸಾದಾತ್ಪ್ರಣಶ್ಯತು ।
ತಥಾಽಸ್ತ್ವಿತ್ಯುಕ್ತಮಾತ್ರೋಽಸೌ ಭಾಸ್ಕರೇಣ ಮಹಾತ್ಮನಾ ॥ ೨೭ ॥

ತಸ್ಮಾನ್ಮೋಚ ಮಲಂ ಸಾಂಬೋ ದೇಹಾತ್ ತ್ವಚಮಿವೋರಗಃ ।
ತತೋ ಲಬ್ಧವರಃ ಸಾಂಬೋ ರೂಪವಾಂಶ್ಚಾಽಭವತ್ಪುನಃ ॥ ೨೮ ॥

॥ ಸೂರ್ಯ ಉವಾಚ ॥

ಭೂಯಶ್ಚ ಶೃಣು ಮೇ ಸಾಂಬ ತುಷ್ಟೋಽಹಂ ಯದ್ಬ್ರವೀಮಿ ತೇ ।
ಅದ್ಯ ಪ್ರಭೃತಿ ತ್ವನ್ನಾಮ್ನಾ ಮಮ ಸ್ಥಾನಾನಿ ಸುವ್ರತ ॥ ೨೯ ॥
ಕ್ಷಿತೌ ಯೇ ಸ್ಥಾಪಯಿಷ್ಯಂತಿ ತೇಷಾಂ ಲೋಕಃ ಸನಾತನಃ ॥ ೩೦ ॥

ಸ್ಥಾಪಯಸ್ವ ಚ ಮಾಮಸ್ಮಿನ್ ಚಂದ್ರಭಾಗಾತಟೇ ಶುಭೇ ।
ತ್ವತ್ಸನಾಮ ಇದಂ ಚಾಽಪಿ ಪುರಂ ಸಾಂಬ ಭವಿಷ್ಯತಿ ॥ ೩೧ ॥

---

ಹಾಗೆಯೇ ಆಗಲಿ ಎಂದು ವರಕೊಡಲು ಆ ವರದ ಮಹಿಮೆಯಿಂದ ಸಾಂಬನು, ಸರ್ಪವು ಪೊರೆಯನ್ನು ಬಿಟ್ಟು ಶುದ್ಧವಾಗುವಂತೆ, ಕುಷ್ಠರೋಗದಿಂದ ಬಿಡುಗಡೆ ಹೊಂದಿ ಹಿಂದಿನಂತೆಯೇ ಸುಂದರವಾದ ಶರೀರವುಳ್ಳವನಾಗಿ ಎಂದಿನಂತೆಯೇ ಪ್ರಕಾಶಿಸಲಾರಂಭಿಸಿದನು.

೨೯-೩೦. ಸೂರ್ಯನು ಪುನಃ ಸಾಂಬನನ್ನು ಕುರಿತು, ಸಾಂಬನೆ, ನಿನ್ನ ಸ್ತೋತ್ರಗಳಿಂದ ತೃಪ್ತನಾಗಿರುವ ನಾನು ನಿನಗೆ ಇನ್ನೂ ಹೆಚ್ಚುವಿಷಯವನ್ನು ತಿಳಿಸುವೆನು. ಕೇಳು. ಇದು ಮೊದಲುಗೊಂಡು ನನ್ನಸ್ಥಾನಗಳೆಲ್ಲ ನಿನ್ನ ಹೆಸರಿನಿಂದ ಕೂಡಿದುದಾಗುವುವು. ಅಲ್ಲದೆ ಯಾರು ನನ್ನ ಸ್ಥಾನಗಳನ್ನು ನಿನ್ನ ಹೆಸರಿನಿಂದ ಭೂಮಿಯಲ್ಲಿ ಪ್ರತಿಷ್ಠೆಮಾಡುವರೋ ಅವರಿಗೆ ಶಾಶ್ವತವಾದ, ಲೋಕವು ಪ್ರಾಪ್ತ ವಾಗುವುದು.

೩೧-೩೨. ಸಾಂಬನೆ, ನೀನು ನನ್ನನ್ನು ಪರಿಶುದ್ಧವಾದ ಈ ಚಂದ್ರಭಾಗಾ ನದಿಯ ದಡದಲ್ಲಿ ಸ್ಥಾಪಿಸು. ಈ ಪಟ್ಟಣವೂ ಮತ್ತು ಸ್ಥಳವೂ ನಿನ್ನ ಹೆಸರಿನಿಂದಲೇ

ಕೀರ್ತಿಸ್ತವಾಕ್ಷಯಾ ಲೋಕೇ ಯಾವದ್ಭೂಮಿರ್ಭವಿಷ್ಯತಿ ।
ಭೂಯಶ್ಚ ತೇ ಪ್ರದಾಸ್ಯಾಮಿ ಪ್ರತ್ಯಹಂ ಸ್ವಪ್ನದರ್ಶನಂ ॥ ೩೨ ॥

ಏವಂ ದತ್ವಾ ವರಂ ತಸ್ಮೈ ವೃಷ್ಣಿಸಿಂಹಾಯ ಭಾಸ್ಕರಃ ।
ಪ್ರತ್ಯಕ್ಷದರ್ಶನಂ ದತ್ವಾ ತತ್ರೈವಾಂತರಧೀಯತ ॥ ೩೩ ॥

ಪಠೇದ್ದ್ವಿಜ ಇದಂ ಸ್ತೋತ್ರಂ ತ್ರಿಕಾಲಂ ಭಕ್ತಿಮಾನ್ನರಃ ।
ನಾರೀ ವಾ ದುಃಖಶೋಕಾರ್ತಾ ಮುಚ್ಯತೇ ಶೋಕಸಾಗರಾತ್ ॥ ೩೪ ॥

ಚಕ್ಷುಃಪೀಡಾ ಮನಃಪೀಡಾ ಗ್ರಹಪೀಡಾಭ್ಯ ಏವ ಚ ।
ಬಂಧನೈರ್ನಿಗಡೈರ್ಘೋರೈಃ ಕಾಷ್ಠಾಗಾರಗೃಹೇಷು ವಾ ॥ ೩೫ ॥

---

ಪ್ರಸಿದ್ಧಿಪಡೆಯಲಿ. ಅಲ್ಲದೆ ನಿನ್ನ ಕೀರ್ತಿಯು ನಾಶರಹಿತವಾಗಿ ಸೂರ್ಯಚಂದ್ರರಿರುವವರೆವಿಗೂ ಹರಡಿರಲಿ. ಇದಲ್ಲದೆ, ನಿನಗೆ ನಾನು ಪ್ರತಿನಿತ್ಯವೂ ಸ್ವಪ್ನದಲ್ಲಿ ಕಾಣಿಸಿಕೊಳ್ಳುವೆನು.

೩೩. ಹೀಗೆ ಭಾಸ್ಕರನು, ವೃಷ್ಣಿವಂಶ ಶ್ರೇಷ್ಠನಾದ ಸಾಂಬನಿಗೆ ವರವನ್ನು ಕೊಟ್ಟು ಅವನಿಗೆ ಪ್ರತ್ಯಕ್ಷದರ್ಶನವನ್ನು ಕರುಣಿಸಿ ಅಲ್ಲಿಯೇ ಅಂತರ್ಧಾನನಾದನು.

೩೪. ಬ್ರಾಹ್ಮಣನಾದವನು ಈ ಸ್ತೋತ್ರವನ್ನು ಭಕ್ತಿಯಿಂದ ಪ್ರಾತಃ, ಮಧ್ಯಾಹ್ನ, ಸಾಯಂ, ಈ ಮೂರು ಕಾಲಗಳಲ್ಲಿಯೂ ಪಾರಾಯಣ ಮಾಡಿದರೆ ಆತನ ಸಕಲ ದುಃಖಗಳೂ ನಿವಾರಣೆಯಾಗಿ ಕೊನೆಗೆ ಮೋಕ್ಷಹೊಂದುವನು. ಶೋಕ ಪೀಡಿತಳಾದ ಸ್ತ್ರೀಯೂ ಸಹ ಭಕ್ತಿಯಿಂದ ಓದಿದರೆ, ಅವಳೂ ಎಲ್ಲಾ ಶೋಕಗಳನ್ನೂ ಕಳೆದುಕೊಂಡು ಸುಖಿಯಾಗುವಳು.

೩೫-೩೬. ನೇತ್ರ ಪೀಡೆಗಳೂ ಮನೋವ್ಯಥೆಗಳೂ, ಗ್ರಹಶಂಕೆ ಮೊದಲಾದವುಗಳೆಲ್ಲ ಸೂರ್ಯಸ್ತೋತ್ರದಿಂದ ನಾಶವಾಗುವುವು.

ಅಲ್ಲದೆ ಕಠಿನವಾದ ಸಂಕೋಲೆಗಳಿಂದ ಬಂಧಿತನಾಗಿದ್ದರೂ, ಭಯಂಕರವಾದ ಕಟ್ಟಿಗೆಮನೆಯಲ್ಲಿ ವಾಸಿಸುತ್ತಿದ್ದರೂ, ಸಹ ಸೂರ್ಯದೇವನನ್ನು ಸ್ತೋತ್ರಮಾಡಿದ

ಅಧಸ್ತಾದಂತರಿಕ್ಷೇ ವಾ ಕ್ಷಮತೇ ಭಕ್ತವತ್ಸಲಃ ।
ತ್ರಿಸಪ್ತಶತಮಾವರ್ತಹೋಮಸ್ತ್ವಾಸಪ್ತರಾತ್ರಿಕಂ ॥ ೩೬ ॥
ರಾಜ್ಯಕಾಮೋ ಲಭೇದ್ರಾಜ್ಯಂ ಧನಕಾಮೋ ಲಭೇದ್ಧನಂ ।
ರೋಗಾರ್ತೋ ಮುಚ್ಯತೇ ರೋಗಾನ್ ಯಥಾ ಸಾಂಬಸ್ತಥೈವ ಸಃ ॥೩೭॥

ಇತಿ ಶ್ರೀ ಸಾಂಬಪುರಾಣೇ ರೋಗಾಽಪನಯನೋ ನಾಮ
ಚತುರ್ವಿಂಶತಿತಮೋಽಧ್ಯಾಯಃ

---

ಮನುಷ್ಯನು ಸೂರ್ಯನಿಂದ ಕ್ಷಮಿಸಲ್ಪಟ್ಟು ಸಕಲ ದುಃಖಗಳಿಂದಲೂ ಮುಕ್ತನಾಗುವನು.

ಯಾವನು ಏಳುರಾತ್ರಿಗಳು ಅವಿಚ್ಛಿನ್ನವಾಗಿ ದಿವಸಕ್ಕೆ ಮುನ್ನೂರುಸಲದಂತೆ ಸೂರ್ಯಸ್ತೋತ್ರವನ್ನು ಪಾರಾಯಣಮಾಡಿ ಹೋಮಮಾಡುವನೋ, ಅಂತಹ ಪುರುಷನು ರಾಜ್ಯವನ್ನಪೇಕ್ಷಿಸಿದರೆ ಅವನಿಗೆ ರಾಜ್ಯಪ್ರಾಪ್ತಿಯಾಗುವುದು. ದ್ರವ್ಯಾಪೇಕ್ಷಿಯಾದರೆ ಧನವನ್ನು ಪಡೆಯುವನು. ರೋಗದಿಂದಪೀಡಿತನಾಗಿದ್ದರೆ ಅದರಿಂದ ಬಿಡಲ್ಪಟ್ಟು ಸಾಂಬನಂತೆ ಆರೋಗ್ಯ ಪಡೆಯುವನು.

ಸಾಂಬಪುರಾಣದಲ್ಲಿ ಸಾಂಬನ ರೋಗನಿವೃತ್ತಿ ನಿರೂಪಣವೆಂಬ
ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚವಿಂಶತಿತಮೋಧ್ಯಾಯಃ

॥ ವಸಿಷ್ಠ ಉವಾಚ ॥

ಸ್ತುವಂಸ್ತತ್ರಗತಃ ಸಾಂಬಃ ಕೃಶೋಧಮನಿ ಸಂತತಃ ।
ರಾಜನ್ ನಾಮಸಹಸ್ರೇಣ ಸಹಸ್ರಾಂಶುಂ ದಿವಾಕರಂ ॥ ೧ ॥

ಖಿದ್ಯಮಾನಂ ತು ತಂ ದೃಷ್ಟ್ವಾ ಸೂರ್ಯಃ ಕೃಷ್ಣಾತ್ಮಜಂ ತಥಾ ।
ಸ್ವಪ್ನೇ ತು ದರ್ಶನಂ ದತ್ವಾ ಪುನರ್ವಚನಮಬ್ರವೀತ್ ॥ ೨ ॥

---

## ಇಪ್ಪತ್ತೈದನೆಯ ಅಧ್ಯಾಯ.

೧-೨. ಎಲೈ ಬೃಹದ್ಬಲರಾಜನೆ, ಸಾಂಬನು ಚಂದ್ರಸರಿತ್ತೀರದಲ್ಲಿ ಕೃಶೋಧಮ ಎಂಬ ಸ್ಥಳದಲ್ಲಿ ಸಹಸ್ರಕಿರಣನಾದ ಸೂರ್ಯನನ್ನು ಸಹಸ್ರನಾಮಗಳಿಂದ ಸ್ತೋತ್ರ ಮಾಡುತ್ತಾ, ಶರೀರ ಶ್ರಮದಿಂದ ಸೂರ್ಯನನ್ನು ಆರಾಧಿಸುತ್ತಿದ್ದನು. ಈ ರೀತಿ ಕೃಶಾಂಗನಾಗಿರುವ ಕೃಷ್ಣನ ಮಗನಾದ ಸಾಂಬನನ್ನು ನೋಡಿ, ಸೂರ್ಯನು ಸಾಂಬನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಪುನಃ ಹೀಗೆ ಹೇಳಿದನು.

೩-೪. "ಎಲೈ ಜಾಂಬವತೀ ಕುಮಾರನೂ, ಮಹಾಬಾಹುಶಾಲಿಯೂ ಆದ ಸಾಂಬನೆ, ಕೇಳು. ನಿನ್ನ ಸಹಸ್ರನಾಮಪಠನವು ಅತ್ಯಂತ ಶುಭಕರವಾಗಿರುವುದು. ಅದನ್ನೂ ಈಗ ನಿಲ್ಲಿಸು. ಅದರಲ್ಲಿ ಈಗ ನಾನು ಯಾವ ನಾಮಗಳು ಅತ್ಯಂತ

## ॥ ಸೂರ್ಯ ಉವಾಚ ॥

ಸಾಂಬ ಸಾಂಬ ಮಹಾಬಾಹೋ ಶೃಣು ಜಾಂಬವತೀಸುತ ।
ಅಲಂ ನಾಮಸಹಸ್ರೇಣ ಪಠಂಸ್ತ್ವೇವಂ ಸ್ತವಂ ಶುಭಂ ॥ ೩ ॥

ಯಾನಿ ನಾಮಾನಿ ಗುಹ್ಯಾನಿ ಪವಿತ್ರಾಣಿ ಶುಭಾನಿ ಚ ।
ತಾನಿ ತೇ ಕೀರ್ತಯಿಷ್ಯಾಮಿ ಶ್ರುತ್ವಾ ತ್ವಮವಧಾರಯ ॥ ೪ ॥

ಓಂ ವಿಕರ್ತನೋ ವಿವಸ್ವಾಂಶ್ಚ ಮಾರ್ತಂಡೋ ಭಾಸ್ಕರೋ ರವಿಃ ।
ಲೋಕಪ್ರಕಾಶಕಃ ಶ್ರೀಮಾನ್ ಲೋಕಚಕ್ಷುರ್ಗ್ರಹೇಶ್ವರಃ ॥ ೫ ॥

ಲೋಕಸಾಕ್ಷೀ ತ್ರಿಲೋಕೇಶಃ ಕರ್ತಾ ಹರ್ತಾ ತಮಿಸ್ರಹಾ ।
ತಪನಸ್ತಾಪನಶ್ಚೈವ ಶುಚಿಃ ಸಪ್ತಾಶ್ವವಾಹನಃ ॥ ೬ ॥

---

ರಹಸ್ಯಗಳಾಗಿ, ಪವಿತ್ರವೂ ಮತ್ತೂ ಮಂಗಳಕರವೂ ಆಗಿರುವವೋ ಅಂತಹ ಹೆಸರುಗಳನ್ನು ಮಾತ್ರ ನಿನಗೆ ತಿಳಿಸುವೆನು. ಇದನ್ನು ಕೇಳಿ ಸರಿಯಾಗಿ ಪಠಿಸು. ನಿನಗೆ ಮಂಗಳವಾಗುವುದು. ಎಂದು ಸೂರ್ಯನು ಅಭಯಕೊಟ್ಟನು.

| | | | |
|---|---|---|---|
| 1 | ಓಂ, ವಿಕರ್ತನಾಯನಮಃ | 12 | ಓಂ, ಕರ್ತ್ರೇನಮಃ |
| 2 | ಓಂ, ವಿವಸ್ವತೇನಮಃ | 13 | ಓಂ, ಹರ್ತ್ರೇ ನಮಃ |
| 3 | ಓಂ, ಮಾರ್ತಂಡಾಯನಮಃ | 14 | ಓಂ, ತಮಿಸ್ರಘ್ನೇ ನಮಃ |
| 4 | ಓಂ, ಭಾಸ್ಕರಾಯನಮಃ | 15 | ಓಂ, ತಪನಾಯ ನಮಃ |
| 5 | ಓಂ, ರವಯೇ ನಮಃ | 16 | ಓಂ, ತಾಪನಾಯ ನಮಃ |
| 6 | ಓಂ, ಲೋಕಪ್ರಕಾಶಕಾಯನಮಃ | 17 | ಓಂ, ಶುಚಯೇ ನಮಃ |
| 7 | ಓಂ, ಶ್ರೀಮತೇ ನಮಃ | 18 | ಓಂ, ಸಪ್ತಾಶ್ವವಾಹನಾಯ ನಮಃ |
| 8 | ಓಂ, ಲೋಕಚಕ್ಷುಷೇ ನಮಃ | 19 | ಓಂ, ಗಭಸ್ತಿಹಸ್ತಾಯ ನಮಃ |
| 9 | ಓಂ, ಗ್ರಹೇಶ್ವರಾಯನಮಃ | 20 | ಓಂ, ಬ್ರಹ್ಮಣೇ ನಮಃ |

ಗಭಸ್ತಿಹಸ್ತೋ ಬ್ರಹ್ಮಾ ಚ ಸರ್ವದೇವನಮಸ್ಕೃತಃ ।
ಏಕವಿಂಶತಿರಿತ್ಯೇಷಃ ಸ್ತವ ಇಷ್ಟಃ ಸದಾ ಮಮ ॥ ೭ ॥

ಶರೀರಾರೋಗ್ಯದಶ್ಚೈವ ಧನವೃದ್ಧಿರ್ಯಶಸ್ಕರಃ ।
ಸ್ತವರಾಜ ಇತಿ ಖ್ಯಾತಃ ತ್ರಿಷು ಲೋಕೇಷು ವಿಶ್ರುತಃ ॥ ೮ ॥

ಯ ಏತೇನ ಮಹಾಬಾಹೋ ದ್ವೇ ಸಂಧ್ಯೇಽಸ್ತಮನೋದಯೇ ।
ಸ್ತೌತಿ ಮಾಂ ಪ್ರಣತೋ ಭೂತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೯ ॥

ಕಾಯಿಕಂ ವಾಚಿಕಂ ಚಾಽಪಿ ಮಾನಸಂ ಯಚ್ಚ ದುಷ್ಕೃತಂ ।
ತತ್ಸರ್ವಮೇಕಜಾಪ್ಯೇನ ಪ್ರಣಶ್ಯತಿ ಮಮಾಗ್ರತಃ ॥ ೧೦ ॥

ಏಷ ಜಾಪ್ಯಶ್ಚ ಹೋಮಶ್ಚ ಸಂಧ್ಯೋಪಾಸನಮೇವ ಚ ।
ಬಲಿಮಂತ್ರೋಽರ್ಘಮಂತ್ರಶ್ಚ ಧೂಪಮಂತ್ರಸ್ತಥೈವ ಚ ॥ ೧೧ ॥

---

10 ಓಂ, ಲೋಕಸಾಕ್ಷಿಣೇ ನಮಃ
11 ಓಂ, ತ್ರಿಲೋಕೇಶಾಯ ನಮಃ
21 ಓಂ, ಸರ್ವದೇವ ನಮಸ್ಕೃತಾಯ ನಮಃ

ಎಂಬ ಈ ಇಪ್ಪತ್ತೊಂದು ನಾಮಗಳು ನನಗೆ ಯಾವಾಗಲೂ ಇಷ್ಟವಾದವುಗಳು.

೮-೯. ಸಾಂಬನೇ ಈ ಸ್ತೋತ್ರವು, ಸ್ತೋತ್ರರಾಜನೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಹೊಂದಿದೆ. ಇದರ ಪಾರಾಯಣದಿಂದ, ದೇಹಾರೋಗ್ಯವೂ, ದ್ರವ್ಯವೃದ್ಧಿಯೂ, ಕೀರ್ತಿಪ್ರಾಪ್ತಿಯೂ ಸಹ ಉಂಟಾಗುವುವು.

ಯಾರು ಈ ಸ್ತೋತ್ರದಿಂದ ನನ್ನನ್ನು ಅಸ್ತಮಯ ಮತ್ತು ಉದಯಕಾಲ ಈ ಎರಡು ಸಂಧ್ಯಾಸಮಯದಲ್ಲಿಯೂ ಧ್ಯಾನಿಸಿ, ನಮಸ್ಕರಿಸಿ ಭಕ್ತಿಯಿಂದ ಪೂಜಿಸುವರೊ, ಅವರು ಸಕಲ ಪಾಪಗಳಿಂದಲೂ ಬಿಡಲ್ಪಟ್ಟು ಕೋರಿಕೆಗಳನ್ನೆಲ್ಲಾ ಪಡೆಯುವರು.

೧೦. ಈ ಸ್ತೋತ್ರವನ್ನು ಒಂದುಬಾರಿ ಜಪಿಸಿದರೂ, ದೇಹಸಂಬಂಧವಾದ, ಮಾತಿನಿಂದ ಹುಟ್ಟಿದ, ಮನಸ್ಸಿನಿಂದ ಒದಗುವ ಈ ಮೂರು ಪಾಪಗಳೂ ನಾಶವಾಗುವುವು.

೧೧-೧೨. ಈ ಮಹಾಸ್ತೋತ್ರವೇ ಜಪಿಸಲು ಯೋಗ್ಯವಾದುದು. ಈ ಮಂತ್ರದಿಂದಲೇ ಹೋಮಮಾಡಬೇಕು. ಸಂಧ್ಯೋಪಾಸನೆ (ಸಂಧ್ಯಾವಂದನೆ, ಮತ್ತು ದೇವ

**ಅನ್ನಪ್ರದಾನೇ ಸ್ನಾನೇ ಚ ಪ್ರಣಿಪಾತೇ ಪ್ರದಕ್ಷಿಣೇ ।**
**ಪೂಜಿತೋಽಯಂ ಮಹಾಮಂತ್ರಃ ಸರ್ವವ್ಯಾಧಿಹರಃ ಶುಭಃ ॥ ೧೨ ॥**

**ಏವಮುಕ್ತ್ವಾ ತು ಭಗವಾನ್ ಭಾಸ್ಕರೋ ಜಗದೀಶ್ವರಃ ।**
**ಆಮಂತ್ರ್ಯ ಕೃಷ್ಣತನಯಂ ತತ್ರೈವಾಂತರಧೀಯತ ॥ ೧೩ ॥**

**ಸಾಂಬೋಽಪಿ ಸ್ತವರಾಜೇನ ಸ್ತುತ್ವಾ ಸಪ್ತಾಶ್ವವಾಹನಂ ।**
**ಪೂತಾತ್ಮಾ ನೀರುಜಃ ಶ್ರೀಮಾನ್ ತಸ್ಮಾದ್ರೋಗಾದ್ವಿಮುಕ್ತವಾನ್॥ ೧೪ ॥**

**ಇತಿ ಶ್ರೀ ಸಾಂಬಪುರಾಣೇ ರೋಗಾಪನಯನೇ ಶ್ರೀ ಸೂರ್ಯವಕ್ತ್ರ ವಿನಿಃಸೃತಸ್ತವರಾಜವರ್ಣನಂ ನಾಮ ಪಂಚವಿಂಶತಿತಮೋಽಧ್ಯಾಯಃ.**

---

ತೋಪಾಸನೆ) ಇವುಗಳೂ ಈ ಮಂತ್ರದಿಂದಲೇ ನಡೆಸಲ್ಪಡಬೇಕು. ಬಲಿಪ್ರದಾನ ಮಂತ್ರವು (ನೈವೇದ್ಯಮಾಡುವ ಮಂತ್ರವು) ಅರ್ಘ್ಯಕೊಡುವ ಮಂತ್ರವೂ, ಧೂಪ ಹಾಕುವ ಮಂತ್ರವೂ, ಹಾಗೆಯೇ, ಅನ್ನದಾನ ಮಾಡುವಾಗಲೂ ಮತ್ತೂ ಪ್ರದಕ್ಷಿಣೆ ಮಾಡುವಾಗಲೂ ಸಹ ಈ ಮಂತ್ರದಿಂದಲೇ ನನ್ನನ್ನು ತೃಪ್ತಿಪಡಿಸಬೇಕು. ಈ ಮಹಾಮಂತ್ರವು ಎಲ್ಲ ರೋಗಗಳನ್ನೂ ನಿರ್ಮೂಲಮಾಡುವುದು.

೧೩. ಭಗವಂತನೂ ಜಗಮೊಡೆಯನೂ ಆದ ಸೂರ್ಯದೇವನು ಈ ರೀತಿ ಕೃಷ್ಣನ ಮಗನಾದ ಸಾಂಬನಿಗೆ ಹೇಳಿ, ಆ ಇಪ್ಪತ್ತೊಂದು ನಾಮಗಳುಳ್ಳ ಸ್ತೋತ್ರರಾಜವನ್ನು ಉಪದೇಶಿಸಿ ಅಲ್ಲಿಯೇ ಅಂತರ್ಧಾನನಾದನು.

೧೪. ಅದೇ ರೀತಿ ಜಾಂಬವತೀ ಕುಮಾರನಾದ ಸಾಂಬನು ಸೂರ್ಯದೇವನನ್ನು ಆ ಸ್ತವರಾಜ ಮಂತ್ರದಿಂದ ಸ್ತೋತ್ರಮಾಡಿ, ಸಪ್ತಾಶ್ವ ರಥದಲ್ಲಿ ಕುಳಿತು ಸಂಚರಿಸುವ ಆ ಸೂರ್ಯದೇವನ ಅನುಗ್ರಹದಿಂದ ಕುಷ್ಠರೋಗವನ್ನು ಕಳೆದುಕೊಂಡು ಪರಿಶುದ್ಧವಾದ ಅಂತಃಕರಣವುಳ್ಳನಾಗಿ, ದಿವ್ಯಕಾಂತಿಯಿಂದ ಪ್ರಕಾಶಿಸಿದನು.

ಇಲ್ಲಿಗೆ ಸಾಂಬಪುರಾಣದಲ್ಲಿ, ಸಾಂಬನ ರೋಗಾಪನಯನ ಪ್ರಕರಣದ ಸೂರ್ಯದೇವನ ಮುಖದಿಂದ ಉಪದೇಶಿಸಲ್ಪಟ್ಟ ಸ್ತೋತ್ರರಾಜನಿರೂಪಣವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷಡ್ವಿಂಶತಿತಮೋಽಧ್ಯಾಯಃ

ಅಥ ಲಬ್ಧವರಃ ಸಾಂಬಃ ಪ್ರಾಪ್ತಂ ರೂಪಂ ಪುರಾತನಂ ।
ಮನ್ಯಮಾನಸ್ತದಾಶ್ಚರ್ಯಂ ಪ್ರಹೃಷ್ಟೇನಾಂತರಾತ್ಮನಾ ॥ ೧ ॥

ಪೂರ್ವಾಭ್ಯಾಸೇನ ತೇನೈವ ಸಾರ್ಧಮನ್ಯೈಸ್ತಪಸ್ವಿಭಿಃ ।
ಸ್ನಾನಾರ್ಥಂ ನಾತಿದೂರಸ್ಥಾಂ ಚಂದ್ರಭಾಗಾನದೀಂ ಯಯೌ ॥ ೨ ॥

ಸ ಸ್ನಾತಃ ಸಹಸೈವಾಥ ಪಶ್ಯತಿ ಸ್ಮ ಪ್ರಭಾವತೀಂ ।
ಉಹ್ಯಮಾನಾಂ ಜಲೌಘೇನ ಪ್ರತಿಮಾಮುನ್ಮುಖೀಂ ರವೇಃ ॥ ೩ ॥

---

ಇಪ್ಪತ್ತಾರನೆಯ ಅಧ್ಯಾಯ.

೧-೨. ಹಾಗೆ ಸಾಂಬನು ಸೂರ್ಯದೇವನಿಂದ ವರವನ್ನು ಪಡೆದು ತನ್ನ ಹಿಂದಿನ ರೂಪವನ್ನು ಹೊಂದಿ, ಆಗ ಬಹಳ ಆಶ್ಚರ್ಯಗೊಂಡವನಾಗಿ ಸಂತೋಷ ದಿಂದ ತನ್ನ ಹಿಂದಿನ ಸ್ನೇಹಿತರಾದ ತಪಸ್ವಿಗಳೊಡನೆ ಒಂದುಸಾರಿ ಸ್ನಾನಮಾಡುವು ದಕ್ಕೋಸ್ಕರ ಸಮೀಪದಲ್ಲಿರುವ ಚಂದ್ರಭಾಗಾನದಿಗೆ ಬಂದನು.

೩-೪. ಅಲ್ಲಿ ತನ್ನ ಸ್ನೇಹಿತರೊಡನೆ ಜಾಗ್ರತೆ ಸ್ನಾನಮಾಡಿ ಹಾಗೆಯೇ ಸೂರ್ಯನನ್ನು ಧ್ಯಾನಿಸುತ್ತಿರಲು, ಆ ಚಂದ್ರಭಾಗಾನದಿಯ ಪ್ರವಾಹದಲ್ಲಿ ಕಾಂತಿ ಯುಕ್ತವಾದ ಸೂರ್ಯನ ಪ್ರತಿಮೆಯೊಂದು ಮೇಲ್ಮುಖವಾಗಿ ತೇಲಿಬರುತ್ತಲಿದ್ದಿತು.

ಸತಾಮುತ್ತೀರ್ಯ ಸಲಿಲಾತ್ ಆನಯಿತ್ವಾ ಸ್ವಮಾಶ್ರಮಂ ।
ತಸ್ಮಿನ್ ಮಿತ್ರವನೋದ್ದೇಶೇ ಸ್ಥಾಪಯಿತ್ವಾ ವಿಧಾನತಃ ॥ ೪ ॥

ತತಸ್ತಾಮೇವ ಪಪ್ರಚ್ಛ ಪ್ರಣಮ್ಯ ಪ್ರತಿಮಾಂ ರವೇಃ ।
ಕೇನೇಽಯಂ ನಿರ್ಮಿತಾ ನಾಥ ಭವತೋ ಹ್ಯಾಕೃತಿಃ ಶುಭಾ ॥ ೫ ॥

ಪ್ರತಿಮಾ ತಮುವಾಚಾಽಥ ಶೃಣು ಸಾಂಬ ಯತಸ್ತ್ವಿಯಂ ।
ನಿರ್ಮಿತಾ ಯೇನ ಚಾಸ್ಯೇಷಾ ಪುರುಷೇಣ ಮದಾಕೃತಿಃ ॥ ೬ ॥

ಮಮಾತಿತೇಜಸಾಽಽವಿಷ್ಟಂ ರೂಪಮಾಸೀತ್ ಪುರಾತನಂ ।
ಅಸಹ್ಯಂ ಸರ್ವಭೂತಾನಾಂ ತತೋಽಹಂ ಪ್ರಾರ್ಥಿತಃ ಸುರೈಃ ॥ ೭ ॥

---

ಅದನ್ನು ನೋಡಿ ಆಶ್ಚರ್ಯಗೊಂಡು ಆ ಸಾಂಬನು ಹಾಗೆ ಬರುತ್ತಲಿರುವ ಸೂರ್ಯ ಪ್ರತಿಮೆಯನ್ನು ತನ್ನ ಆಶ್ರಮಕ್ಕೆ ತೆಗೆದುಕೊಂಡುಬಂದು, ಆ ಮಿತ್ರವನ ಕ್ಷೇತ್ರದಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠೆ ಮಾಡಿಸಿದನು.

೫. ಹಾಗೆ ಪ್ರತಿಷ್ಠೆಯಾದಮೇಲೆ ಸಾಂಬನು ಆ ಸೂರ್ಯಪ್ರತಿಮೆಯನ್ನು ನಮಸ್ಕರಿಸಿ, ಅದನ್ನು ಕುರಿತು "ಸ್ವಾಮಿಯೇ ! ದೇವದೇವನೆ, ಮಂಗಳಸ್ವರೂಪನಾದ ಈ ನಿನ್ನ ಆಕೃತಿಯು ಯಾರಿಂದ ನಿರ್ಮಿಸಲ್ಪಟ್ಟಿತು" ಎಂದು ಬೇಡಿಕೊಂಡನು.

೬. ಆಗ ಆ ಪ್ರತಿಮೆಯು ಸಾಂಬನನ್ನು ಕುರಿತು "ಭಕ್ತನೇ, ನನ್ನ ಆಕೃತಿಯ ನಿರ್ಮಾಣವನ್ನು ತಿಳಿಸುವೆನು ಕೇಳು" ಎಂದು ಹೀಗೆ ವಿವರಿಸಿತು.

೭-೧೧. ಎಲೈ ಸಾಂಬನೆ! ಹಿಂದೆ ನನ್ನ ರೂಪವು ಬಹಳ ತೇಜಸ್ಸಿನಿಂದ ಕೂಡಿದ್ದಿತು. ಆ ತೇಜೋಮಯವಾದ ರೂಪವನ್ನು ಸಹಿಸಲಾರದೆ ಸಕಲ ಭೂತಗಳೂ ಮತ್ತು ದೇವತೆಗಳೂ, "ಎಲೈ ದೇವದೇವನೆ ! ನಿನ್ನ ರೂಪವು ಸಕಲ ಪ್ರಾಣಿಗಳಿಗೂ ಸಹಿಸುವಂತೆ ಆಗಬೇಕೆಂದು" ನನ್ನನ್ನು ಪ್ರಾರ್ಥಿಸಿದರು. ನಾನು ಅದಕ್ಕೊಪ್ಪಿ ಆಗಲೆಂದು ದೇವತೆಗಳಿಗೆ ತಿಳಿಸಿ ಮಹಾ ತಪಸ್ವಿಯಾದ ವಿಶ್ವಕರ್ಮನನ್ನು ಕರೆಯಿಸಿ ನನ್ನ ರೂಪವನ್ನು ಬದಲಾಯಿಸುವಂತೆ ಅವನಿಗೆ ಅಪ್ಪಣೆಮಾಡಿದೆನು

ಸಹ್ಯಂ ಭವತು ತೇ ರೂಪಂ ಸರ್ವಪ್ರಾಣಭೃತಾಮಿಹ ।
ತತೋ ಮಯಾ ಸಮಾದಿಷ್ಟೋ ವಿಶ್ವಕರ್ಮಾ ಮಹಾತಪಾಃ ॥ ೮ ॥

ತೇಜಸಃ ಶಾತನಂ ಕುರ್ವನ್ ರೂಪಂ ನಿರ್ವರ್ತಯಸ್ವ ಮೇ ।
ತತಸ್ತು ಮತ್ಸಮಾದೇಶಾತ್ ತೇನೈವ ನಿಪುಣಂ ತದಾ ॥ ೯ ॥

ಶಾಕದ್ವೀಪೇ ಭ್ರಮಿಂ ಕೃತ್ವಾ ರೂಪಂ ನಿರ್ವರ್ತಿತಂ ಮಯಾ ।
ಪ್ರೀತ್ಯಾ ತೇ ಸಾಂಪ್ರತಂ ಚೈವ ಸಮಯಾಕಾರಿತಂ ಪುನಃ ॥ ೧೦ ॥

ತೇನೇಯಂ ಕಲ್ಪವೃಕ್ಷಾತ್ತು ನಿರ್ಮಿತಾ ಪ್ರತಿಮಾ ಮಮ ।
ಕೃತ್ವಾ ಹಿಮವತಃ ಪೃಷ್ಠೇ ಪುಣ್ಯಸಿದ್ಧನಿಷೇವಿತೇ ॥ ೧೧ ॥

ತ್ವದರ್ಥಂ ಚಂದ್ರಭಾಗಾಯಾಂ ತತಸ್ತೇನಾವತಾರಿತಾ ।
ಭವತಸ್ತಾರಣಾರ್ಥಂ ಹಿ ಜಾತಂ ಸ್ಥಾನಮಿದಂ ಮಮ । ॥ ೧೨ ॥

---

ಆ ವಿಶ್ವಕರ್ಮನು ನನ್ನ ಅಪ್ಪಣೆಪಡೆದು ನನ್ನ ತೇಜಸ್ಸನ್ನು ಕಡಿಮೆಮಾಡುವದ ಕ್ಕೋಸ್ಕರ ಶಾಕದ್ವೀಪದಲ್ಲಿ ಭ್ರಮಣವನ್ನು ಏರ್ಪಡಿಸಿ ನನ್ನನ್ನು ಕಡೆದನು. ಆದರಿಂದ ನನ್ನ ರೂಪವು ಈ ರೀತಿ ಬದಲಾಯಿಸಿತು. ಈಗ ನಾನು ನಿನ್ನಲ್ಲಿರುವ ಪ್ರೀತಿಯಿಂದ ಆ ವಿಶ್ವಕರ್ಮನಿಗೆ ಹೇಳಿ ಕಲ್ಪವೃಕ್ಷದ ಮರದಿಂದ ಈ ಪ್ರತಿಮೆಯನ್ನು ನಿನಗೋಸ್ಕರ ಮಾಡಿಸಿರುವೆನು. ಆ ವಿಶ್ವಕರ್ಮನು ಈ ನನ್ನ ಪ್ರತಿಮೆಯನ್ನು ಪುಣ್ಯಪುರುಷರಾದ ಸಿದ್ಧರೇ ಮೊದಲಾದವರು ವಾಸಮಾಡುವ ಪವಿತ್ರವಾದ ಹಿಮಾಲಯ ಪರ್ವತದ ತಪ್ಪಲಿನಲ್ಲಿ ನಿರ್ಮಾಣಮಾಡಿದನು.

೧೨-೧೩. ಆ ವಿಶ್ವಕರ್ಮನು ನನ್ನ ಅಪ್ಪಣೆಯಂತೆ ಈ ಚಂದ್ರಭಾಗಾ ನದಿಯ ಮೂಲಕ ನಿನಗೋಸ್ಕರ ಈ ಪ್ರತಿಮೆಯನ್ನು ಕಳುಹಿಸಿರುವನು. ನಿನ್ನನ್ನು ಉದ್ಧಾರ ಮಾಡುವದಕ್ಕೋಸ್ಕರವಾಗಿಯೇ ನನ್ನ ಸ್ಥಾನವು ಇಲ್ಲಿ ಏರ್ಪಟ್ಟಿದೆ.

ರುಚಿರಂ ಸರ್ವದಾ ತತ್ರ ಸಾನ್ನಿಧ್ಯಂ ಮೇ ಭವಿಷ್ಯತಿ ॥ ೧೩ ॥

ಸಾನ್ನಿಧ್ಯಂ ಮಮ ಪೂರ್ವಾಹ್ನೇ ಉದಿತೇ ರಜ್ಯತೇ ಜನಃ ।
ಕಾಲಾತ್ಯಯೇ ಚ ಮಧ್ಯಾಹ್ನೇ ಸಾಯಾಹ್ನೇ ಚಾತ್ರ ನಿತ್ಯಶಃ ॥ ೧೪ ॥

॥ ವಸಿಷ್ಠ ಉವಾಚ ॥

ಶ್ರುತ್ವಾ ದೇವಸ್ಯ ತದ್ವಾಕ್ಯಂ ದೃಷ್ಟ್ವಾ ಪ್ರತ್ಯಕ್ಷದರ್ಶಿನಂ ।
ಕೃತ್ವಾ ದೇವಗೃಹಂ ಸಾಂಬಃ ತತಃ ಪ್ರೋವಾಚ ನಾರದಂ ॥ ೧೫ ॥

॥ ಸಾಂಬ ಉವಾಚ ॥

ತ್ವತ್ಪ್ರಸಾದಾತ್ ಮಯಾ ಪ್ರಾಪ್ತಂ ರೂಪಯೋತತ್ ಸನಾತನಂ ।
ಪ್ರತ್ಯಕ್ಷದರ್ಶನಂ ಚಾಪಿ ಭಾಸ್ಕರಸ್ಯ ಮಹಾತ್ಮನಃ ॥ ೧೬ ॥

---

ಯಾವಾಗಲೂ ನನ್ನ ಸಾನ್ನಿಧ್ಯವು ಸಂತೋಷದಿಂದ ಇಲ್ಲಿಯೇ ಇರುವುದೆಂದು ತಿಳಿ. ಅಂದರೆ ನಾನು ಯಾವಾಗಲೂ ಸಂತೋಷದಿಂದ ಈ ಚಂದ್ರಭಾಗಾ ನದಿಯ ದಡದಲ್ಲಿರುವ ನಿನ್ನ ಆಶ್ರಮದಲ್ಲಿ ನಿನಗಾಗಿ ನೆಲಸಿರುವೆನು.

೧೪. ನನ್ನ ಸಾನ್ನಿಧ್ಯವು ಇಲ್ಲಿರುವುದರಿಂದ ಪೂರ್ವಾಹ್ಣದಲ್ಲಿ ಅಂದರೆ ನಾನು (ಸೂರ್ಯನು) ಉದಯಿಸಿದಾಗ ಮತ್ತು ಮಧ್ಯಾಹ್ನ ಕಾಲದಲ್ಲಿಯೂ ಅಲ್ಲದೆ ಸಾಯಂಕಾಲದಲ್ಲಿಯೂ ಸಹ ಈ ಕ್ಷೇತ್ರದಲ್ಲಿ ಜನರು ನನ್ನನ್ನು ಪೂಜಿಸಿ ಧನ್ಯರಾಗಬಹುದು.

೧೫. ಸಾಂಬನು, ಸೂರ್ಯನು ಈ ರೀತಿ ಹೇಳಿದುದನ್ನು ಕೇಳಿ ಅವನನ್ನು ಪ್ರತ್ಯಕ್ಷವಾಗಿ ನೋಡಿ ಬಹು ಸಂತೋಷಪಟ್ಟು. ಆ ಸೂರ್ಯದೇವನಿಗೋಸ್ಕರ ದೇವಾಲಯವನ್ನು ಕಟ್ಟಿಸಿ ಅನಂತರ ನಾರದರನ್ನು ಕುರಿತು ಇಂತೆಂದನು; ಎಂದು ವಸಿಷ್ಠ ಮಹರ್ಷಿಯು ಬೃಹದ್ಬಲ ಮಹಾರಾಜನಿಗೆ ಹೇಳಿದನು.

೧೬-೧೯. ಸಾಂಬನು ನಾರದನನ್ನು ಕುರಿತು "ಎಲೌ ದೇವರ್ಷಿಯೇ! ನಿನ್ನ ಅನುಗ್ರಹದಿಂದ ನಾನು ಪುರಾತನವಾದ ಸೂರ್ಯನ ರೂಪವನ್ನು ನೋಡಿದೆನು.

ಸರ್ವಮೇತಚ್ಚ ಸಂಪ್ರಾಪ್ಯ ಪುನಶ್ಚಿಂತಾಕುಲಂ ಮನಃ ।
ದೇವಸ್ಯ ಪರಿಚರ್ಯಾಯಾಃ ಪಾಲನಂ ಕಃ ಕರಿಷ್ಯತಿ ॥ ೧೭ ॥

ಗುಣಯುಕ್ತೋ ದ್ವಿಜೋ ಯೋ ಹಿ ಸಮರ್ಥಃ ಪರಿಪಾಲನೇ ।
ಮನ್ಯೇ ವಾಽನುಗ್ರಹಾತ್ ಬ್ರಹ್ಮನ್ ವಿಚಿಂತ್ಯಾಽಽಖ್ಯಾತುಮರ್ಹಸಿ ॥ ೧೭ ॥

ಏವಮುಕ್ತಸ್ತು ಸಾಂಬೇನ ನಾರದಃ ಪ್ರತ್ಯುವಾಚ ತಂ ॥ ೧೯ ॥

॥ ನಾರದ ಉವಾಚ ॥

ನ ದ್ವಿಜಾಃ ಪರಿಗೃಹ್ಣಂತಿ ದೇವಸ್ಯಾತ್ರೀಕೃತಂ ಧನಂ ।
ವಿದ್ಯತೇ ಚ ಧನಂ ಯತ್ರ ಗುರುಶ್ಚಾಯಂ ಪ್ರತಿಗ್ರಹಃ ॥ ೨೦ ॥

---

ಸೂರ್ಯದೇವನನ್ನು ಪ್ರತ್ಯಕ್ಷವಾಗಿಯೇ ದರ್ಶನ ಮಾಡಿದೆನು. ಮತ್ತು ಆ ಭಗವಂತನ ಪ್ರತಿಮೆಯನ್ನೂ ಹೊಂದಿದೆನು.

ಇಷ್ಟಾದರೂ ನನ್ನ ಮನಸ್ಸು ಇನ್ನೂ ಸಂದೇಹಗೊಂಡಿರುವದು. ನನ್ನಿಂದ ಪ್ರತಿಷ್ಠೆ ಮಾಡಲ್ಪಟ್ಟಿರುವ ಸೂರ್ಯದೇವನ ಸೇವೆಯನ್ನು ನಿತ್ಯವೂ ಮಾಡುವರು ಯಾರು ? ಯಾರು ಇವನನ್ನು ರಕ್ಷಿಸುವರು. ?

ಈ ಸೂರ್ಯದೇವನನ್ನು ಪೂಜಿಸುವ ಮತ್ತು ಈ ದೇವಾಲಯವನ್ನೂ ರಕ್ಷಿಸುವ ವಿಷಯದಲ್ಲಿ ಯಾರು ಸಮರ್ಥರೆಂಬುದನ್ನು ಅನುಗ್ರಹವಿಟ್ಟು ಚೆನ್ನಾಗಿ ಯೋಚಿಸಿ ತಿಳಿಸು " ಎಂದು ಕೇಳಿದನು.

ಹೀಗೆ ಸಾಂಬನು ಕೇಳಲು ನಾರದರು ಅವನಿಗೆ ಮುಂದೆ ಹೇಳುವಂತೆ ಉತ್ತರ ಕೊಟ್ಟರು.

೨೦. ಬ್ರಾಹ್ಮಣರು ದೇವರ ದ್ರವ್ಯವನ್ನು ತೆಗೆದುಕೊಳ್ಳುವುದಿಲ್ಲ. ಈ ಸೂರ್ಯನ ಸಮೀಪದಲ್ಲಿ ಸಂಪೂರ್ಣನಿಧಿಯಿರುವುದು. ಇದನ್ನು ಸ್ವೀಕರಿಸುವುದು ಅಷ್ಟು ಸುಲಭಸಾಧ್ಯವಲ್ಲ.

ದೇವಚರ್ಯಾಗತ್ತೈಃ ದ್ರವ್ಯೈಃ ಕ್ರಿಯಾ ಬ್ರಾಹ್ಮೀ ನ ವಿದ್ಯತೇ ।
ಅವಿಜ್ಞಾಯ ಚ ಕುರ್ವಂತಿ ಯೇ ಕ್ರಿಯಾಲೋಭಮೋಹಿತಾಃ ॥ ೨೧ ॥

ಅಪಾಂಕ್ತೇಯಾ ಭವಂತೀಹ ತೇ ವೈ ದೇವಲಕಾ ದ್ವಿಜಾಃ ।
ಅವಿಜ್ಞಾನವಿಧಾನಂ ಯೇ ಬ್ರಾಹ್ಮಣಾ ಲೋಭಮೋಹಿತಾಃ ॥ ೨೨ ॥

ದೇವಸ್ವ ಮುಪಯೋಕ್ಷ್ಯಂತಿ ಪತಿತಾಸ್ತೇ ಭವಂತಿ ಹಿ ।
ಗರ್ಹಿತಂ ಮಾನವಂ ಶಾಸ್ತ್ರಂ ನ ಪ್ರಶಂಸಂತಿ ತೇ ದ್ವಿಜಾಃ ॥ ೨೩ ॥

ದೇವಸ್ವಂ ಬ್ರಾಹ್ಮಣಸ್ವಂ ಚ ಯೋ ಲೋಭಾದುಪಜೀವತಿ ।
ಸ ಪಾಪಾತ್ಮಾ ಪರೇ ಲೋಕೇ ಗೃದ್ಧ್ರೋಚ್ಛಿಷ್ಟೇನ ಜೀವತಿ ॥ ೨೪ ॥

ತತೋಽನ್ಯೋ ಬ್ರಾಹ್ಮಣಃ ಕಶ್ಚಿತ್ ದೇವಚರ್ಯಾಂ ಕರಿಷ್ಯತಿ ।
ವಿಧಿಜ್ಞಂ ಜ್ಞಾನವಂತಂ ಚ ಪರಿಚರ್ಯಾಕ್ಷಮಂ ತಥಾ ।

---

೨೧-೨೩. ದೇವರ ಪೂಜೆಯಿಂದ ಸಂಪಾದಿಸಿದ ದ್ರವ್ಯಗಳಿಂದ ಬ್ರಾಹ್ಮಣನಾದವನು ಸತ್ಕರ್ಮಗಳನ್ನು ನಡೆಸಬಾರದು. ಕೆಲವರು ತಿಳಿಯದೆ, ಕೇವಲ ದ್ರವ್ಯದಾಸೆಗೆ ಮೋಹಗೊಂಡು ಈರೀತಿ ನಡೆಸುವರು.

ಹೀಗೆ ದ್ರವ್ಯದಾಸೆಯಿಂದ ಮಾಡಿದ ದೇವರ ಪೂಜೆಯಿಂದ ಬ್ರಾಹ್ಮಣರು ಪಂಕ್ತಿಬಾಹ್ಯರಾಗುವರು. ಯಾವ ಬ್ರಾಹ್ಮಣರು ಆಸೆಯಿಂದ ದೇವರ ದ್ರವ್ಯವನ್ನು ಉಪಯೋಗಿಸುವರೋ, ಅವರು ಪತಿತರಾಗುವರು. ಅಂತಹ ಬ್ರಾಹ್ಮಣರು ಪೂಜ್ಯವಾದ ಮನುಧರ್ಮಶಾಸ್ತ್ರವನ್ನೂ ಸಹ ನಿಂದಿಸುವರೇ ಹೊರತು ಹೊಗಳುವುದಿಲ್ಲ. ಅಂದರೆ ಧರ್ಮಶಾಸ್ತ್ರರೀತಿಯಿಂದ ಅವರು ಮನುಷ್ಯರೆನಿಸುವರು.

೨೪. ದೇವರ ಸ್ವತ್ತನ್ನೂ ಬ್ರಾಹ್ಮಣರ ಸ್ವತ್ತನ್ನೂ ಸಹ ಪಡೆದು ಅದರಿಂದ ಜೀವಿಸುವ ಜನರು ಪಾಪಿಗಳೆನಿಸಿ ಪರಲೋಕದಲ್ಲಿ ಹದ್ದುಗಳ ಉಚ್ಛಿಷ್ಟವನ್ನು ತಿಂದು ಜೀವಿಸುವರು.

೨೫. ಆದುದರಿಂದ "ಎಲೈ ಸಾಂಬನೇ! ಶಾಸ್ತ್ರಜ್ಞನೂ, ಜ್ಞಾನಿಯೂ, ಸೇವೆ ಮಾಡುವುದರಲ್ಲಿ ಸಮರ್ಥನಾದ ಅಂತಹ ಬ್ರಾಹ್ಮಣನನ್ನು ಆ ಸೂರ್ಯ ಪರಮಾತ್ಮನೇ

ಸಮಾಖ್ಯಾಸ್ಯತಿ ತೇ ದೇವಃ ತಸ್ಮಾತ್ತ್ವಂ ಶರಣಂ ವ್ರಜ ॥ ೫೨ ॥

ನಾರದೇನೈವಮುಕ್ತಸ್ತು ಪ್ರಣಮ್ಯ ಶಿರಸಾ ರವಿಂ ।
ಸಂಶಯಂ ಪರಿಪಪ್ರಚ್ಛ ಕಸ್ತೇ ಪೂಜಾಂ ಕರಿಷ್ಯತಿ ॥ ೨೬ ॥

ವಿಜ್ಞಪ್ತೇತ್ಯಥ ಸಾಂಬೇನ ಪ್ರತಿಮಾ ತಮುವಾಚ ಹ ।
ನ ಯೋಗ್ಯಃ ಪರಿಚರ್ಯಾಯಾಂ ಜಂಬೂದ್ವೀಪೇ ಮಮಾನಘ ॥ ೨೭

ಮಮ ಪೂಜಾಪರಾನ್ ಕೃತ್ವಾ ಶಾಕದ್ವಿಪಾದಿಹಾನಯ ।
ಲವಣೋದಾತ್ಪರೇ ಪಾರೇ ಕ್ಷೀರೋದೇನ ಸಮಾವೃತಂ ॥ ೨೮

---

ನಿನಗೆ ತಿಳಿಸುವನು. ಆದುದರಿಂದ ನೀನು ಈ ವಿಷಯದಲ್ಲಿ ಆ ಭಾಸ್ಕರನನ್ನೇ ಮೊರೆ ಹೊಂದು" ಎಂದು ನಾರದನು ಸಾಂಬನಿಗೆ ಹೇಳಿದನು.

೨೬. ನಾರದನು ಹೀಗೆ ಹೇಳಿದುದನ್ನು ಕೇಳಿ ಸಾಂಬನು ಸೂರ್ಯನಿಗೆ ತಲೆಬಾಗಿ ನಮಸ್ಕರಿಸಿ ತನ್ನ ಮನಸ್ಸಿನಲ್ಲಿ ಉಂಟಾಗಿದ್ದ ಸಂಶಯವನ್ನು ನಿವೃತ್ತಿ ಮಾಡಿಕೊಳ್ಳುವುದಕ್ಕೋಸ್ಕರ "ಎಲೈ ದೇವದೇವನೆ, ನಿನ್ನ ಪೂಜೆಮಾಡಲು ಸಮರ್ಥರಾರಿರುವರು ?" ಎಂದು ಮತ್ತೆ ಸೂರ್ಯದೇವನನ್ನೇ ಪ್ರಾರ್ಥಿಸಿಕೊಂಡನು.

೨೭. ಸಾಂಬನು ಸೂರ್ಯನ ಪ್ರತಿಮೆಯ ಮುಂದೆ ಹೀಗೆ ವಿಜ್ಞಾಪಿಸಿಕೊಳ್ಳಲು, ಆ ಸೂರ್ಯನ ಪ್ರತಿಮೆಯು "ಎಲೈ ಪರಿಶುದ್ಧನೆ, ಜಂಬೂ ದ್ವೀಪದಲ್ಲಿ ನನ್ನನ್ನು ಸರಿಯಾಗಿ ಪೂಜೆಮಾಡಲು ಯಾರೂ ಸಮರ್ಥರಾದವರಿಲ್ಲವೆಂದನು.

೨೮. ನನ್ನನ್ನು ಪೂಜೆಮಾಡಲು ಯೋಗ್ಯರಾದ ಬ್ರಾಹ್ಮಣರು ನಿನಗೆ ಇಲ್ಲಿ ದೊರೆಯಲಾರರು. ಶಾಕದ್ವೀಪದಲ್ಲಿ ಅಂತಹ ಸಮರ್ಥರಾದವರು ಸಿಗುವರು. ನೀನು ಅಲ್ಲಿಗೆಹೋಗಿ ಅವರನ್ನು ಕರೆದುಕೊಂಡು ಬಂದು ಇಲ್ಲಿ ಅವರನ್ನು ನಿಲ್ಲಿಸು. ಆ ಶಾಕ ದ್ವೀಪವು ಉಪ್ಪಿನ ಸಮುದ್ರದ ಆಚೆಯದಡದಲ್ಲಿ ಕ್ಷೀರಸಮುದ್ರದಿಂದ ಸುತ್ತಲ್ಪಟ್ಟಿರುವುದು. ಇದು ಜಂಬೂದ್ವೀಪಕ್ಕಿಂತಲೂ ಸ್ವಲ್ಪ ದೂರದಲ್ಲಿರುವುದು. ನೀನು ಅಲ್ಲಿಗೆ ಹೋಗಿ ಅಲ್ಲಿಂದ ಯೋಗ್ಯರಾದವರನ್ನು ಕರೆದುಕೊಂಡುಬಂದು ನನ್ನನ್ನು ಪೂಜೆ ಮಾಡಲು ಏರ್ಪಡಿಸು ಎಂದು ಸೂರ್ಯನು ಸಾಂಬನಿಗೆ ಅಪ್ಪಣೆಯಿತ್ತನು.

ಜಂಬೂದ್ವೀಪಾತ್ ಪರಂ ತಸ್ಮಾತ್ ಶಾಕದ್ವೀಪ ಇತಿ ಸ್ಮೃತಃ ।
ತತ್ರ ಪುಣ್ಯಾ ಜನಪದಾ ಚಾತುರ್ವರ್ಣ್ಯಸಮಾಶ್ರಿತಾಃ ॥ ೨೯ ॥

ಮಗಾಶ್ಚ ಮಾಮಗಾಶ್ಚೈವ ಮಾನಸಾ ಮಂದಗಾಸ್ತಥಾ ।
ಮಗಾ ಬ್ರಾಹ್ಮಣಭೂಯಿಷ್ಠಾಃ ಮಾಮಗಾಃ ಕ್ಷತ್ರಿಯಾಸ್ತಥಾ ॥ ೩೦ ॥

ವೈಶ್ಯಾಸ್ತು ಮಾನಸಾ ಜ್ಞೇಯಾಃ ಶೂದ್ರಾಸ್ತೇಷಾಂ ತು ಮಂದಗಾಃ ।
ನ ತೇಷಾಂ ಸಂಕರಃ ಕಶ್ಚಿತ್ ವರ್ಣಾಶ್ರಮಕೃತಃ ಕ್ವಚಿತ್ ॥ ೩೧ ॥

ಧರ್ಮಸ್ಯಾವ್ಯಭಿಚಾರಿತ್ವಾತ್ ಏಕಾಂತೇ ಸುಖಿತಾಃ ಪ್ರಜಾಃ ।
ತೇಜಸ ಶ್ಚಾಸ್ಮದೀಯತ್ವಂ ನಿರ್ಮಿತಾ ವೈ ಪುರಾ ಮಯಾ ॥ ೩೨ ॥

ತೇಭ್ಯೋ ವೇದಾಶ್ಚ ಚತ್ವಾರಃ ಸರಹಸ್ಯಾ ಮಯೇರಿತಾಃ ।
ವೇದೋಕ್ತೈ ರ್ವಿವಿಧೈಃ ಸ್ತೋತ್ರೈಃ ಪರೈಃ ಗುಹ್ಯೈಃ ಮಯಾ ಕೃತೈಃ ॥

---

೨೯-೩೧. ಆ ಶಾಕದ್ವೀಪದಲ್ಲಿ ಪುಣ್ಯಕರವಾದ ಅನೇಕ ದೇಶಗಳಿರುವುವು. ಆ ದೇಶಗಳಲ್ಲಿ ಮಗಾ, ಮಾಮಗಾ, ಮಾನಸಾ ಮತ್ತು ಮಂದಗಾ ಎಂಬ ದೇಶಗಳು ಪ್ರಸಿದ್ಧವಾಗಿರುವುವು. "ಮಗ" ಎಂಬ ದೇಶದಲ್ಲಿ ಬ್ರಾಹ್ಮಣರೇ ಹೆಚ್ಚಾಗಿರುವರು. "ಮಾಮಗಾ" ಎಂಬ ರಾಷ್ಟ್ರದಲ್ಲಿ ಕ್ಷತ್ರಿಯರು ಹೇರಳವಾಗಿರುವರು. ವೈಶ್ಯರು "ಮಾನಸಾ" ಎಂಬ ಊರಿನಲ್ಲಿ ವಾಸಿಸುವರು. "ಮಂದಗಾ" ಎಂಬ ದೇಶದಲ್ಲಿ ಶೂದ್ರರೇ ಅಧಿಕವಾಗಿರುವುವು. ಹೀಗೆ ಚಾತುರ್ವರ್ಣ್ಯವೂ ಶಾಕದ್ವೀಪದಲ್ಲಿ ಇದ್ದರೂ ಅವರವರಿಗೆ ಪರಸ್ಪರ ಜಾತಿಸಾಂಕರ್ಯವು ಇರುವುದಿಲ್ಲ.

೩೨. ಈ ಶಾಕದ್ವೀಪದಲ್ಲಿ ಧರ್ಮವು ವ್ಯಭಿಚರಿತವಾಗದೇ ಇರುವುದರಿಂದ (ಅಂದರೆ ಆಯಾಯ, ವರ್ಣದವರು ತಮ್ಮ ತಮ್ಮ ಧರ್ಮವನ್ನು ಸರಿಯಾಗಿ ನಡೆಸಿಕೊಂಡು ಬರುತ್ತಿರುವುದರಿಂದ) ಪ್ರಜೆಗಳೆಲ್ಲರೂ ಒಟ್ಟಿಗೆ ಸುಖವಾಗಿರುವರು. ಈ ಪ್ರಜೆಗಳೆಲ್ಲರೂ ಹಿಂದೆ ನನ್ನ ತೇಜಸ್ಸಿನ ಭಾಗಗಳಿಂದ ಉಂಟಾದವರು.

೩೩-೩೫. ಆ ಶಾಕದ್ವೀಪದಲ್ಲಿರುವ ಬ್ರಾಹ್ಮಣರಿಗೆ ರಹಸ್ಯಸಹಿತವಾದ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನು ಮತ್ತು ವೇದೋಕ್ತವಾದ ಅನೇಕ ಸ್ತೋತ್ರಗಳನ್ನೂ, ಅತ್ಯಂತ ಗೂಢವಾಗಿ ನನ್ನಿಂದಲೇ ರಚಿತವಾದ ಅನೇಕ ವಿಷಯಗಳನ್ನು ಉಪದೇಶಿಸಿರುವೆನು. ಅವರೆಲ್ಲರೂ ನನ್ನನ್ನೇ ಧ್ಯಾನಮಾಡು

ಮಾಮೇವ ತೇ ಚ ಧ್ಯಾಯಂತಿ ಮಾಂ ಜಪನ್ತೇ ಚ ನಿತ್ಯಶಃ ।
ಮದ್ಭಾವನಾಃ ಮಮ ಪರಾ ಮದ್ಭಕ್ತಾ ಮತ್ಪರಾಯಣಾಃ ॥ ೩೪ ॥
ಮಮ ಶುಶ್ರೂಷಕಾ ಶ್ಚೈವ ಮನ್ಮೈವ ವ್ರತಚಾರಿಣಃ ।
ಅವ್ಯಂಗಧಾರಿಣಃ ಸರ್ವೇ ವಿಧಿದೃಷ್ಟೇನ ಕರ್ಮಣಾ ॥ ೩೫ ॥
ಕುರ್ವಂತಿ ತೇ ಸದಾ ತತ್ರ ಮಮ ಪೂಜಾಂ ಮನೋನುಗಾಂ ।
ತತ್ರ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಸಹ ಚಾರಣೈಃ ॥ ೩೬ ॥
ವಿಹರಂತೇ ರಮಂತೇ ಚ ದೃಶ್ಯಮಾನಾಶ್ಚ ತೈಃ ಸಹ ।
ಶ್ವೇತದ್ವೀಪೇ ತ್ವಹಂ ವಿಷ್ಣುಃ ಕುಶದ್ವೀಪೇ ಮಹೇಶ್ವರಃ ॥ ೩೭ ॥
ಪುಷ್ಕರೇ ಚ ಸ್ಮೃತೋ ಬ್ರಹ್ಮಾ ಶಾಕದ್ವೀಪೇ ಚ ಭಾಸ್ಕರಃ ।
ತನ್ಮಾರ್ಗ ಮಮ ಪೂಜಾರ್ಥಂ ಶಾಕದ್ವೀಪಾದಿಹಾನಯ ॥ ೩೮ ॥

---

ವರು. ಯಾವಾಗಲೂ ನನ್ನನ್ನೇ ಜಪಿಸುವರು. ಯಾವಾಗಲೂ ನನ್ನನ್ನೇ ಪೂಜ್ಯನೆಂದು ತಿಳಿದು ನನ್ನಲ್ಲೇ ತತ್ಪರರಾಗಿರುವರು. ಈ ನನ್ನ ಭಕ್ತರು ಸದಾ ನನ್ನನ್ನೇ ಭಜಿಸುತ್ತಿರುವರು. ನನ್ನನ್ನೇ ಯಾವಾಗಲೂ ಸೇವಿಸುವರು. ನನ್ನ ವ್ರತವನ್ನೇ ಅನವರತವೂ ಅನುಷ್ಠಾನ ಮಾಡುತ್ತಿರುವರು. ಅಲ್ಲಿನ ಪ್ರಜೆಗಳೆಲ್ಲರೂ ಶಾಸ್ತ್ರೋಕ್ತವಾದ ಕರ್ಮಗಳ ಅನುಷ್ಠಾನಗಳಿಂದ (ಆಚರಣೆಯಿಂದ) ಸುಂದರವಾದ ಶರೀರವನ್ನು ಧರಿಸುವರು.

೩೬. ಆ ಶಾಕದ್ವೀಪದಲ್ಲಿ ಪ್ರಜೆಗಳೆಲ್ಲರೂ ಮನಃಪೂರ್ವಕವಾಗಿ ನನ್ನ ಪೂಜೆಯನ್ನೇ ಮಾಡುವರು. ದೇವತೆಗಳೂ, ಗಂಧರ್ವರೂ, ಸಿದ್ಧಪುರುಷರೂ, ಸಹ ಚಾರಣರೊಡನೆ ಅಲ್ಲಿ ವಿಹರಿಸುತ್ತಾ ಸಂತೋಷದಿಂದ ಕಣ್ಣಿಗೆ ಕಾಣಿಸುವಂತೆ ಕ್ರೀಡಿಸುತ್ತಿರುವರು.

೩೭-೩೮. ಎಲೈ ಸಾಂಬನೆ! ನಾನು ಶ್ವೇತದ್ವೀಪದಲ್ಲಿ ವಿಷ್ಣುವೆನಿಸುವೆನು. ಕುಶದ್ವೀಪದಲ್ಲಿ ನನ್ನನ್ನು ಮಹೇಶ್ವರನೆಂದು ಕರೆಯುವರು. ಪುಷ್ಕರ ದ್ವೀಪದಲ್ಲಿ ನಾನು ಬ್ರಹ್ಮನೆಂದು ಕರೆಯಲ್ಪಡುವೆನು. ಶಾಕದ್ವೀಪದಲ್ಲಿಯಾದರೋ ನನ್ನನ್ನು ಭಾಸ್ಕರನೆನ್ನುವರು.

ಆರೂಢೋ ಗರುಡಂ ಸಾಂಬ ಶೀಘ್ರಂ ಗಚ್ಛ ವಿಚಾರಯ ॥ ೩೯ ॥

॥ ವಸಿಷ್ಠ ಉವಾಚ ॥

ತಥೇತಿ ಪ್ರತಿಗೃಹ್ಯಾಜ್ಞಾಂ ರವೇರ್ಜಾಂಬವತೀಸುತಃ ।
ಪುನರ್ದ್ವಾರವತೀಂ ಗತ್ವಾ ಕಾಂತ್ಯಾಽತೀವ ಸಮಾವೃತಃ ॥ ೪೦ ॥

ಆಖ್ಯಾತವಾನ್ ಪಿತುಃ ಸರ್ವಂ ಸ್ವಕೀಯಂ ದೇವದರ್ಶನಂ ।
ತಸ್ಮಾಚ್ಚ ಗರುಡಂ ಲಬ್ಧ್ವಾ ಯಯೌ ಸಾಂಬೋಽಧಿರುಹ್ಯ ತಂ ॥ ೪೧ ॥

ಶಾಕದ್ವೀಪಮನುಪ್ರಾಪ್ಯ ಸಂಪ್ರಹೃಷ್ಟತನೂರುಹಃ ।
ತತ್ರಾಪಶ್ಯದ್ಯಥೋದ್ದಿಷ್ಟಾನ್ ಸಾಂಬ ತೇಜಸ್ವಿನೋ ಮಗಾನ್ ॥ ೪೨ ॥

---

ಆದುದರಿಂದ ನೀನು ಗರುಡನಮೇಲೆ ಕುಳಿತುಕೊಂಡು ಶಾಕದ್ವೀಪಕ್ಕೆ ಹೋಗಿ ಅಲ್ಲಿ ವಿಚಾರಿಸಿ ನನ್ನನ್ನು ಪೂಜೆಮಾಡಲು ಯೋಗ್ಯನಾದ ಬ್ರಾಹ್ಮಣನನ್ನು ಜಾಗ್ರತೆಯಾಗಿ ಕರೆದುಕೊಂಡು ಬಾ" ಎಂದು ಸೂರ್ಯನು ಸಾಂಬನಿಗೆ ಅಪ್ಪಣೆಮಾಡಿದನು.

೪೦. ಜಾಂಬವತೀನಂದನನಾದ ಸಾಂಬನು ಹಾಗೆಯೇ ಆಗಲೆಂದು ಸೂರ್ಯನ ಅಪ್ಪಣೆಯನ್ನು ಪಡೆದು ಅತ್ಯಂತ ಕಾಂತಿಯಿಂದ ಪ್ರಕಾಶಿಸುತ್ತಾ, ಮತ್ತೆ ದ್ವಾರಕಾವತಿಗೆ ಬಂದನು.

೪೧-೪೨. ಆ ದ್ವಾರಕಾನಗರದಲ್ಲಿದ್ದ ತಂದೆಯ ಸಮೀಪಕ್ಕೆ ಹೋಗಿ ನಮಸ್ಕಾರ ಮಾಡಿ, ತನಗೆ ಉಂಟಾದ ಸೂರ್ಯದೇವನ ದರ್ಶನವನ್ನೂ ಮತ್ತು ಸೂರ್ಯನಿಂದ ಲಬ್ಧವಾದ ವರಮಹಿಮೆಯನ್ನೂ ಶ್ರೀ ಕೃಷ್ಣಪರಮಾತ್ಮನಿಗೆ ತಿಳಿಸಿದನು. ಅನಂತರ ಅವನ ದೆಸೆಯಿಂದ ಗರುಡನನ್ನು ಹೊಂದಿ. ಅವನನ್ನೇರಿ ಸಾಂಬನು ಶಾಕದ್ವೀಪಕ್ಕೆಹೋಗಿ ಸಂತೋಷಹೊಂದಿ ಅಲ್ಲಿ ಸೂರ್ಯನು ಹೇಳಿದಂತೆಯೇ ಮಗದೇಶದಲ್ಲಿ ತೇಜಸ್ವಿಯರಾದ ಬ್ರಾಹ್ಮಣರನ್ನು ಕಂಡನು.

ವಿವಸ್ವಂತಂ ಪೂಜಯತೋ ಧೂಪಗಂಧಾದಿಭಿಃ ಶುಭೈಃ ।
ಅಭಿವಾದ್ಯ ಚ ತಾನ್ ಸರ್ವಾನ್ ಕೃತ್ವಾ ಚೈವ ಪ್ರದಕ್ಷಿಣಾಂ ॥ ೪೩ ॥

ಪೃಷ್ಟ್ವಾಽಥೋನಾಮಯಂ ತೇಷಾಂ ಶ್ಲಾಘಯಾಮಾಸ ತಾಂಸ್ತತಃ ।
ಯೂಯಂ ಹಿ ಪುಣ್ಯಕರ್ಮಾಣೋ ದ್ರಷ್ಟವ್ಯಾಶ್ಚ ಶುಭಾರ್ಥಿಭಿಃ ॥ ೪೪ ॥

ಯೋ ರತೋಽರ್ಕಸ್ಯ ಪೂಜಾಯಾಂ ತಸ್ಯ ಚೈವ ವರಪ್ರದಃ ।
ತನಯಂ ವಿದ್ಧಿ ಮಾಂ ವಿಷ್ಣೋರ್ನಾಮ್ನಾ ಸಾಂಬ ಇತೀರಿತಃ ॥ ೪೫ ॥

ಚಂದ್ರಭಾಗಾತಟೇ ಚಾಪಿ ಮಯಾ ಸೂರ್ಯೋ ನಿವೇಶಿತಃ ।
ತೇನಾಹಂ ಪ್ರೇಷಿತಶ್ಚಾತ್ರ ಉತ್ತಿಷ್ಠಧ್ವಂ ವ್ರಜಾಮಹೇ ॥ ೪೬ ॥

---

೪೩-೪೪. ಆ ಬ್ರಾಹ್ಮಣರೆಲ್ಲರೂ ಧೂಪ, ಗಂಧ, ಮೊದಲಾದ ಶುಭ ದ್ರವ್ಯಗಳಿಂದ ಸದಾ ಸೂರ್ಯನನ್ನು ಪೂಜಿಸುತ್ತಿದ್ದರು. ಸಾಂಬನು ಅದನ್ನು ನೋಡಿ ಅವರಿಗೆಲ್ಲಾ ಪ್ರದಕ್ಷಿಣೆಮಾಡಿ ನಮಸ್ಕರಿಸಿದನು.

ಅನಂತರ ಆ ಬ್ರಾಹ್ಮಣಶ್ರೇಷ್ಠರನ್ನು ಕುಶಲಪ್ರಶ್ನೆಗಳಿಂದ ಸತ್ಕರಿಸಿ "ನೀವು ಪುಣ್ಯಪುರುಷರು. ಶುಭಾಪೇಕ್ಷಿಗಳಾದವರು. ನಿಮ್ಮನ್ನು ಅವಶ್ಯಕವಾಗಿ ದರ್ಶನ ಮಾಡಿದವರಿಗೆ ಸಕಲ ಇಷ್ಟಾರ್ಥಗಳೂ ನೆರವೇರುವುವು" ಎಂದು ಸ್ತೋತ್ರಮಾಡಿದನು.

೪೫-೪೬. "ನಾನು ವಿಷ್ಣುವಿನ ಮಗನು. ನನ್ನನ್ನು ಸಾಂಬನೆಂದು ಕರೆಯುವರು ನಾನು ಸೂರ್ಯನ ಪೂಜೆಯಲ್ಲಿ ನಿರತನಾಗಿರುವೆನು. ಮತ್ತು ಅವನ ವರದಿಂದಲೇ ಈ ಸುರೂಪವು ಪ್ರಾಪ್ತಿಯಾಗಿರುವುದು. ನಾನು ಆ ಸೂರ್ಯದೇವನ ಅಪ್ಪಣೆಯಿಂದಲೇ ಚಂದ್ರಭಾಗಾ ನದೀ ತೀರದಲ್ಲಿ ಸೂರ್ಯದೇವನನ್ನು ಸ್ಥಾಪಿಸಿರುವೆನು. ಆ ದೇವರ ಪೂಜೆಗೋಸ್ಕರ ಯೋಗ್ಯನಾದ ಬ್ರಾಹ್ಮಣನನ್ನು ಕರೆದುಕೊಂಡು ಬರುವಂತೆ ಸೂರ್ಯನೇ ನನ್ನನ್ನು ಇಲ್ಲಿಗೆ ಕಳುಹಿಸಿರುವನು. ಆದುದರಿಂದ ಎಲೈ ಬ್ರಾಹ್ಮಣೋತ್ತಮರೇ ! ಏಳಿ ಹೊರಡೋಣ" ಎಂದು ಶಾಕದ್ವೀಪದ ಬ್ರಾಹ್ಮಣರನ್ನೆಲ್ಲ ಕುರಿತು ಸಾಂಬನು ಹೇಳಿದನು

ತೇ ತಮೂಚುಸ್ತತಃ ಸಾಂಬಂ ಏವಮೇತನ್ನ ಸಂಶಯಃ ।
ಅಸ್ಮಾಕಮಪಿ ದೇವೇನ ಆಖ್ಯಾತಂ ಪೂರ್ವಮೇವ ಹಿ ॥ ೪೭ ॥

ಅಷ್ಟಾದಶಕುಲಾನೀಹ ಮಗಾನಾಂ ವೇದವಾದಿನಾಂ ।
ಯಾಸ್ಯಂತಿ ಚ ತ್ವಯಾ ಸಾರ್ಧಂ ಯತ್ರ ಸನ್ನಿಹಿತೋ ರವಿಃ ॥ ೪೮ ॥

ಸ ತು ಗೃಹ್ಯ ತತಸ್ತಾನಿ ದಶಚಾಷ್ಟೌ ಕುಲಾನಿ ಚ ।
ಆರೋಪ್ಯ ಗರುಡೇ ಸಾಂಬಃ ತ್ವರಿತಃ ಪುನರಭ್ಯಗಾತ್ ॥ ೪೯ ॥

ಸ ಪುತ್ರದಾರಸಂಯುಕ್ತೋ ಪೂಜಾ ಯಜ್ಞಾಯ ಚಾಗತಃ ।
ಸೋಽಲ್ಪೇನೈವ ತು ಕಾಲೇನ ಪ್ರಾಪ್ತೋ ಮಿತ್ರವನಂ ಪುನಃ ॥ ೫೦ ॥

ಕೃತ್ವಾಜ್ಞಾಂ ತಾಂ ರವೇಃ ಸಾಂಬೋ ಯತ್ಕೃತಂ ತನ್ನ್ಯವೇದಯತ್ ।
ರವಿಃ ಶೋಭನಮಿತ್ಯುಕ್ತ್ವಾ ಪ್ರಸನ್ನಃ ಸಾಂಬಮಬ್ರವೀತ್ ॥ ೫೧ ॥

---

೪೭-೪೮. ಆ ಬ್ರಾಹ್ಮಣರು ಸಾಂಬನನ್ನು ಕುರಿತು "ನೀನು ಹೇಳುವುದು ಸರಿಯಾಗಿದೆ. ಇದರಲ್ಲಿ ಸಂದೇಹವಿಲ್ಲ. ನಮಗೂ ಸಹ ಸೂರ್ಯದೇವನು ಹಿಂದೆಯೇ ಇದೇ ವಿಷಯವನ್ನು ತಿಳಿಸಿರುವನು.

ಈ ಶಾಕದ್ವೀಪದಲ್ಲಿ ವೇದವಾದಿಗಳಾದ ಮಗನಾಮಕರಾದ ಬ್ರಾಹ್ಮಣರ ಹದಿನೆಂಟು ಕುಲಗಳಿರುವವು. ಅವರೆಲ್ಲರೂ ನಿನ್ನೊಡನೆ ಸೂರ್ಯದೇವನಿರುವ ಕಡೆಗೇ ಹೊರಡುವರು" ಎಂದು ಹೇಳಿದರು.

೪೯-೫೦. ಆ ಸಾಂಬನು ಮಗರೆಂಬ ಬ್ರಾಹ್ಮಣರ ಹದಿನೆಂಟು ಕುಲಗಳನ್ನು ಕರೆದುಕೊಂಡು ಅವರನ್ನೆಲ್ಲಾ ಗರುಡನ ಮೇಲೆ ಕೂರಿಸಿಕೊಂಡು ಜಾಗ್ರತೆಯಾಗಿ ಬಂದನು ಅನಂತರ ತಾನೂ ಮಕ್ಕಳು ಮತ್ತು ಹೆಂಡತಿಯೊಡನೆ ಕೂಡಿದವನಾಗಿ ಸೂರ್ಯನ ಪೂಜೆ ಮತ್ತು ಯಜ್ಞಗಳಿಗೋಸ್ಕರ ಬಹುಜಾಗ್ರತೆಯಾಗಿಯೇ ಮಿತ್ರವನವನ್ನು ಪ್ರವೇಶಿಸಿದನು.

೫೧-೫೨. ಸಾಂಬನು ಸೂರ್ಯನ ಅಪ್ಪಣೆಯಂತೆ ನಡೆದುಕೊಂಡು, ತಾನು ಮಾಡಿದ್ದನ್ನೆಲ್ಲಾ ಸೂರ್ಯದೇವನಿಗೆ ಅರಿಕೆಮಾಡಿದನು. ರವಿಯು ಒಳ್ಳೆಯದೆಂದು ಹೇಳಿ ಪ್ರಸನ್ನನಾಗಿ ಸಾಂಬನನ್ನು ಕುರಿತು ಹೀಗೆಂದನು.

ಮಮ ಪೂಜಾಕರಾಹ್ಯೇತೇ ಪ್ರಜಾನಾಂ ಶಾಂತಿಕಾರಕಾಃ ।
ಮಮ ಪೂಜಾಂ ವಿಧಾನೋಕ್ತಾಂ ಕರಿಷ್ಯಂತಿ ಮನೋಽನುಗಾಂ ।
ಮತ್ಕೃತೇ ಚ ಪುನಶ್ಚಿಂತಾ ನ ತೇ ಕಾಚಿದ್ಭವಿಷ್ಯತಿ ॥ ೫೨ ॥

ಇತಿ ಶ್ರೀ ಸಾಂಬಪುರಾಣೇ ಮಗಾನಯನಂ ನಾಮ
ಷಡ್ವಿಂಶೋಽಧ್ಯಾಯಃ.

---

"ಈ ಬ್ರಾಹ್ಮಣರೆಲ್ಲರೂ ನನ್ನ ಪೂಜೆಮಾಡುತ್ತಾ ಲೋಕಶಾಂತಿಯನ್ನುಂಟು ಮಾಡುವರು. ಮನುವು ಹೇಳಿದಂತೆ ನನ್ನ ಪೂಜೆಯನ್ನು ಶಾಸ್ತ್ರೋಕ್ತವಾಗಿ ಇವರು ನಡೆಸುವರು. ಇನ್ನು ಈ ವಿಷಯದಲ್ಲಿ ನಿನಗೆ ಯಾವ ಸಂದೇಹವೂ ಬರಲಾರದು." ಎಂದು ಹೇಳಿದನು.

ಇಲ್ಲಿಗೆ ಸಾಂಬಪುರಾಣದಲ್ಲಿ ಮಗಾ ಎಂಬ ಶಾಕದ್ವೀಪದ ಬ್ರಾಹ್ಮಣರನ್ನು
ಕರೆದುಕೊಂಡು ಬರುವಿಕೆ ಎಂಬವಿಷಯವನ್ನು ತಿಳಿಸುವ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತವಿಂಶೋಽಧ್ಯಾಯಃ

॥ ಬೃಹದ್ಬಲ ಉವಾಚ ॥

**ಅಹೋ ಸಭಾಗ್ಯಾಃ ಶ್ಲಾಘ್ಯಾಶ್ಚ ಕೃತಪುಣ್ಯಾಶ್ಚ ತೇ ಸದಾ ।**
**ಪೂಜಾಯಾಂ ಯೇ ರತಾಃ ಸೂರ್ಯೇ ಯೇಷಾಂ ಚೈವ ವರಪ್ರದಂ ॥೧॥**

**ಪರ್ಯಾಪ್ತಂ ಸರ್ವಮೇವೈಷಾಂ ಇಹಚಾಽಮುತ್ರ ಕಿಂ ಫಲಂ ।**
**ಅನಿತ್ಯೇ ಸತಿ ಮಾನುಷ್ಯೇ ದೇವಪೂಜಾ ರತಾ ಹಿ ಯೇ ॥ ೨ ॥**

## ಇಪ್ಪತ್ತೇಳನೆಯ ಅಧ್ಯಾಯ.

೧. ಸೂರ್ಯದೇವನ ಪೂಜಾಕಾರ್ಯದಲ್ಲಿಯೇ ಯಾವಾಗಲೂ ಆಸಕ್ತರಾಗಿರುವ ಈ ಬ್ರಾಹ್ಮಣರು, ಭಾಗ್ಯಶಾಲಿಗಳು, ಸ್ತೋತ್ರಾರ್ಹರು, ಪುಣ್ಯಪುರುಷರು, ಮತ್ತು ಯಾವಾಗಲೂ ಸೂರ್ಯನು ಇವರಿಗೆ ವರವನ್ನು ಕೊಡುತ್ತಿರುವನು. ಇವರು ಧನ್ಯರಲ್ಲವೆ !

೨-೩. ನಶ್ವರವಾದ ಈ ಮನುಷ್ಯಜನ್ಮದಲ್ಲಿ, ದೇವರ ಪೂಜೆಯಲ್ಲಿ ಆಸಕ್ತರಾಗಿರುವ ಈ ಬ್ರಾಹ್ಮಣರಿಗೆ, ಇಹಪರಗಳೆರಡರಲ್ಲೂ ದೊರೆಯುವ ಪ್ರಯೋಜನವು ಇಲ್ಲಿಯೇ ದೊರೆಯುವುದಲ್ಲವೇ ! ಆದರೆ, ಸೂರ್ಯನನ್ನೇ ಯಾವಾಗಲೂ ಪೂಜಿಮಾಡುತ್ತ ಸದಾ ಧ್ಯಾನಮಾಡುತ್ತಿರುವ ಈ ಬ್ರಾಹ್ಮಣರು ಸುಖವಾಗಿ ಭೋಜನಾದಿಗಳಲ್ಲಿ

ಕಿಂ ತು ಚಿಂತಯತಃ ಸೂರ್ಯಂ ಚಿಂತಯಿತ್ವಾ ಸುಭೋಜಕಾನ್ ।
ಜ್ಞಾನಂ ಪ್ರತಿ ತಥಾ ಚೈಷಾಂ ಹೃದಯೇ ಮಮ ಸಂಶಯಃ ॥ ೩ ॥

ಕಥಂ ಪೂಜಾಕರಾಹ್ಯೇತೇ ಕಿಂಮಗಾಃ ಕಿಂ ಚ ಯಾಜಿಕಾಃ ।
ಜ್ಞಾನಂ ಚ ಕಿಂ ಪರಂ ತೇಷಾಂ ಜ್ಞೇಯಸ್ತೇಷಾಂ ಕ ಏವ ಹಿ ॥ ೪ ॥

ಏತತ್ಸರ್ವಂ ಯಥಾ ನ್ಯಾಯಂ ತನ್ಮಮಾಖ್ಯಾತು ಮರ್ಹಸಿ ॥ ೫ ॥

॥ ವಸಿಷ್ಠ ಉವಾಚ ॥

ಮೋಕ್ಷವಾದಿನ ಏವೈತೇ ಕರ್ಮಯೋಗಂ ಸಮಾಶ್ರಿತಾಃ ।
ಯಷ್ಟವ್ಯೋ ಭಗವಾನ್ ಸೂರ್ಯಃ ಫಲಪುಷ್ಪೈರ್ಮನೋರಮೈಃ ॥ ೬ ॥

ತಥೈವಾನ್ನೌಷಧೀಭಿಶ್ಚ ಹ್ಯಾಜ್ಯಹೋಮೈಸ್ತಥೈವ ಚ ।
ಹೋಮಂ ಯೇ ಮಂತ್ರತಃ ಕೃತ್ವಾ ಪರಂ ಹೋಮಂ ಪಿಬಂತಿ ತೇ ॥ ೭ ॥

---

ಕಾಲ ಕಳೆಯುವಂತೆ, ಸುಜ್ಞಾನದಲ್ಲಿಯೂ ಮುಂದುವರಿದಿರಬಹುದು. ಆದರೆ ಇವರ ಜ್ಞಾನವು ಯಾವರೀತಿ ಅಭಿವೃದ್ಧವಾಗಿರುವುದು ?

ಈ ವಿಷಯವನ್ನು ನನಗೆ ವಿಸ್ತರಿಸಿ ಹೇಳಬೇಕು ಎಂದು ಬೃಹದ್ಬಲರಾಜನು ವಸಿಷ್ಠರನ್ನು ಪ್ರಶ್ನಿಸುತ್ತ ಮುಂದುವರಿಸಿದನು.

೪-೫. ಎಲೈ ಪೂಜ್ಯನಾದ, ವಸಿಷ್ಠಮಹರ್ಷಿಯೇ, ಈ ಸೂರ್ಯದೇವನ ಪೂಜೆಯನ್ನು ಮಾಡುವ ಮಗಾ ಎಂಬ ಬ್ರಾಹ್ಮಣರು, ಯಾಗಾದಿಶ್ರೌತಕರ್ಮದಲ್ಲಿಯೂ ಆಸಕ್ತರಾಗಿರುವರೆ ? ಅಥವಾ ಕೇವಲ ಪೂಜಾಮಾತ್ರದಲ್ಲಿ ತತ್ಪರರಾಗಿರುವರೇ ? ಇವರಲ್ಲಿರುವ ಉತ್ಕೃಷ್ಟವಾದ ಜ್ಞಾನಸ್ವರೂಪವಾವುದು ? ಇವರಿಗೆ ಜ್ಞೇಯವಾದ ವಸ್ತುವು ಯಾವುದು ? ಇವೆಲ್ಲವನ್ನೂ ನೀನು ನನಗೆ ತಿಳಿಸಬೇಕು ಎಂದು ಬೃಹದ್ಬಲನು ವಸಿಷ್ಠಮಹರ್ಷಿಗಳನ್ನು ಕುರಿತು ಪ್ರಶ್ನೆಮಾಡಿದನು.

೬-೭. ಈ ಸೂರ್ಯಪೂಜಕರಾದ ಮಗಾ ಎಂಬ ಬ್ರಾಹ್ಮಣರು ಮೋಕ್ಷವಾದಿಗಳು. ಇವರು ಕರ್ಮಯೋಗವನ್ನು ಆಶ್ರಯಿಸುವರು. ಇವರು ಸೂರ್ಯದೇವನನ್ನು ಮನೋಹರವಾದ ಹಣ್ಣು ಮತ್ತು ಹೂಗಳಿಂದಲೂ, ಅನ್ನ, ಔಷಧಿ, ಆಜ್ಯಹೋಮ ಹವಿರ್ದಾನ, ಮೊದಲಾದ ವಿಧಿಗಳಿಂದಲೂ ಪೂಜೆಮಾಡುವರು ಅಲ್ಲದೆ ಸೂರ್ಯನನ್ನು

**ಪರಂ ಹೋಮಸ್ಯ ಪಾನಾಚ್ಚ ಪೂತಾತ್ಮಾನೋ ಹ್ಯಕಲ್ಮಷಾಃ ।**
**ವಿಶಂತಿ ಪರಮಾಂ ದಿವ್ಯಾಂ ಭಾಸ್ಕರೀಂ ತೈಜಸೀಂ ಕಲಾಂ ॥ ೮ ॥**

**ಕರ್ಮಣಃ ಸಾಧನೇ ಚೈಕಾ ತನುರಗ್ನೌ ಸ್ಥಿತಾ ತು ಯಾ ।**
**ವಾಯುಮಾರ್ಗೇ ಸ್ಥಿತಾ ವ್ಯೋಮ್ನಿ ದ್ವಿತೀಯಾ ಚ ಪ್ರಕಾಶಿತಾ ॥ ೯ ॥**

**ತತಃ ಪರಂ ತೃತೀಯಾ ತತ್ಸ್ಮೃತಂ ಸೂರ್ಯಸ್ಯ ಮಂಡಲಂ ।**
**ಋಙ್ಮಯಂ ಮಂಡಲಂ ತಚ್ಚ ದಿವ್ಯಂ ಹ್ಯಮರಮವ್ಯಯಂ ॥ ೧೦ ॥**

**ಸ ತಸ್ಯ ಪುರುಷೋ ಮಧ್ಯೇ ಯೋಽಸೌ ಸದಸದಾತ್ಮಕಃ ।**
**ಕ್ಷರಾಕ್ಷರಸ್ತು ವಿಜ್ಞೇಯೋ ಮಹಾಸೂಕ್ಷ್ಮಂ ತಥೈವ ಚ ॥ ೧೧ ॥**

---

ಉದ್ದೇಶಿಸಿ ಮಂತ್ರಪೂರ್ವಕವಾಗಿ ಹೋಮಗಳನ್ನು ಮಾಡಿ ಅದರ ಉತ್ಕೃಷ್ಟವಾದ ಭಾಗವನ್ನು ಪಾನಮಾಡುವರು. ಈರೀತಿ ಮಾಡುವುದರಿಂದ ಇವರು ಪವಿತ್ರವಾದ ಮನಸ್ಸುಳ್ಳವರೂ, ಪಾಪರಹಿತರೂ ಆಗಿ ತೇಜೋರೂಪನಾದ ಸೂರ್ಯಪರಮಾತ್ಮನ ಉತ್ಕೃಷ್ಟವೂ ದಿವ್ಯವೂ ಆದ ಕಲೆಯನ್ನು ಪ್ರವೇಶಿಸುವರು ಅದರಿಂದಲೇ ಅವರು ಸೂರ್ಯನಲ್ಲಿ ಐಕ್ಯರಾಗುವರು.

೯-೧೦. ಕರ್ಮಯೋಗಿಗಳಾದ ಇವರ ಸಾಧನೆಯಲ್ಲಿ ಸೂರ್ಯಪರಮಾತ್ಮನಿಗೆ ಮೂರು ಶರೀರಗಳೇರ್ಪಟ್ಟಿರುವುವು. ಅವುಗಳಲ್ಲಿ ಮೊದಲನೆಯ ಶರೀರವು ಅಗ್ನಿಯಲ್ಲಿರುವುದು. ಎರಡನೆಯದು ವಾಯುಮಾರ್ಗವಾಗಿರುವ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವುದು. ಮೂರನೆಯದು ಸೂರ್ಯಮಂಡಲವೇ ಆಗಿರುವುದು. ಈ ಮಂಡಲವು ಋಗ್ವೇದ ಸ್ವರೂಪವೂ, ನಿತ್ಯವೂ ನಾಶರಹಿತವೂ ಆಗಿರುವುದು.

೧೧-೧೨. ಆ ಸೂರ್ಯಮಂಡಲದ ಮಧ್ಯದಲ್ಲಿ, ಸತ್ ಮತ್ತು ಅಸದ್ರೂಪಿಯೂ, ನಿತ್ಯಾನಿತ್ಯ ಸ್ವರೂಪವುಳ್ಳವನೂ, ಅತ್ಯಂತ ಸೂಕ್ಷ್ಮನೂ, ಕಲಾರಹಿತನೂ, ಮತ್ತೂ ಕಲಾವಿಶಿಷ್ಟನೂ, ಆದ ಸೂರ್ಯಪರಮಾತ್ಮನು ಎರಡು ರೀತಿಯಲ್ಲಿಯೂ

ನಿಷ್ಕಲಃ ಸಕಲಶ್ಚೈವ ದ್ವೈವಿಧ್ಯಂ ತಸ್ಯ ಕಲ್ಪಿತಂ ।
ದ್ರಷ್ಟವ್ಯಃ ಸಕಲಶ್ಚೈವ ಸರ್ವಭೂತವ್ಯವಸ್ಥಿತಃ ॥ ೧೨ ॥

ತೃಣಗುಲ್ಮಲತಾವೃಕ್ಷವ್ಯಗಸಿಂಹಗಜದ್ವಿಜಾನ್ ।
ಸುರದ್ವಿಜಮನುಷ್ಯಾಂಶ್ಚ ಸ್ಥಲಜಾಂಜಲಜಾಂಸ್ತಥಾ ॥ ೧೩ ॥

ವ್ಯಾಪ್ಯ ಸ್ಥಿತಂ ಸ ಸರ್ವತ್ರ ಸರ್ವೇಷಾಮಂತರಾತ್ಮನಿ ।
ಯದಾ ಕಾಲಾತ್ಮಕಶ್ಚೈವ ದ್ವಿತೀಯಾಂ ತನುಮಾಶ್ರಿತಃ ॥ ೧೪ ॥

ನಿಷ್ಕಲಸ್ತು ಸದಾ ಜ್ಞೇಯಃ ಸಂಸ್ಥಿತಸ್ತೈಜಸೀಂ ಕಲಾಂ ।
ಹಿಮಂ ಘರ್ಮಂ ಚ ವರ್ಷಂ ಚ ತ್ರೈಕಾಲ್ಯಂ ಕುರುತೇ ಸದಾ ॥ ೧೫ ॥

ತೃತೀಯಾಂಯಾಂ ತನೌ ತಸ್ಯ ಸಂರಕ್ಷಂಸ್ತತ್ಪರಂ ಪದಂ ।
ದೇವಯಾನಂ ಚ ಪಂಥಾನಂ ಕರ್ಮಯೋಗೇನ ಸಂಸ್ಥಿತಂ ॥ ೧೬ ॥

---

ಕಾಣುವನು. ಹಾಗೆ ಸರ್ವಭೂತಗಳಲ್ಲಿಯೂ ಅಡಗಿರುವ ಪರಮಪುರುಷನು ಆ ಮಂಡಲದಲ್ಲಿ ನೆಲಸಿ ಪ್ರಕಾಶಿಸುತ್ತಿರುವನು.

೧೩-೧೫. ಈ ಮಹಾಪುರುಷನು, ಹುಲ್ಲು, ಪೊದೆ, ಬಳ್ಳಿ, ಮರ, ಜಿಂಕೆ, ಸಿಂಹ, ಆನೆ, ಪಕ್ಷಿಗಳು, ದೇವತೆಗಳು, ಬ್ರಾಹ್ಮಣರು, ಇತರ ಮನುಷ್ಯರು, ಇವರೇ ಮೊದಲಾದ, ಭೂಮಿ ಮತ್ತು ನೀರು ಇವುಗಳಲ್ಲಿ ಹುಟ್ಟಿದ ಎಲ್ಲಾ ಪ್ರಾಣಿಗಳ ಅಂತರಂಗದಲ್ಲಿಯೂ ಅಡಗಿರುವನು.

ಕಾಲಾತ್ಮಕನಾದ ಇವನು ಎರಡನೆಯ ಶರೀರವನ್ನು ಧರಿಸಿದಾಗ ತೇಜೋರೂಪವಾದ ತಲೆಯನ್ನಾಶ್ರಯಿಸಿ, ಕಾಲಕಾಲದಲ್ಲಿ ಹಿಮ, ಬಿಸಿಲು ಮತ್ತು ಮಳೆ ಇವುಗಳನ್ನುಂಟುಮಾಡುವನು.

೧೬-೧೭. ಸೂರ್ಯನ ಮೂರನೆಯ ಶರೀರವೇ, ಸೂರ್ಯಮಂಡಲವು. ಅದರಲ್ಲಿ ಪರಮಾತ್ಮನು ತನ್ನ ತೃತೀಯಾಂಶವನ್ನಿಟ್ಟು ಕಾಪಾಡುತ್ತಿರುವನು. ಈ ಪುಣ್ಯಸ್ಥಾನವು, ಕರ್ಮಯೋಗವನ್ನು ಅಭ್ಯಾಸಮಾಡಿದ ದೇವತೆಗಳ ಸಂಚಾರ ಮಾರ್ಗ

ಆದಿತ್ಯಸಿದ್ಧಾಂತವಿದಃ ಸಾಂಖ್ಯಯೋಗವಿದಶ್ಚ ಯೇ ।
ತೇಽಪಿ ಗಚ್ಛಂತಿ ತತ್ಸ್ಥಾನಂ ಸ ಚ ಮೋಕ್ಷಃ ಪ್ರಕೀರ್ತಿತಃ ॥ ೧೭ ॥

ನಿರ್ದ್ವಂದ್ವೋ ನಿರ್ಮಲಶ್ಚೈವ ತತ್ರ ಗತ್ವಾ ನ ಶೋಚತಿ ।
ವೇದೇಷು ಚ ವದಂತೀಮಂ ತ್ರಯೀಧರ್ಮಸ್ತು ಸಂಸ್ಥಿತಃ ॥ ೧೮ ॥

ಗಾಯತ್ರ್ಯುಕ್ತ ಚತುರ್ವಿಂಶತ್ಯಕ್ಷರಂ ಪರಿಕೀರ್ತಿತಂ ।
ಪಂಚವಿಂಶತಿತತ್ತ್ವಸ್ಥಂ ಧ್ಯಾಯಂತಸ್ತತ್ತ್ವವೇದಿನಃ ॥ ೧೯ ॥

ಓಂಕಾರಸ್ಥಂ ತತಶ್ಚಾಪಿ ಧ್ಯಾಯಂತಿ ವೇದವಾದಿನಃ ।
ಅಕ್ಷರಂ ಚೈವಮೋಂಕಾರಂ ಸಾರ್ಧಮಾತ್ರದ್ವಯೇ ಸ್ಥಿತಂ ॥ ೨೦ ॥

---

ವಾಗಿರುವುದು. ಸೂರ್ಯದೇವನ ನಿಜತತ್ತ್ವವನ್ನು ತಿಳಿದವರೂ, ಸಾಂಖ್ಯಯೋಗ ನಿಪುಣರೂ ಆದವರು ತಮ್ಮ ತಪಶ್ಶಕ್ತಿಯಿಂದ ಈ ಸ್ಥಾನವನ್ನು ಪಡೆಯುವರು. ಇದೇ ಮೋಕ್ಷವೆಂದು ಪ್ರಸಿದ್ಧಿಪಡೆದಿರುವುದು.

೧೮. ಏಕಾಕಿಯೂ, ಪರಿಶುದ್ಧನೂ ಆದ ಪುರುಷನು ಆ ಸ್ಥಾನವನ್ನು ಪಡೆಯುವನು. ಅನಂತರ ಅವನು ಯಾವ ದುಃಖವನ್ನೂ ಪಡೆಯುವುದಿಲ್ಲ. ವೇದಗಳೂ ಈ ವಿಷಯಗಳನ್ನೇ ತಿಳಿಸುವುವು. ವೇದಧರ್ಮಗಳು ಇಲ್ಲಿಯೇ ನೆಲಸಿರುವುವು.

೧೯. ಗಾಯತ್ರೀ ಮಂತ್ರವು ಇಪ್ಪತ್ತುನಾಲ್ಕು ಅಕ್ಷರಗಳುಳ್ಳದ್ದು. ತತ್ತ್ವ ಜ್ಞಾನಿಗಳು, ಇಪ್ಪತ್ತೈದು ತತ್ತ್ವಗಳಲ್ಲಿ ಅಡಕವಾಗಿರುವ ಈ ಗಾಯತ್ರೀ ಮಂತ್ರ ವನ್ನು ಧ್ಯಾನಮಾಡುವರು.

೨೦. ಓ, ಎಂಬ ಅಕ್ಷರವು ಎರಡೂವರೆ ಮಾತ್ರೆಗಳ ಕಾಲದಲ್ಲಿ ಉಚ್ಚರಿಸುವ ವರ್ಣವಾಗಿರುವುದು. ವ್ಯಂಜನವಾದ ಮಕಾರವು ಅರ್ಧಮಾತ್ರೆಯ ಕಾಲವುಳ್ಳದ್ದು ಎಂದು ಹೇಳುವರು.

ವದಂತಿ ಚಾರ್ಧಮಾತ್ರಸ್ಥಮಕಾರಂ ವ್ಯಂಜನಾತ್ಮಕಂ ।
ಧ್ಯಾಯಂತಿ ಚ ಮಕಾರಂ ಯೇ ಜ್ಞಾನಂ ತೇಷಾಂ ಮಹಾತ್ಮಕಂ ॥ ೨೧ ॥
ಮಕಾರಧ್ಯಾನಯೋಗಾಚ್ಚ ಮಯಾ ಹ್ಯೇತೇ ಪ್ರಕೀರ್ತಿತಾಃ ॥ ೨೨ ॥

ಧೂಪಮಾಲ್ಯೈರ್ಜಪೈಶ್ಚಾಽಪಿ ಹ್ಯುಪಚಾರೈಸ್ತಥೈವ ಚ ।
ಯೇ ಯಜಂತಿ ಸಹಸ್ರಾಂಶುಂ ತೇನ ತೇ ಯಾಜಕಾಃ ಸ್ಮೃತಾಃ ॥ ೨೩ ॥

ಇತಿ ಶ್ರೀ ಸಾಂಬಪುರಾಣೇ ಸಪ್ತವಿಂಶೋಽಧ್ಯಾಯಃ.

---

೨೧-೨೨. ಮಕಾರವನ್ನು ಧ್ಯಾನಮಾಡುವವರು ನನ್ನ ಸ್ವರೂಪವನ್ನು ತಿಳಿದು ಜ್ಞಾನಿಗಳಾಗುವರು. ಪವರ್ಗಾಂತ್ಯನಾದ ಮಕಾರವು ಜ್ಞಾನಬೋಧಕವಾಗಿರುವುದು. ಅದರ ಸ್ವರೂಪವನ್ನು ಸರಿಯಾಗಿ ತಿಳಿದುಕೊಂಡವರು ಜ್ಞಾನಿಯಾಗುವರೆಂದು ಹೇಳಬಹುದು.

ನಾನು ಮಕಾರವನ್ನು ಧ್ಯಾನಮಾಡಿದುದರಿಂದಲೇ ಇವೆಲ್ಲವನ್ನೂ ನಿನಗೆ ಹೇಳಿದೆನು.

೨೩. ಧೂಪ, ಹೂವು ಮತ್ತು ಜಪಗಳು ಅಲ್ಲದೇ ಇತರ ನೈವೇದ್ಯಾದ್ಯುಪಚಾರಗಳಿಂದ ಸೂರ್ಯದೇವನನ್ನು (ಸಹಸ್ರ ಕಿರಣನನ್ನು) ಪೂಜಿಸಿರುವುದರಿಂದ ಈ ಮಗಾ ಎಂಬ ಬ್ರಾಹ್ಮಣರಿಗೆ ಯಾಚಕರೆಂದು ಹೆಸರು ಬಂದಿರುವುದು ಎಂದು ವಸಿಷ್ಠರು ಬೃಹದ್ಬಲರಾಜನಿಗೆ ಹೇಳಿದರು.

ಇಲ್ಲಿಗೆ ಸಾಂಬಪುರಾಣದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟಾವಿಂಶೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ಇಮಾಂ ಜ್ಞಾನೋಪಲಬ್ಧಿಂ ಚ ಕಥ್ಯಮಾನಂ ನಿಬೋಧ ಮೇ ।
ಅಸ್ಥಿಸ್ಥೂಣಂ ಸ್ನಾಯುಯುತಂ ಮಾಂಸಶೋಣಿತಲೇಪನಂ ॥ ೧ ॥

ಚರ್ಮಾವನದ್ಧಂ ದುರ್ಗಂಧಿಪೂರ್ಣಂಮೂತ್ರಪುರೀಶಯೋಃ ।
ಜರಾಶೋಕಸಮಾವಿಷ್ಟಂ ರೋಗಾಯತನಮಾತುರಂ ॥ ೨ ॥

---

## ಇಪ್ಪತ್ತೆಂಟನೆಯ ಅಧ್ಯಾಯ.

೧-೨. ಎಲೈ ಬೃಹದ್ಬಲರಾಜನೆ, ಜ್ಞಾನಪ್ರಾಪ್ತಿಯಾಗುವ ರೀತಿಯನ್ನು ತಿಳಿಸುವೆನು ಕೇಳು. ಈ ನಮ್ಮ ಶರೀರವು, ಕಡ್ಡಿಯಂತಿರುವ ಮೂಳೆಗಳಿಂದ ಕೂಡಿದುದು. ನರಕಗಳಿಂದ ಯುಕ್ತವಾದುದು. ರಕ್ತ ಮತ್ತು ಮಾಂಸಗಳು ಶರೀರ ದಲ್ಲೆಲ್ಲಾ ತುಂಬಿರುವುವು. ಸುತ್ತಲೂ ಇವುಗಳೆಲ್ಲಾ ಕಾಣದಂತೆ ಚರ್ಮವೆಂಬ ಹೊದಿಕೆಯು ಮುಚ್ಚಿಕೊಂಡಿದೆ. ದುರ್ಗಂಧ ಪದಾರ್ಥಗಳಿಂದ ನೆಲೆಯಾಗಿರುವುದು. ಪುರೀಷ (ಮಲ) ಮತ್ತು ಮೂತ್ರಗಳು ಸದಾ ಇದರಲ್ಲಿ ನೆಲಸಿರುವುವು. ಈ ನಮ್ಮ ಶರೀರವು, ಮುಪ್ಪು ಮತ್ತು ದುಃಖವೇ ಮೊದಲಾದವುಗಳಿಗೆ ಆಶ್ರಯವಾಗಿರುವುದು. ರೋಗಗಳಿಗೆ ತವರುಮನೆಯಂತಿರುವುದು. ರಜೋಗುಣಯುಕ್ತವಾಗಿ ಅಶಾಶ್ವತವಾದ ಈ ಶರೀರವು ಭೂತಾದಿಗಳಿಗೆ (ಪಿಶಾಚಿ ಮೊದಲಾದುವುಗಳಿಗೆ) ಮನೆಯಾಗಿರುವುದು. ಜ್ಞಾನಾಪೇಕ್ಷೆಯುಳ್ಳವನು, ಇಂತಹ ಶರೀರದಲ್ಲಿ ಅಭಿಮಾನವನ್ನು ಮೊದಲು ಮಾರನಾಡಬೇಕು.

ರಜಸ್ವಲಮನಿತ್ಯಂ ಚ ಭೂತಾಽಽವಾಸಮಿದಂ ತ್ಯಜೇತ್ ।
ಕೃಪಾಲುತ್ವಂ ಕ್ಷಮಾ ಸತ್ಯಾರ್ಜವತ್ವಮಥ ಶೌಚತಾ ॥ ೩ ॥
ಶಮತಾ ಸರ್ವಭೂತೇಷು ಏತನ್ಮುಕ್ತಸ್ಯ ಲಕ್ಷಣಂ ॥ ೪ ॥

ಉಪಾಯಂ ಚಿಂತಯೋಗಸ್ಯ ಧಿಯಾ ಧೀರಃ ಸಮಾಹಿತಃ ।
ಪ್ರಮಾಥಿತಾಚಲೇನಾಽಪಿ ಮನಸಾ ಸಂಯತೇನ ತು ॥ ೫ ॥

ಬುದ್ಧೀಂದ್ರಿಯಾಣಿ ಸಂಯಮ್ಯ ಶಕುಂತಾನಿವ ಪಂಜರೇ ।
ಇಂದ್ರಿಯೈರ್ನಿಯತೈರ್ದೇಹೀ ಧಾರಣಾಭಿಶ್ಚ ತೃಪ್ಯತಿ ॥ ೬ ॥

ಪ್ರಾಣಾಯಾಮೈರ್ದಹೇದ್ದೋಷಂ ಧಾರಣಾಭಿಶ್ಚ ದುಷ್ಕೃತಂ ।

---

೩-೪. ಸಕಲಭೂತಗಳಲ್ಲಿ ದಯೆತೋರಿಸುವುದೂ, ತೊಂದರೆಮಾಡಿದರೂ, ಅವರನ್ನು ಕ್ಷಮಿಸುವುದೂ, ಸತ್ಯದಿಂದಲೂ, ಸನ್ಮಾರ್ಗದಿಂದಲೂ ನಡೆಯುವುದೂ, ಶೌಚಕರ್ಮಗಳನ್ನು ಆಚರಿಸುವುದೂ, ಎಲ್ಲಾ ಪ್ರಾಣಿಗಳಲ್ಲಿಯೂ ಶಾಂತಿಯಿಂದ ಕೂಡಿರುವುದೂ, ಇವೆಲ್ಲವೂ ಮುಕ್ತನಾಗುವ ಪುರುಷನ ಲಕ್ಷಣವು.

ಎಳ್ಳಿನಲ್ಲಿ ಎಣ್ಣೆಯೂ, ಹಾಲಿನಲ್ಲಿ ಮೊಸರೂ, ಕಟ್ಟಿಗೆಗಳಲ್ಲಿ ಅಗ್ನಿ ಸಮೂಹವು ಅಪ್ರಕಾರರೂಪದಿಂದ ಇರುವಂತೆ, ಮುಕ್ತನಾಗುವ ಪುರುಷನಲ್ಲಿ ದಯಾ, ಶೌಚಾದಿ ಗುಣಗಳು ಅಡಗಿರುವುವು.

೫-೬. ಜಿತೇಂದ್ರಿಯನಾದ ಪುರುಷನು ಈರೀತಿ ತನ್ನ ಸ್ವರೂಪವನ್ನು ತಿಳಿದು ಶಾಂತವಾದ ಮನಸ್ಸಿನಿಂದ, ಬಲಿಷ್ಠವೂ, ಚಂಚಲವೂ, ಆದ ಮನಸ್ಸನ್ನು ಮೊದಲು ಬಿಗಿಹಿಡಿದು, ಮನೋನಿಗ್ರಹದಿಂದ ಬುದ್ಧಿ ಮತ್ತು ಪಂಚೇಂದ್ರಿಯಗಳನ್ನೂ ನಿಗ್ರಹಿಸಿ ಪಂಜರದಲ್ಲಿ ಹಕ್ಕಿಯನ್ನು ಬಂಧಿಸಿದಂತೆ ಮನಸ್ಸನ್ನು ಸ್ಥಿರಪಡಿಸಬೇಕು.

ಇಂದ್ರಿಯ ನಿಗ್ರಹವನ್ನು ಪಡೆದಮೇಲೆ ಪ್ರಾಣಿಯು ಧಾರಣಮೊದಲಾದ ಯೋಗಸಾಧನಗಳಿಂದ ಸಂತೋಷಹೊಂದುವನು.

೭. ಮನುಷ್ಯನು, ಪ್ರಾಣಾಯಾಮಗಳಿಂದ ಶರೀರದ ದೋಷಗಳನ್ನು (ಅಂದರೆ ರೋಗಾದ್ಯುಪದ್ರವ ಮೊದಲಾದವುಗಳನ್ನು) ಸುಡಬಹುದು. ಧಾರಣೆಯಿಂದ ಪಾಪಗಳನ್ನು ಧ್ವಂಸಮಾಡಬಹುದು. ಧಾರಣೆಯೆಂದರೆ ಶುಭವಾದ ಆಶ್ರಯವಾದ

ಪ್ರತ್ಯಾಹಾರೇಣ ವಿಷಯಾನ್ ಧ್ಯಾನೇನಾಽನೀಶ್ವರಾನ್ ಗುಣಾನ್ ॥ ೭ ॥
ಯಥಾ ಪರ್ವತಧಾತೂನಾಂ ದೋಷಾ ದಹ್ಯಂತಿ ಧಾಮ್ಯತಾಂ ।
ತಥೇಂದ್ರಿಯಕೃತಾ ದೋಷಾ ದಹ್ಯಂತೇ ಚಿತ್ತನಿಗ್ರಹಾತ್ ॥ ೮ ॥
ಚಿತ್ತಂ ಚಿತ್ತೇನ ಸಂಶೋಧ್ಯ ಮನಸ್ತು ಮನಸೈವ ತು ।
ಭಾವಾನ್ ಭಾವೇನ ಸಂಶೋಧ್ಯ ಬುದ್ಧ್ಯಾ ಬುದ್ಧ್ಯಾ ವಿಶೋಧಯೇತ್ ॥
ಚಿತ್ತಸ್ಯ ಹಿ ಪ್ರಸಾದೇನ ಹಂತಿ ಕರ್ಮ ಶುಭಾಽಶುಭಂ ।
ಶುಭಾಽಶುಭವಿನಿರ್ಮುಕ್ತೋ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥ ೧೦ ॥

---

ನಾಭಿಚಕ್ರ, ಹೃದಯ, ಜಿಹ್ವಾಗ್ರ, ನಾಸಾಗ್ರ, ಶಿರಸ್ಸು ಮೊದಲಾದ ಶರೀರದವಯವಗಳಲ್ಲಿ ಅಥವಾ ಮಂಗಳಕರವಾದ ವಸ್ತುವಿನಲ್ಲಿ ಸ್ಥಿರವಾಗಿ ಚಿತ್ತವನ್ನು ನಿಲ್ಲಿಸಿರುವುದು. ಪ್ರತ್ಯಾಹಾರದಿಂದ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ರೂಪವಾದ ವಿಷಯಗಳನ್ನೂ ಧ್ಯಾನಯೋಗದಿಂದ ಪರಮಾತ್ಮನ ಸಂಬಂಧವಲ್ಲದ ಇತರ ಗುಣಗಳನ್ನು ದೂರಮಾಡಬಹುದು. ಪ್ರತ್ಯಾಹಾರವೆಂದರೆ ಚಕ್ಷುರಾದೀಂದ್ರಿಯಗಳನ್ನೂ ಅವುಗಳ ವಿಷಯಗಳಿಂದ ಹಿಂದಿರುಗಿಸಿ ಅಂತಃಕರಣಕ್ಕೆ ಅನುಕೂಲವಾಗಿರಿಸುವುದು.

೮. ಪರ್ವತದಲ್ಲಿ ಬೆಳೆಯುವ ಗೈರಿಕಾದಿ ಧಾತುಗಳ ದೋಷಗಳು, ಅವುಗಳನ್ನು ತಂದು ಅರೆದು ರೂಪಾಂತರ ಹೊಂದಿಸುವುದರಿಂದ ಬದಲಾವಣೆಯಾಗುವಂತೆ ಮನಸ್ಸನ್ನು ಬಿಗಿಹಿಡಿಯುವುದರಿಂದ ಇಂದ್ರಿಯಗಳ ದೋಷವೆಲ್ಲವೂ ನಾಶವಾಗುವುವು.

೯. ಮನಸ್ಸನ್ನು ಮನಸ್ಸಿನಿಂದಲೂ, ಹೃದಯವನ್ನು ಹೃದಯದಿಂದಲೂ ಭಾವಗಳನ್ನು ಭಾವಗಳಿಂದಲೂ, ಬುದ್ಧಿಯಿಂದ ಬುದ್ಧಿಯನ್ನೂ ಸಹ ಚೆನ್ನಾಗಿ ಶುದ್ಧಿ ಮಾಡಬೇಕು. ಅಂದರೆ, ಆಯಾ ಇಂದ್ರಿಯಗಳ ವಿಷಯಗಳಿಂದಲೇ ಆಯಾಯಾ ಇಂದ್ರಿಯಗಳ ದುಷ್ಪರಿಣಾಮವನ್ನು ತಿಳಿದು ಕ್ರಮಕ್ರಮವಾಗಿ ದೂರಮಾಡುತ್ತಿರಬೇಕು.

೧೦. ಶುದ್ಧವಾದ ಮನಸ್ಸಿನಿಂದ ಪುಣ್ಯಪಾಪರೂಪವಾದ ಕರ್ಮಗಳನ್ನು ನಾಶಪಡಿಸಿ, ಕಡೆಗೆ ಪುಣ್ಯಪಾಪಕರ್ಮಗಳಿಂದ ದೂರನಾಗಿ ಸುಖದುಃಖಾದಿ ದ್ವಂದ್ವರಹಿತನೂ, ("ದ್ವಿತೀಯಾದ್ವೈ ಭವಂಭವತಿ' ಎಂಬ ಶ್ರುತಿಯಿಂದ ಭಯರಹಿತನೂ) ಪರಿಗ್ರಹ ಶೂನ್ಯನೂ, ಮಮತೆಯನ್ನು ತೊರೆದವನೂ, ಅಹಂಕಾರವನ್ನು ಬಿಟ್ಟವನೂ ಆಗಿ, ಸಿದ್ಧಪುರುಷನೆನಿಸಿ, ಅನಂತರ ಉತ್ತಮವಾದ ಗತಿಯನ್ನು ಹೊಂದುವನು.

ನಿರ್ಮಾನೋ ನಿರಹಂಕಾರಸ್ತತೋ ಯಾತಿ ಪರಾಂ ಗತಿಂ ।
ಪೂರ್ವಾಹ್ಣೇ ಲೋಹಿತಂ ರೂಪಂ ಋಙ್ಮಯಂ ಪ್ರಥಮಂ ಸ್ಮೃತಂ ॥೧೧॥

ಯಜುರ್ಮಯಂ ದ್ವಿತೀಯಂ ತು ಶುಕ್ಲಂ ಮಾಧ್ಯಾಹ್ನಿಕಂ ಸ್ಮೃತಂ ।
ಕೃಷ್ಣಂ ತೃತೀಯಂ ಸಾಯಾಹ್ನೇ ಸಾಮ್ನೋ ರೂಪಂ ತತಃ ಸ್ಮೃತಂ ॥೧೨॥

ಪ್ರಥಮಂ ರಾಜಸಂ ರೂಪಂ ದ್ವಿತೀಯಂ ಸತ್ವಸಂಜ್ಞಿತಂ ॥ ೧೩ ॥

ತೃತೀಯಂ ತಾಮಸಂ ರೂಪಂ ತ್ರೈಗುಣ್ಯಂ ತಚ್ಚ ಸಂಜ್ಞಿತಂ ।
ತ್ರಯಾಣಾಂ ವ್ಯತಿರೇಕೇಣ ಚತುರ್ಥಂ ಸೂರ್ಯಮಂಡಲಂ ॥ ೧೪ ॥

ಜ್ಯೋತಿಃ ಪ್ರಕಾಶಕಂ ಸೂಕ್ಷ್ಮಂ ಪ್ರೋಕ್ತಂ ತಚ್ಚ ನಿರಂಜನಂ ।
ತ್ರೈವಿಧ್ಯಸಿದ್ಧಾಂತರತಾಃ ಸೂರ್ಯಸಿದ್ಧಾಂತವೇದಿನಃ ॥ ೧೫ ॥

---

೧೧-೧೨. ಸೂರ್ಯನು ಪೂರ್ವಾಹ್ಣದಲ್ಲಿ ಕೆಂಪುಬಣ್ಣವುಳ್ಳವನೂ, ಋಗ್ವೇದ ಸ್ವರೂಪನೂ, ಆಗಿ ಮೊದಲನೆಯ ರೂಪವನ್ನು ತಾಳುವನು. ಎರಡನೆಯ ರೂಪವು ಶುಭ್ರವರ್ಣವುಳ್ಳದ್ದು. ಇದು ಮಧ್ಯಾಹ್ನದಲ್ಲಿ ಯಜುರ್ವೇದ ರೂಪವಾಗಿರುವುದು. ಮೂರನೆಯ ರೂಪವು ಕಪ್ಪುಬಣ್ಣವುಳ್ಳದ್ದು. ಇದು ಸಾಯಂಕಾಲದಲ್ಲಿ ತೋರುವುದು. ಅನಂತರ ರಾತ್ರಿಯಲ್ಲಿ ಸಾಮವೇದ ಸ್ವರೂಪನಾಗಿರುವನು.

೧೩-೧೪. ಸೂರ್ಯನ ಮೊದಲನೆಯ ರೂಪವು ರಜೋಗುಣದಿಂದ ಕೂಡಿದುದು. ಎರಡನೆಯದು ಸತ್ವಗುಣಯುಕ್ತವಾದುದು. ಮೂರನೆಯದು ತಾಮಸ ರೂಪವು. ಈ ರೀತಿ ಸತ್ವರಜಸ್ತಮೋಗುಣಗಳಿಂದ ಸೂರ್ಯನ ರೂಪವು ಮೂರು ವಿಧವಾಗಿರುವುದು. ಇವು ಮೂರಲ್ಲದೆ ಸಕಲಗುಣಭರಿತವಾದ ನಾಲ್ಕನೆಯದೇ ಸೂರ್ಯಮಂಡಲ ನಿಜಸ್ವರೂಪವು.

೧೫-೨೦. ತೇಜಸ್ಸಿನಿಂದ ಪ್ರಕಾಶಿಸುತ್ತಾ ಸೂಕ್ಷ್ಮನೂ, ನಿರ್ಲಿಪ್ತನೂ ಆದ ಸೂರ್ಯದೇವನ ಸ್ವರೂಪವನ್ನು ಪ್ರತ್ಯಕ್ಷ, ಅನುಮಾನ, ಶಬ್ದ ರೂಪವಾದ ಮೂರು ಪ್ರಮಾಣಗಳಿಂದ ತಿಳಿದು ಸೂರ್ಯ ತತ್ವಜ್ಞರು, ಓಂಕಾರವೇ ಮೊದಲಾಗಿಯುಳ್ಳ

ಓಂಕಾರಪ್ರಣವೈರ್ಯುಕ್ತಾ ಧ್ಯಾನಸಿರ್ಧೂತಕಲ್ಮಷಾಃ ।
ಸ್ಥಿತಾಃ ಪದ್ಮಾಸನೇ ಧೀರಾ ನಾಭಿಸನ್ಯಸ್ತಪಾಣಯಃ ॥ ೧೬ ॥

ಸುಷುಮ್ನಾನಾಭಿಮಾರ್ಗಂ ಚ ಕುಂಭರೇಚಕಪೂರಕೈಃ ।
ತ್ರಿಭಿಃ ಸಂಶೋಧ್ಯ ತಾನ್ ಪಂಚಮರುತೋ ದೇಹಮಧ್ಯಗಾನ್ ॥ ೧೭ ॥

ಪದಾಂಗುಷ್ಠೇನ ಸಂಚಿಂತ್ಯ ಮೂರ್ಧ್ವಮುನ್ನಮಯನ್ ಕ್ರಮಾತ್ ।
ನಾಭಿಪ್ರದೇಶೇ ದೃಷ್ಟ್ವಾ ಚ ದೇವಮಗ್ನಿಮನಿಂಧನಂ ॥ ೧೮ ॥

ಸೋಮಂ ಚ ಹೃದಯೇ ದೃಷ್ಟ್ವಾ ಮೂರ್ಧ್ನಿ ಚಾಗ್ನಿಶಿಖಾಂ ಪುನಃ ।
ನಾತರಶ್ಮಿಮಿವಾಸಹ್ಯಂ ತಂ ಭಿತ್ವಾಽಽದಿತ್ಯಮಂಡಲಂ ॥ ೧೯ ॥

ತತಃ ಪರಂ ತು ಗಚ್ಛೇತ ಯೋಗಸ್ಥಃ ಸೂರ್ಯಮಂಡಲಂ ।
ತತ್ರ ಗತ್ವಾ ನ ಶೋಚಂತಿ ತತ್ಸಾರಂ ಪರಮಂ ಪದಂ ॥ ೨೦ ॥

---

ಪ್ರಾಣಾಯಾಮಗಳನ್ನು ಮಾಡುತ್ತಾ ಧ್ಯಾನಾಸಕ್ತರಾಗಿ ಅದರಿಂದ ಪಾಪಗಳನ್ನು ಕಳೆದುಕೊಳ್ಳುವರು. ಹಾಗೆಯೇ ಯೋಗಮಾರ್ಗನಿರತರಾಗಿ ಪದ್ಮಾಸನದಲ್ಲಿ ಕುಳಿತು, ನಾಭಿಗತವಾದ ಹಸ್ತವುಳ್ಳವನಾಗಿ, ರೇಚಕ ಮತ್ತು ಪೂರಕ, ಕುಂಭಕಗಳಿಂದ ಪ್ರಾಣಾಯಾಮ ವಿಧಿಗಳನ್ನು ಅನುಸರಿಸಿ. ಶರೀರದಲ್ಲಿರುವ ಪ್ರಾಣ, ಅಪಾನ, ವ್ಯಾನ ಉದಾನ, ಸಮಾನ, ಎಂಬ ಐದು ವಾಯುಗಳನ್ನು ಶುದ್ಧಿಮಾಡುವರು.

ಅನಂತರ ಕಾಲಿನ ಅಂಗುಷ್ಠದಿಂದ ನಾಭಿ ಪರ್ಯಂತವಾಗಿ ಮೇಲಕ್ಕೆ ಕ್ರಮವಾಗಿ ಪ್ರಾಣಾಯಾಮ ವಿಧಿಯಿಂದ, ಶರೀರದ ನಾಭಿಸ್ಥಾನದಲ್ಲಿ ಅಗ್ನಿಯನ್ನೂ ಹೃದಯದಲ್ಲಿ ಚಂದ್ರನನ್ನೂ, ತಲೆಯಲ್ಲಿ ಅಗ್ನಿಜ್ವಾಲೆಯನ್ನೂ ನೋಡಿ, ಅನಂತರ ಪಂಚವಾಯುಗಳಿಂದಲೂ ತಲೆಯನ್ನು ಭೇದಿಸಿ, ಹಾಗೆಯೇ ಸೂರ್ಯಮಂಡಲವನ್ನು ಸೇರುವರು. ಹೀಗೆ ಯೋಗಮಾರ್ಗದಿಂದ ಆ ಸೂರ್ಯಮಂಡಲವನ್ನು ಸೇರಿದಮೇಲೆ ಯಾವದುಃಖಕ್ಕೂ ಅವರು ಪಾತ್ರರಾಗಲಾರರು. ಇದೇ ಸೂರ್ಯನ ಉತ್ಕೃಷ್ಟವಾದ ಸ್ಥಾನ.

ಪ್ರಥಮಂ ಹೃದಯಂ ಸ್ಥಾನಂ ದ್ವಿತೀಯಂ ಚಾಗ್ನಿಸಂಸ್ಥಿತಂ ।
ತೃತೀಯಂ ತಾಪಸಂ ಸ್ವಸ್ಥಂ ಚತುರ್ಥಂ ಸೂರ್ಯಮಂಡಲಂ ॥ ೨೧ ॥

ಸ್ಥಾನಂ ಚತುರ್ಥಂ ಪರಮಾತ್ಮನಸ್ತನೋ ।
ಭಾರ್ನೋಃ ಸುರೇಶಸ್ಯ ವದಂತಿ ತಜ್ಞಾಃ ॥
ಸ್ಥಾನಂ ದ್ವಿತೀಯಂ ಪರಮಾತ್ಮನಸ್ತನೋಃ ।
ಭಾನೋಃ ಸುರೇಶಸ್ಯ ವದಂತಿ ತಜ್‌ಜ್ಞಾಃ ॥ ೨೨ ॥

ಜ್ಞೇಯಶ್ಚ ಮೋಕ್ಷಶ್ಚ ನೃಣಾಂ ಸ ಏವ ।
ಸಂಸಾರವಿಚ್ಛಿನ್ನಕರಂ ಪದಂ ತತ್ ॥
ಇದಂ ತ್ವೃಷೀಣಾಂ ಚರಿತಂ ಮಯಾ ತೇ ।
ಪ್ರಖ್ಯಾಪಿತಂ ಯಾಜಕಶಾಸ್ತ್ರಸಂಗಾತ್ ॥
ಜ್ಞಾತ್ವಾ ತು ಯಂ ಮೋಕ್ಷವಿದೋ ಭವಂತಿ ।
ಸಿದ್ಧಾಶ್ಚ ತತ್ಸ್ಥಾನಮವಾಪ್ನುವಂತಿ ॥ ೨೩ ॥

---

೨೧. ಸೂರ್ಯದೇವನಿಗೆ, ಹೃದಯವೇ ಮೊದಲನೆಯ ಸ್ಥಾನವಾಗಿರುವುದು. ಎರಡನೆಯದು ಅಗ್ನಿಯಲ್ಲಿರುವುದು. ಮೂರನೆಯ ಸ್ಥಾನವು ತಾಪವನ್ನುಂಟು ಮಾಡುತ್ತ ಸ್ವರ್ಗದಲ್ಲಿರುವುದು. ನಾಲ್ಕನೆಯದು ಸೂರ್ಯಮಂಡಲವಾಗಿರುವುದು.

೨೨. ಸೂರ್ಯನ ತತ್ತ್ವವನ್ನು ತಿಳಿದಪಂಡಿತರು, ಸೂರ್ಯಪರಮಾತ್ಮನ ನಾಲ್ಕನೆಯ ಸ್ಥಾನವೇ ಸೂರ್ಯಮಂಡಲವೆನ್ನುವರು. ಕೆಲವರು ವಿದ್ವಾಂಸರು ದೇವತೆಗಳಿಗೆ ಒಡೆಯನಾದ ಆ ಸೂರ್ಯಪರಮಾತ್ಮನು ಎರಡನೆಯ ಸ್ಥಾನವಾದ ಅಗ್ನಿದೇವನಲ್ಲಿ ಇರುವನೆಂದು ಹೇಳುವರು. ಒಟ್ಟಿನಲ್ಲಿ ಸೂರ್ಯಪರಮಾತ್ಮನು ಎರಡು ಸ್ಥಾನಗಳಲ್ಲಿಯೂ ನೆಲಸಿರುವನೆಂದು ತಿಳಿಯಬೇಕು.

೨೩. ಜ್ಞೇಯಪದಾರ್ಥವೂ, ಮೋಕ್ಷವೂ ಮನುಷ್ಯರಿಗೆ ಸೂರ್ಯನೇ ಆಗಿರುವನು. ಈ ಸೂರ್ಯಮಂಡಲವು, ಸಂಸಾರಬಂಧನವನ್ನು ಹೋಗಲಾಡಿಸುವ ಸ್ಥಾನವಾಗಿರುವುದು. ಎಲೈ ಬೃಹದ್ಬಲರಾಜನೆ, ಯಾಜಕರ ಶಾಸ್ತ್ರಪ್ರಕ್ರಿಯೆಯನ್ನು ತಿಳಿಸುವ ನೆಪದಿಂದ ನಾನು ನಿನಗೆ ಪ್ರಸಿದ್ಧರಾದ ಋಷಿಗಳ ಚರಿತ್ರೆಯನ್ನು ತಿಳಿಸಿರುವೆನು. ಇದನ್ನು ತಿಳಿದವರು ಸಿದ್ಧರಾಗಿ ಮೋಕ್ಷವನ್ನು ಹೊಂದುವರು.

ಇದಮಮೃತಸಮಂ ಪರಸ್ಯ ವೇದ್ಯಂ ।
ಕಿರಣಸಹಸ್ರಭೃತೋ ಹಿತಂ ಜನಾನಾಂ ॥
ಋಷಿಚರಿತಮವೇಕ್ಷ್ಯ ತತ್ತ್ವಸಾರಂ ।
ವ್ಯಪಗತಮೋಹಧಿಯಃ ಪ್ರಯಾಂತಿ ಮೋಕ್ಷಂ ॥ ೨೪ ॥

ಮಹತ್ಪ್ರೋಕ್ತಮಿದಂ ಜ್ಞಾನಂ ದೇಯಂ ಶ್ರದ್ಧಾವತಾಂ ನೃಣಾಂ ।
ನಾಸ್ತಿಕಾನಾಮಬುದ್ಧೀನಾಂ ನ ದೇಯಂ ಭೂತಿಮಿಚ್ಛತಾ ॥ ೨೪ ॥

ಇತಿ ಶ್ರೀ ಸಾಂಬಪುರಾಣೇ ಮೋಕ್ಷಜ್ಞಾನಂ ನಾಮ
ಅಷ್ಟವಿಂಶೋಽಧ್ಯಾಯಃ.

---

೨೪. ಅಮೃತಕ್ಕೆ ಸಮಾನವಾದುದೂ, ಅವಶ್ಯವಾಗಿ ಪ್ರತಿಯೊಬ್ಬರಿಂದಲೂ ತಿಳಿಯಬೇಕಾದುದೂ, ಜನಗಳಿಗೆ ಹಿತವನ್ನುಂಟುಮಾಡುವುದೂ ಆದ ಪರಮಪುರುಷನಾದ ಸಹಸ್ರಕಿರಣನ ಪ್ರಾಪ್ತಿರೂಪವಾದ ತತ್ತ್ವವನ್ನರಿತ ಋಷಿಗಳ ಚರಿತ್ರೆಯನ್ನು ತಿಳಿದು ನಡೆಯುವ ಜನರು ತಮ್ಮ ಅಜ್ಞಾನವನ್ನೆಲ್ಲಾ ಕಳೆದುಕೊಂಡು ಸ್ಥಿರವಾದ ಮೋಕ್ಷವನ್ನು ಪಡೆಯುವರು.

೨೫. ಅಯ್ಯಾ ಬೃಹದ್ಬಲನೆ, ಈಗ ನಾನು ಹೇಳಿದ ಮಹಾಜ್ಞಾನವನ್ನು ಶ್ರದ್ಧೆಯಿಂದ ತಿಳಿಯಬೇಕು. ಅಲ್ಲದೆ ಅದರಂತೆಯೇ ಆಚರಣೆ ಮಾಡುವ ಮನುಷ್ಯರಿಗೆ ಮಾತ್ರ ಈ ವಿಷಯವನ್ನು ಉಪದೇಶಿಸಬೇಕು. ದ್ರವ್ಯಾಸೆಯಿಂದ ದಡ್ಡರೂ ನಾಸ್ತಿಕರೂ ಆಗಿರುವವರಿಗೆ ಮಾತ್ರ ಎಂದಿಗೂ ಉಪದೇಶಿಸಬಾರದು ಎಂದು ವಸಿಷ್ಠಮಹರ್ಷಿಗಳು ಬೃಹದ್ಬಲನಿಗೆ ಉಪದೇಶಿಸಿದರು.

ಇಲ್ಲಿಗೆ ಮೋಕ್ಷೋಪಾಯವನ್ನು ತಿಳಿಸುವ ಇಪ್ಪತ್ತೆಂಟನೆಯ
ಅಧ್ಯಾಯವು ಮುಗಿದುದು

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕೋನ ತ್ರಿಂಶತಿತಮೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಪ್ರತಿಮಾಲಕ್ಷಣಂ ಕ್ರಮಾತ್ ।
ಯಥೈವ ನಾರದೇನೋಕ್ತಂ ಸಾಂಬಾನುಗ್ರಹಕಾರಿಣಾ ॥ ೧ ॥

ನ ಪುರಾ ಪ್ರತಿಮಾ ಹ್ಯಾಸೀತ್ ಪೂಜ್ಯತೇ ಮಂಡಲೇ ರವಿಃ ।
ಯಥೈತನ್ಮಂಡಲಂ ವ್ಯೋಮ್ನಿ ಸ್ಥೀಯತೇ ಸವಿತುಸ್ತದಾ ॥ ೨ ॥

ಏವಮೇವ ಪುರಾ ಭಕ್ತ್ಯೈಃ ಪೂಜ್ಯತೇ ಮಂಡಲಾಕೃತಿಃ ।
ಯತಃ ಪ್ರಭೃತಿ ಚಾಪ್ಯೇಷಾ ನಿರ್ಮಿತಾ ವಿಶ್ವಕರ್ಮಣಾ ॥ ೩ ॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ.

೧. "ಅಯ್ಯಾ ಬೃಹದ್ಬಲರಾಜನೆ, ಇನ್ನು ಮುಂದೆ ಸಾಂಬನಿಗೆ ನಾರದನು ಅನುಗ್ರಹದಿಂದ ಹೇಳಿದ ಪ್ರತಿಮಾ ಲಕ್ಷಣವನ್ನು ಈಗ ನಿನಗೆ ತಿಳಿಸುವೆನು ಕೇಳು," ಎಂದು ವಸಿಷ್ಠರು ಪ್ರತಿಮಾಲಕ್ಷಣವನ್ನು ವಿವರಿಸಲು ಆರಂಭಿಸಿದರು.

೨-೩. ಹಿಂದೆ ಸೂರ್ಯದೇವನ ಪ್ರತಿಮೆಗಳಿರಲಿಲ್ಲ. ಸೂರ್ಯನು ಮಂಡಲದಲ್ಲಿಯೇ ಪೂಜಿಸಲ್ಪಡುತ್ತಿದ್ದನು. ಸೂರ್ಯಮಂಡಲವು ಅಂತರಿಕ್ಷದಲ್ಲಿ ಇರುತ್ತಿದ್ದುದನ್ನೂ ಅದರಲ್ಲಿ ಸೂರ್ಯನು ವಾಸಮಾಡುವುದನ್ನೂ ನೋಡಿ ಆ ಮಂಡಲವನ್ನೇ ಅರ್ಚಿಸುತ್ತಿದ್ದರು. ಸ್ವಲ್ಪದಿವಸವಾದ ಮೇಲೆ ವಿಶ್ವಕರ್ಮನು ಜನಗಳ ಹಿತಕ್ಕಾಗಿ ಸೂರ್ಯಪ್ರತಿಮೆಯನ್ನು ನಿರ್ಮಾಣಮಾಡಿದನು.

ಸರ್ವಲೋಕಹಿತಾರ್ಥಾಯ ಸೂರ್ಯಸ್ಯ ಪುರುಷಾಕೃತಿಃ ।
ಪ್ರತಿಮಾಸ್ಥಾಪನಂ ಚೈವ ಪ್ರಮಾಣಂ ಚ ವಿಧಾನತಃ ॥ ೪ ॥

ಸರ್ವಲೋಕಹಿತಂ ಸಾಂಬ ಕಥ್ಯಮಾನಂ ನಿಬೋಧ ಮೇ ।
ಗೃಹೇಷು ಪ್ರತಿಮಾಯಾಸ್ತು ನ ತಾಸಾಂ ನಿಯಮಃ ಕ್ವಚಿತ್ ॥ ೫ ॥

ಮನಸ್ಯೈವೇಪ್ಸಿತಾಃ ಕಾರ್ಯಾ ಸರ್ವಾ ಏವ ಶುಭಪ್ರದಾಃ ।
ದೇವಾಯತನವಿನ್ಯಾಸೇ ಕಾರ್ಯಂ ಮೂರ್ತಿಪರೀಕ್ಷಣಂ ॥ ೬ ॥

ಭೂಮೇಸ್ತು ಲಕ್ಷಣಂ ಯತ್ನಾತ್ ಪರೀಕ್ಷ್ಯಂ ತತ್ತ್ವತೋ ಬುಧೈಃ ।
ಆದೌ ಭೂಮಿಂ ಪರೀಕ್ಷೇತ ಕುರ್ಯಾದ್ದೇವಗೃಹಂ ತತಃ ॥ ೭ ॥

---

೪. ಸಕಲಜನಗಳ ಹಿತಕ್ಕೋಸ್ಕರ ಸೂರ್ಯದೇವನ ಆಕಾರಸೂಚಕವಾದ ಪ್ರತಿಮೆಯನ್ನೂ, ಅದನ್ನು ಶಾಸ್ತ್ರೋಕ್ತವಾಗಿ ಸ್ಥಾಪಿಸುವ ವಿಧಾನವನ್ನೂ, ಎಲೈ ಸಾಂಬನೇ, ಲೋಕಕಲ್ಯಾಣಕ್ಕೋಸ್ಕರ ನಿನಗೆ ತಿಳಿಸುವೆನು ಎಂದು ನಾರದರು ಇಂತೆಂದರು.

೫. ಮನೆಗಳಲ್ಲಿ ಪ್ರತಿಮೆಗಳಿಗೆ ನಿಯಮವಿರುವದಿಲ್ಲ. ಇರಲೇಬೇಕೆಂಬ ವಿಧಿಯೂ ಇಲ್ಲ.

೬. ಮನಸ್ಸಿನಲ್ಲಿ ನೆನೆಸಿಕೊಂಡ ಕಾರ್ಯಗಳೆಲ್ಲವೂ ಮೂರ್ತಿಪೂಜೆಯಿಂದ ಸಿದ್ಧಿಸಿ ಶುಭವನ್ನುಂಟುಮಾಡುವುವು. ಆದರೆ ದೇವಾಲಯವನ್ನು ಕಟ್ಟಿಸಿ ಅದರಲ್ಲಿ ಸ್ಥಾಪಿಸುವಾಗ ಮಾತ್ರ ಮೂರ್ತಿಯ (ಪ್ರತಿಮೆಯ) ಪರೀಕ್ಷೆಯನ್ನು ಮಾಡಬೇಕು.

೭. ದೇವಾಲಯವನ್ನು ಕಟ್ಟುವಾಗ ಮೊದಲು ಪ್ರಯತ್ನಪೂರ್ವಕವಾಗಿ ಭೂಮಿಯನ್ನು ಪರೀಕ್ಷಿಸಿ ಅನಂತರ ಅಲ್ಲಿ ದೇವರ ಗುಡಿಯನ್ನು ನಿರ್ಮಿಸಬೇಕು.

ಇಷ್ಟಗಂಧರಸೋಪೇತಾ ಸ್ನಿಗ್ಧಾ ಭೂಮಿಃ ಪ್ರಶಸ್ಯತೇ ।
ಶರ್ಕರಾತುಷಕೇಶಾಽಸ್ಥಿಕ್ಷಾರಾಂಗಾರವಿವರ್ಜಿತಾ ॥ ೮ ॥

ಮೇಘದುಂದುಭಿನಿರ್ಘೋಷಾ ಸರ್ವಬೀಜಪ್ರರೋಹಿಣೀ ।
ಶುಕ್ಲಾ ರಕ್ತಾ ತಥಾ ಪೀತಾ ಕೃಷ್ಣಾ ಭಾವಹಿತಾ ಕ್ಷಿತಿಃ ॥ ೯ ॥

ದ್ವಿಜರಾಜಸ್ಯ ವೈಶ್ಯಾನಾಂ ಶೂದ್ರಾಣಾಂ ಚ ಯಥಾಕ್ರಮಂ ।
ಪರೀಕ್ಷಿತಾಯಾಂ ಭೂಮ್ಯಾಂ ತು ಮಧ್ಯೇ ತಸ್ಯಾಃ ಪ್ರಮಾಣತಃ ॥ ೧೦ ॥

---

೮. ದೇವಾಲಯವನ್ನು ಕಟ್ಟುವ ಸ್ಥಳದಮಣ್ಣು ಮನೋಹರವಾದ ಸುವಾಸನೆಯಿಂದ ಕೂಡಿರಬೇಕು. ದುರ್ಗಂಧಭೂಯಿಷ್ಠವಾಗಿರಕೂಡದು. ಭೂಮಿಯು ಮೃದುವಾಗಿರಬೇಕು. ಭೂಮಿಯಲ್ಲಿ ಅಗೆದರೆ ಬೆಣಚುಕಲ್ಲು, ಹೊಟ್ಟು, ಕೂದಲು, ಮೂಳೇ ಉಪ್ಪು, ಮತ್ತು ಇದ್ದಿಲು, ಇವುಗಳು ದೊರೆಯಬಾರದು ಹಾಗೆದೊರೆತರೆ ಆ ಭೂಮಿಯು ಪ್ರಶಸ್ತವಲ್ಲವೆಂದು ತಿಳಿದು ಬೇರೆ ಇವಾವುದೂ ಸಿಕ್ಕದೇ ಇರುವ ಸ್ಥಳದಲ್ಲಿ ಚೆನ್ನಾಗಿ ಪರೀಕ್ಷಿಸಿ ದೇವಾಲಯವನ್ನು ಕಟ್ಟಿಸಬೇಕು.

೯. ಭೂಮಿಯನ್ನು ಅಗೆದರೆ ಅದರ ಶಬ್ದವು ಮೇಘ ಮತ್ತು ದುಂದುಭಿ ಎಂಬವಾದ್ಯಗಳ ಧ್ವನಿಯಂತೆ ಶಬ್ದಕೊಡಬೇಕು. ಅಲ್ಲದೆ ಯಾವ ಬೀಜಗಳನ್ನು ಆ ಸ್ಥಳದಲ್ಲಿ ಬಿತ್ತಿದರೂ ಬೆಳೆಯುವಂತಿರಬೇಕು. ಇಂತಹ ಭೂಮಿಯೇ ದೇವಾಲಯ ಸ್ಥಾಪನೆಗೆ ಶ್ರೇಷ್ಠವೆಂದರಿಯಬೇಕು.

ಆ ಭೂಮಿಯಲ್ಲಿರುವ ಬಣ್ಣವು ಬಿಳುಪಾಗಿದ್ದರೆ ಬ್ರಾಹ್ಮಣರಿಗೆ ಯೋಗ್ಯವಾದ ಸ್ಥಳವೆಂದೂ, ಕೆಂಪಾಗಿದ್ದರೆ ಕ್ಷತ್ರಿಯರಿಗೆ ಯೋಗ್ಯವಾದುದೆಂದೂ, ಪೀತವರ್ಣವಾಗಿದ್ದರೆ ವೈಶ್ಯರಿಗೆ ಶ್ರೇಷ್ಠವೆಂದೂ, ಕಪ್ಪುಬಣ್ಣವಾಗಿದ್ದರೆ ಶೂದ್ರರಿಗೆ ಅರ್ಹವಾದುದೆಂದೂ ತಿಳಿಯಬೇಕು. ಅಂದರೆ ದೇವಾಲಯವನ್ನು ಕಟ್ಟಿಸುವ ಯಜಮಾನನು ಯಾವಜಾತಿಯವನೋ ಅವನಿಗೆ ಯೋಗ್ಯವಾದ ಸ್ಥಳದಲ್ಲಿ ದೇವಸ್ಥಾನ ನಿರ್ಮಾಣ ಮಾಡಿಸಿದರೆ ಅದು ಅವನಿಗೆ ಅಭಿವೃದ್ಧಿಯನ್ನುಂಟುಮಾಡುವುದು.

೧೦-೧೨. ಭೂಮಿಯನ್ನು ಪರೀಕ್ಷಿಸಿದ ನಂತರ ಆ ಭೂಮಿಯ ಮಧ್ಯಭಾಗದಲ್ಲಿ ನಾಲ್ಕು ಮೊಳ ಸುತ್ತಲೂ ಸಾರಿಸಿ ಚೌಕನಾಗಿ ಮಂಡಲ ಮಾಡಬೇಕು. ಅನಂತರ

ಉಪಲಿಪ್ಯ ಚತುರ್ಹಸ್ತಂ ಚತುರಸ್ರಂ ಸಮಂತತಃ ।
ಹಸ್ತಮಾತ್ರಮಧಃ ಖಾತ್ವಾ ಮಧ್ಯೇ ತಸ್ಯ ದಶಾಂಗುಲಂ ॥ ೧೧ ॥

ಗರ್ತಮುತ್ಕೀರ್ತಯೇತ್ತಂ ವೈ ಪಾಂಸುನಾ ಪರಿಪೂರಯೇತ್ ।
ಸ ಮೇ ಸಮಗುಣಾ ಜ್ಞೇಯಾ ಹೀನೇ ಹೀನಗುಣಾ ಭವೇತ್ ॥ ೧೨ ॥

ವರ್ಧಮಾನೇ ತು ಭೂಯೋಽಸೌ ಭವೇದ್ ವೃದ್ಧಿಕರೀ ಕ್ಷಿತಿಃ ।
ನಿತ್ಯಂ ಪ್ರಾಙ್ಮುಖಮರ್ಕಸ್ಯ ಕದಾಚಿತ್ ಪಶ್ಚಿಮಾಮುಖಂ ॥ ೧೩ ॥

ಸ್ಥಾಪನೀಯಂ ಗೃಹೇ ಸಮ್ಯಕ್ ಪ್ರಾಙ್ಮುಖೇ ಸ್ಥಾನಕಲ್ಪನಾ ।
ಭವನಾದ್ದಕ್ಷಿಣೇ ಪಾರ್ಶ್ವೇ ರವೇಃ ಸ್ನಾನಗೃಹಂ ಸ್ಮೃತಂ ॥ ೧೪ ॥

---

ಅದರ ಮಧ್ಯಭಾಗದಲ್ಲಿ ಒಂದು ಮೊಳದಷ್ಟು ಜಾಗವನ್ನು ಅಗೆದು ಅದರ ಮಧ್ಯದಲ್ಲಿ ಹತ್ತು ಅಂಗುಲಗಳ ಆಳದಷ್ಟು ಹಳ್ಳವನ್ನು ಮಾಡಿ ಅದರಲ್ಲಿ ದೊರೆತ ಮಣ್ಣನ್ನೇ ಪುನಃ ಆ ಹಳ್ಳಕ್ಕೆ ಭರ್ತಿಮಾಡಿದರೆ ಆ ಹಳ್ಳವು ಸರಿಯಾಗಿ ತುಂಬಿದರೆ, ಆ ಭೂಮಿಯು ಸಮವಾದ ಗುಣದಿಂದ ಕೂಡಿದೆಯೆಂದು ತಿಳಿಯಬೇಕು. ಭರ್ತಿಯಾಗದೇ ಸ್ವಲ್ಪಕಡಿಮೆಯಾದರೆ ಅಲ್ಪಗುಣವುಳ್ಳದ್ದೆಂದು ಭಾವಿಸಬೇಕು.

ಆ ಮಣ್ಣು ಹಳ್ಳಭರ್ತಿಯಾಗಿ ಇನ್ನೂ ಹೆಚ್ಚಾಗಿ ಉಳಿದರೆ ಅಂತಹ ಭೂಮಿಯು ಅಭಿವೃದ್ಧಿಯನ್ನುಂಟುಮಾಡುವ ಭೂಮಿಯೆಂದು ಅರಿಯಬೇಕು.

೧೩-೧೪. ಸೂರ್ಯನನ್ನು ಯಾವಾಗಲೂ ಪೂರ್ವದಿಗಭಿಮುಖವಾಗಿ ಪ್ರತಿಷ್ಠೆ ಮಾಡಬೇಕು. ಆ ಸೂರ್ಯಪ್ರತಿಮೆಯು ಅಥವ ವಿಗ್ರಹವು ಪೂರ್ವಕ್ಕೆ ಅಭಿಮುಖವಾಗಿರಬೇಕು. ಒಂದೊಂದುವೇಳೆ ಪಶ್ಚಿಮಾಭಿಮುಖವಾಗಿಯೂ ಇರಬಹುದು. ಮನೆಯ ಅಥವ ದೇವಾಲಯದ ದಕ್ಷಿಣಪಾರ್ಶ್ವದಲ್ಲಿ ಸೂರ್ಯನಿಗೆ ಸ್ನಾನದ ಮನೆಯನ್ನು ನಿರ್ಮಿಸಬೇಕು.

ಅಗ್ನಿಹೋತ್ರಗೃಹಂ ಕಾರ್ಯಂ ರವೇರುತ್ತರತಃ ಶುಭಮ್ ।
ಉದಙ್ಮುಖಂ ಭವೇಚ್ಛಂಭೋಃ ಮಾತೄಣಾಂ ಚ ಗೃಹೋತ್ತಮಮ್ ॥೧೫॥

ಬ್ರಹ್ಮಾ ಪಶ್ಚಿಮತಃ ಸ್ಥಾಪ್ಯೋ ವಿಷ್ಣುರುತ್ತರತಸ್ತಥಾ ।
ನಿಕ್ಷುಭಾ ದಕ್ಷಿಣೇ ಪಾರ್ಶ್ವೇ ರವೇ ರಾಜ್ಞೀ ತು ವಾಮತಃ ॥ ೧೬ ॥

ಪಿಂಗಳೋ ದಕ್ಷಿಣೇ ಭಾನೋಃ ವಾಮತೋ ದಂಡನಾಯಕಃ ।
ಶ್ರೀಮಹಾಶ್ವೇತಯೋಃ ಸ್ಥಾನಂ ಪುರಸ್ತಾದಂಶುಮಾಲಿನಃ ॥ ೧೭ ॥

---

೧೫. ಸೂರ್ಯನಿಗೆ ಉತ್ತರದಿಕ್ಕಿನಲ್ಲಿ ಮಂಗಳಕರವಾದ ಅಗ್ನಿಹೋತ್ರ ಶಾಲೆಯನ್ನು (ಯಾಗಶಾಲೆ) ನಿರ್ಮಿಸಬೇಕು. ಸಪ್ತಮಾತೃಕೆಗಳಾದ (ಬ್ರಾಹ್ಮೀ, ಮಾಹೇಶ್ವರೀ, ಕೌಮಾರಿ, ವೈಷ್ಣವೀ, ವಾರಾಹೀ, ಇಂದ್ರಾಣೀ, ಮತ್ತು ಚಾಮುಂಡಾ ಇವರೇ ಸಪ್ತಮಾತೃಕೆಗಳು.) ಮನೆಯು ಪರಮೇಶ್ವರನಿಗೆ ಉತ್ತರ ದಿಕ್ಕಿನಲ್ಲಿರಬೇಕು, ಅಂದರೆ, ಸೂರ್ಯನ ಮುಂದೆ ದಿಂಡಿಯ ವಿಗ್ರಹವಿರಬೇಕು. ಆ ದಿಂಡಿಯು (ಈಶ್ವರನು) ಉತ್ತರಕ್ಕೆ ಮುಖವಾಗಿರುವಂತೆ ನಿರ್ಮಿಸಬೇಕು. ಇದಕ್ಕೆ ಉತ್ತರದಲ್ಲಿ ಸಪ್ತಮಾತೃಕೆಗಳ ಮನೆಯಿರಬೇಕು.

೧೬. ಬ್ರಹ್ಮನನ್ನು ಪಶ್ಚಿಮ ದಿಕ್ಕಿನಲ್ಲಿಯೂ, ಉತ್ತರದಲ್ಲಿ ವಿಷ್ಣುವನ್ನೂ, ಸೂರ್ಯನ ಬಲಭಾಗದಲ್ಲಿ ನಿಕ್ಷುಭಾದೇವಿಯನ್ನೂ (ಛಾಯಾದೇವಿ) ಎಡಪಾರ್ಶ್ವದಲ್ಲಿ ರಾಜ್ಞೀದೇವಿಯನ್ನೂ (ಸಂಜ್ಞಾದೇವಿಯನ್ನೂ) ಸ್ಥಾಪಿಸಬೇಕು.

೧೭. ಸೂರ್ಯದೇವನಿಗೆ ದಕ್ಷಿಣಭಾಗದಲ್ಲಿ (ಬಲಗಡೆಯಲ್ಲಿ) ಪಿಂಗಲನ ವಿಗ್ರಹವಿರಬೇಕು. ಎಡಭಾಗದಲ್ಲಿ ದಂಡನಾಯಕರ ಪ್ರತಿಮೆಯಿರಬೇಕು. ಸೂರ್ಯನ ಮುಂಭಾಗದಲ್ಲಿ ಲಕ್ಷ್ಮಿ ಮತ್ತು ಮಹಾಶ್ವೇತೆ ಇವರ ಮೂರ್ತಿಗಳಿರಬೇಕು.

ಅಶ್ವಿನೌ ತು ತತೋ ದ್ವಾರಿ ಪೂಜಾಕರ್ಮ ಗೃಹಾತ್ ಬಹಿಃ ।
ದ್ವಿತೀಯಾಯಾಂ ತು ಕಕ್ಷ್ಯಾಯಾಂ ರಾಜ್ಞಸ್ತ್ರೋಷೌ ವ್ಯವಸ್ಥಿತೌ ॥ ೧೮ ॥

ತೃತೀಯಾಯಾಂ ತು ಕಕ್ಷ್ಯಾಯಾಂ ಸ್ಥಿತೌ ಕಲ್ಮಾಷಪಕ್ಷಿಣೌ ।
ಜಾಂದಕೋ ಮಾಠರಃ ಸ್ಥಾಪ್ಯೋ ದಕ್ಷಿಣಾಂ ದಿಶಮಾಸ್ಥಿತೌ ॥ ೧೯ ॥

ಪ್ರಾಪ್ನುಯಾನಕ್ಷುತಾಪೌ ತು ಪಶ್ಚಿಮಾಂ ದಿಶಮಾಸ್ಥಿತೌ ।
ಉದೀಚ್ಯಾಂ ಸ್ಥಾಪನೀಯಸ್ತು ಕುಬೇರಃ ಸೋಮ ಏವ ಚ ॥ ೨೦ ॥

ಉತ್ತರೇಣೈವ ತಾಭ್ಯಾಂ ತು ರೇವಂತಃ ಸವಿನಾಯಕಃ ।
ಯದ್ರವೇರ್ವಿದ್ಯತೇ ಸ್ಥಾನಂ ಚತುರ್ದಿಕ್ಷು ತು ತತ್ರ ವಾ ॥ ೨೧ ॥

---

೧೮. ಸೂರ್ಯದೇವನ ಪೂಜಾಗೃಹಕ್ಕಿಂತಲೂ (ಗರ್ಭಗುಡಿ) ಹೊರಗಡೆ ಬಾಗಿಲಿನಲ್ಲಿ ನಾಸತ್ಯ ಮತ್ತು ದಸ್ರರೆಂಬ ಇಬ್ಬರು ಅಶ್ವಿನೀ ದೇವತೆಗಳನ್ನು ದ್ವಾರ ಪಾಲಕರನ್ನಾಗಿ ನಿರ್ಮಿಸಬೇಕು. ಗರ್ಭಗುಡಿಗಿಂತಲೂ ಹೊರಗಿನ ಅಂಗಣದ ಬಾಗಿಲಿನಲ್ಲಿ ರಾಜ್ಞ ಮತ್ತು ತೋಷ ಇವರನ್ನು ದ್ವಾರಪಾಲಕರನ್ನಾಗಿ ಇರಿಸಬೇಕು.

೧೯. ಮೂರನೆಯ ಪ್ರಾಕಾರದಲ್ಲಿ ಇರುವ ಬಾಗಿಲಿನಲ್ಲಿ ಕಲ್ಮಾಶ ಮತ್ತು ಪಕ್ಷಿ ಎಂಬಿಬ್ಬರನ್ನು ದ್ವಾರಪಾಲಕರನ್ನಾಗಿ ನಿರ್ಮಿಸಬೇಕು. ಜಾಂದಕ ಮತ್ತು ಮಾಠರ ಇವರಿಬ್ಬರನ್ನೂ ದಕ್ಷಿಣದಿಕ್ಕಿನಲ್ಲಿ ಸ್ಥಾಪಿಸಬೇಕು.

೨೦, ಸೂರ್ಯನಿಗೆ ಪಶ್ಚಿಮದಿಕ್ಕಿನಲ್ಲಿ ಪ್ರಾಪ್ನುಯಾನ ಮತ್ತು ಕ್ಷುತಾಪ ಎಂಬಿಬ್ಬರನ್ನು ಸ್ಥಾಪಿಸಬೇಕು. ಉತ್ತರದಿಕ್ಕಿನಲ್ಲಿ ಕುಬೇರ ಮತ್ತ ಸೋಮ (ಚಂದ್ರ) ಇವರನ್ನು ನಿಲ್ಲಿಸಬೇಕು.

೨೧. ಕುಬೇರ ಮತ್ತು ಚಂದ್ರ ಇವರಿರುವ ಸ್ಥಾನಗಳಿಂದ ಉತ್ತರದಿಕ್ಕಿನಲ್ಲಿ ವಿನಾಯಕ ಮತ್ತು ರೇವಂತ ಇವರಿಬ್ಬರನ್ನೂ ಸ್ಥಾಪಿಸಬೇಕು.. ಹಾಗೆ ಅವರ ಉತ್ತರದಲ್ಲಿ ಸ್ಥಾನವಿಲ್ಲದಿದ್ದರೆ ಸೂರ್ಯನ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿಯೂ ಎಲ್ಲಿ ಅವಕಾಶವಿರುವುದೋ ಅಲ್ಲಿನೋಡಿ ರೇವಂತ ಮತ್ತು ವಿನಾಯಕ ಇವರಿಬ್ಬರನ್ನು ಪ್ರತಿಷ್ಠೆ ಮಾಡಬಹುದು.

ಅರ್ಘಾಯ ಮಂಡಲೇ ದ್ವೇ ವೈ ಕಾರ್ಯೇ ಸವ್ಯಾಪಸವ್ಯತಃ ।
ದದ್ಯಾದುದಯವೇಲಾಯಾಂ ಅರ್ಘ್ಯಂ ಸೂರ್ಯಾಯ ದಕ್ಷಿಣೇ ॥ ೨೨ ॥

ಉತ್ತರೇ ಮಂಡಲೇ ದದ್ಯಾತ್ ಅರ್ಘ್ಯಮಸ್ತಂಗತೇ ರವೌ ।
ಚತುರಶ್ರಂ ಚತುಃಶೃಂಗಂ ವ್ಯೋಮ ದೇವಗೃಹಾಗ್ರತಃ ॥ ೨೩ ॥

ಪ್ರತಿಮಾಪಾದಸೂತ್ರೇಣ ಕಾರ್ಯಂ ಮಧ್ಯಸ್ಯ ಮಂಡಲಂ ।
ದಿಂಡಿಃ ಸ್ಥಾಪ್ಯಃ ಪುರಸ್ತಸ್ಮಾದಾದಿತ್ಯಾಭಿಮುಖಸ್ತಥಾ ।
ಏಷ ಸ್ಥಾನವಿಧಿಃ ಪ್ರೋಕ್ತೋ ದೇವಾನಾಂ ತು ಯಥಾಕ್ರಮಮ್ ॥ ೨೪ ॥

ಇತಿ ಶ್ರೀ ಸಾಂಬಪುರಾಣೇ ಏಕೋನತ್ರಿಂಶೋऽಧ್ಯಾಯಃ.

---

೨೨. ಸೂರ್ಯನನ್ನು ಪೂಜೆಮಾಡಲು ಅನುಕೂಲವಾಗುವಂತೆ ಸೂರ್ಯನ ಎಡಬಲಭಾಗಗಳಲ್ಲಿ ಎರಡು ಮಂಡಲಗಳನ್ನು ಮಾಡಬೇಕು. ಅದರಲ್ಲಿ ಬಲಭಾಗದಲ್ಲಿರುವ ಮಂಡಲದಲ್ಲಿ ಸೂರ್ಯನು ಉದಯವಾಗುತ್ತಿರುವಾಗ ಅವನಿಗೆ ಅರ್ಘ್ಯವನ್ನು ಸಮರ್ಪಿಸಬೇಕು.

೨೩. ಚಚ್ಚೌಕವಾಗಿಯೂ, ನಾಲ್ಕು ಶಿಖರಗಳಿಂದ ಕೂಡಿದುದೂ ಆಗಿರುವ ವ್ಯೋಮದೇವನ (ಅಂತರಿಕ್ಷಾಧಿಪತಿಯಾದ ಸೂರ್ಯದೇವನ) ಗುಡಿಯ ಮುಂದೆ ನಿಂತುಕೊಂಡು ಸೂರ್ಯನು ಮುಳುಗುತ್ತಿರುವ ಸಮಯದಲ್ಲಿ ಹಿಂದೆ ವಿಭಾಗಮಾಡಿದ ಉತ್ತರಮಂಡಲದಲ್ಲಿ ಕ್ರಮವಾಗಿ ಅರ್ಘ್ಯವನ್ನು ಕೊಡಬೇಕು.

ಸೂರ್ಯಪ್ರತಿಮೆಯ ಪ್ರಮಾಣದ ನಾಲ್ಕನೆಯ ಪ್ರಮಾಣವನ್ನಿಟ್ಟು ಮಂಡಲ ಸ್ಥಾಪನೆಮಾಡಬೇಕು.

೨೪. ಹಿಂದೆಹೇಳಿದ ಮಧ್ಯಮಂಡಲದ ಮುಂದುಗಡೆ ಸೂರ್ಯನಿಗೆ ಎದುರಾಗಿ ದಿಂಡಿಯನ್ನು (ಈಶ್ವರನನ್ನು) ಸ್ಥಾಪಿಸಬೇಕು.

ಅಯ್ಯ ಬೃಹದ್ಬಲರಾಜನೆ, ಇದುವರೆವಿಗೆ ನಿನಗೆ ನಾನು, ಸೂರ್ಯನು ಮತ್ತು ಅವನ ಪರಿವಾರವೆನಿಸಿದ ಇತರ ದೇವತೆಗಳು ಯಾವಯಾವ ಸ್ಥಾನದಲ್ಲಿರಬೇಕೆಂಬುದನ್ನು ಕ್ರಮವಾಗಿ ತಿಳಿಸಿರುವೆನು. ಎಂದು ವಸಿಷ್ಠಮಹರ್ಷಿಗಳು ಬೃಹದ್ಬಲರಾಜನಿಗೆ ಹೇಳಿದರು.

ಇಲ್ಲಿಗೆ ಸಾಂಬಪುರಾಣದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಿಂಶೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಪ್ರತಿಮಾವಿಧಿವಿಸ್ತರಂ ।
ಅರ್ಚಾಃ ಸಪ್ತವಿಧಾಃ ಪ್ರೋಕ್ತಾ ಭಕ್ತಾನಾಂ ಶುಭವೃದ್ಧಯೇ ॥ ೧ ॥

ಕಾಂಚನೀ ರಾಜತೀ ತಾಮ್ರೀ ಪಾರ್ಥಿವೀ ಶೈಲಜಾ ತಥಾ ।
ವಾರ್ಕ್ಷೀ ವಾ ಲೇಖ್ಯಜಾ ಚೇತಿ ಮೂರ್ತಿಸ್ಥಾನಾನಿ ಸಪ್ತ ವೈ ॥ ೨ ॥

---

## ಮೂವತ್ತನೆಯ ಅಧ್ಯಾಯ.

೧. ವಸಿಷ್ಠರು "ಎಲೈ ಬೃಹದ್ಬಲನೆ, ಇನ್ನು ಮುಂದೆ ಸೂರ್ಯದೇವನ ಪ್ರತಿಮೆಯನ್ನು ನಿರ್ಮಾಣಮಾಡುವ ರೀತಿಯನ್ನು ವಿಸ್ತಾರವಾಗಿ ತಿಳಿಸುವೆನು ಕೇಳು, ಎಂದು ಹೀಗೆಂದನು. ಸೂರ್ಯಪ್ರತಿಮೆಗಳು ಏಳು ವಿಧವಾಗಿರುವುವು. ಇವುಗಳು ಭಕ್ತರ ಅಭಿವೃದ್ಧಿಗೋಸ್ಕರ ಹೇಳಲ್ಪಟ್ಟಿರುವುವು. ಅಂದರೆ ದೈವಭಕ್ತರಾದವರು ಏಳು ವಿಧವಾಗಿರುವ ಪ್ರತಿಮಾನಿರ್ಮಾಣವಿಧಿಯನ್ನೂ ತಿಳಿದು ಅದನ್ನು ಪೂಜಿಸುವುದರಿಂದ, ಅವರಿಗೆ ಸಕಲಕಾರ್ಯಗಳೂ ಕೈಗೂಡುತ್ತಾ, ಬಹಳ ಅಭಿವೃದ್ಧಿಸ್ಥಿತಿಗೆ ಬರುವರು.

೨. ಚಿನ್ನ, ಬೆಳ್ಳಿ, ತಾಮ್ರ, ಮಣ್ಣು, ಕಲ್ಲು, ಮರ, ಮತ್ತು ಕಾಗದ ಅಥವ ರೊಟ್ಟು ಇವುಗಳಿಂದ ಕ್ರಮವಾಗಿ ಏಳುಮೂರ್ತಿಗಳನ್ನು ಮಾಡುವರು. ಇವು ಏಳೇ ಪ್ರತಿಮೆಗಳ ಅಥವ ಮೂರ್ತಿಗಳ ನಿರ್ಮಾಣಕ್ಕೆ ಮೂಲವಸ್ತುಗಳಾಗಿರುವುವೆಂದು ಹೇಳುವರು.

ಮಧುಕೋ ದೇವದಾರುಶ್ಚ ರಾಜವೃಕ್ಷಃ ಸಚಂದನಃ ।
ಬಿಲ್ವಶ್ಚಾಮ್ರಾತಕಶ್ಚೈವ ಖದಿರಶ್ಚಂಪಕಸ್ತಥಾ ॥ ೩ ॥

ನಿಂಬಃ ಶ್ರೀಪರ್ಣವೃಕ್ಷಶ್ಚ ತ್ವಶನಃ ಸರಲೋಽರ್ಜುನಃ ।
ರಕ್ತಚಂದನಪರ್ಯಂತಾಃ ಶ್ರೇಷ್ಠಾಃ ಸ್ಯುಃ ಪ್ರತಿಮಾದ್ರುಮಾಃ ॥ ೪ ॥

ವರ್ಣಾನಾಮಾನುಪೂರ್ವ್ಯೇಣ ದ್ವೌ ದ್ವೌ ವೃಕ್ಷೌ ಪ್ರಕೀರ್ತಿತೌ ।
ನಿಂಬಾದ್ಯಾಃ ಸರ್ವವರ್ಣಾನಾಂ ವೃಕ್ಷಾಃ ಸಾಧಾರಣಾಃ ಸ್ಮೃತಾಃ ॥ ೫ ॥

ಕ್ಷೀರಿಣೋ ವರ್ಣಿತಾಃ ಸರ್ವೇ ದುರ್ಬಲಾಸ್ತೇ ಸ್ವಭಾವತಃ ।
ಚತುಷ್ಪಥೇಷು ನ ಗ್ರಾಹ್ಯಾ ಯೇ ಯೇ ಸ್ಯುಸ್ತತ್ರ ವೃಕ್ಷಕಾಃ ॥ ೬ ॥

---

ಹಿಪ್ಪೇಮರ ಅಥವ ತಾಲೇಮರ, ದೇವದಾರು, ಸುವರ್ಣವೃಕ್ಷ, ಬಿಳಿಯಗಂಧದ ಮರ, ಬಿಲ್ವಪತ್ರೇಮರ, ಆಮ್ರಾ (ಅಮಟೆಮರ) ತಕವೃಕ್ಷ, ಕಗ್ಗಲೀ,. ಸಂಪಿಗೆ ಬೇವು, ಬನ್ನೀ, ಸರ್ಜವೃಕ್ಷ, ಸಾಗವಾನೀಮರ, ಅರ್ಜುನವೃಕ್ಷ, ಕೆಂಪುಚಂದನದ ಮರ ಇವೆಲ್ಲವೂ ಪ್ರತಿಮೆ ಮಾಡಲು ಉತ್ತಮವಾದ ಮರಗಳೆಂದು ಹೇಳುವರು.

೫. ಒಂದೊಂದು ಜಾತಿಯವರಿಗೆ ಹೀಗೆ ಎರಡೆರಡು ಮರಗಳನ್ನು ಕ್ರಮವಾಗಿ ಹೇಳಿದೆ. ಬೇವಿನಮರವೇ ಮೊದಲಾದ ಹಿಂದೆ ಹೇಳಿದ ಮರಗಳೆಲ್ಲವೂ ಎಲಾ ವರ್ಣದವರಿಗೂ ಅಂದರೆ ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರಿಗೂ ಪ್ರತಿಮೆಮಾಡಲು ಯೋಗ್ಯವಾದ ವೃಕ್ಷಗಳೆಂದು ಹೇಳುವರು.

೬. ಮರವನ್ನು ಕಡಿದಾಗ ಹಾಲುಬಂದರೂ (ಮರದಿಂದ ಉಂಟಾಗುವ ಒಂದು ದ್ರವ) ಆ ಮರಗಳು ಬಲಹೀನವೆಂದು ತಿಳಿಯಬೇಕು. ನಾಲ್ಕುದಾರಿಗಳು ಒಂದೇಕಡೆ ಸೇರುವಸ್ಥಳದಲ್ಲಿ ಬೆಳೆದಿರುವ ವೃಕ್ಷಗಳನ್ನು ವಿಗ್ರಹಮಾಡಲು ಉಪಯೋಗಿಸಬಾರದು.

೭-೯. ದೇವಸ್ಥಾನಗಳ ಪ್ರಾಕಾರದಲ್ಲಿ ಬೆಳೆದಿರುವ ವೃಕ್ಷಗಳೂ, ಹುತ್ತದ ಮೇಲೆ ಬೆಳೆದಿರುವ ಮರಗಳೂ, ದೇವತಾಶ್ರಯದಲ್ಲಿ ಬೆಳೆದಿರುವ ತರುಗಳೂ ಚೈತ್ಯ ವೃಕ್ಷಗಳೆನಿಸಿದ ಪೂಜ್ಯತರುಗಳೂ, ಪ್ರತಿಮಾನಿರ್ಮಾಣಕ್ಕೆ ಯೋಗ್ಯವಾದವುಗಳಲ್ಲ.

ದೇವತಾಯತನಸ್ಥಾಶ್ಚ ಯೇ ಚ ವಲ್ಮೀಕಸಂಭವಾಃ ।
ಉತ್ತೀರ್ಣಾ ದೇವತಾ ಯೇಷು ಚೈತ್ಯವೃಕ್ಷಾಶ್ಚ ಯೇ ಸ್ಮೃತಾಃ ॥ ೭ ॥

ಸ್ಮಶಾನಾಶ್ರಯಜಾತಾಶ್ಚ ಪಕ್ಷಿಣಾಂ ನಿಲಯಾಶ್ಚ ತೇ ।
ಸಕೋಟರಾಶ್ಚ ಯೇ ವೃಕ್ಷಾ ಶುಷ್ಕಾಗ್ರಾ ಯೇ ಚ ಪಾದಪಾಃ ॥ ೮ ॥

ಅಸ್ತಾನಿಲಾನಲಹತಾಃ ಕುಂಜರಾಶನದೂಷಿತಾಃ ।
ಗ್ರಾಮಾಭಾಸರಜೋದ್ಧಸ್ತಾ ಬಾಲದುರ್ಗಂಧಿನಸ್ತಥಾ ॥ ೯ ॥

ಅಕಾಲಫಲಪುಷ್ಪಾಶ್ಚ ಕುಲೀ ತಾಭ್ಯಾಂ ವಿವರ್ಜಿತಾಃ ।
ಶೀರ್ಣವಜ್ರಾಶ್ಚ ತರವೋ ರೂಕ್ಷಾ ಧ್ವಾಂಕ್ಷನಿಷೇವಿತಾಃ ॥ ೧೦ ॥

---

ಸ್ಮಶಾನಭೂಮಿಯಲ್ಲಿ ಹುಟ್ಟಿಬೆಳದಿರುವ ಮರಗಳೂ, ಪಕ್ಷಿಗಳು ಗೂಡುಕಟ್ಟಿಕೊಂಡು ವಾಸಮಾಡುತ್ತಿರುವ ಮರಗಳೂ, ಪೊಟರೆಗಳಿಂದ ಕೂಡಿದ ಮರಗಳೂ ಮತ್ತೂ ಕೊಂಬೆಗಳ ತುದಿಯೆಲ್ಲಾ ಒಣಗಿಹೋಗಿರುವ ವೃಕ್ಷಗಳೂ ದೇವರ ವಿಗ್ರಹ ನಿರ್ಮಾಣಕ್ಕೆ ಶ್ರೇಷ್ಠವಾದುವುಗಳಲ್ಲ.

ಗಾಳಿಯಿಂದ ಬಿದ್ದುಹೋಗಿರುವ ಮರಗಳೂ, ಬೆಂಕಿಬಿದ್ದು ಉರಿದು ಕರಿಯಾಗಿರುವ ಮರಗಳೂ, ಬೋಧಿವೃಕ್ಷವೂ, ಊರಿನಕೊಳೆಯುನೀರು ಮತ್ತು ಮಲಮೂತ್ರಾದಿ ಕೆಟ್ಟಪದಾರ್ಥದಿಂದ ಬೆಳೆದಿರುವುವುಗಳೂ, ಎಳೆಯ ಅಂದರೆ ಬಲಿಯದೆ ಇರುವ ವೃಕ್ಷಗಳೂ, ಮತ್ತೂ ಕೆಟ್ಟವಾಸನೆಯಿಂದ ಕೂಡಿದ ವೃಕ್ಷಗಳೂ ಪ್ರತಿಮೆಮಾಡಲು ಯೋಗ್ಯವಲ್ಲವೆಂದು ತಿಳಿಯಬೇಕು.

೧೦. ಮತ್ತೂ ಕಾಲವಲ್ಲದ ಕಾಲದಲ್ಲಿ ಹೂವು ಹಣ್ಣುಗಳನ್ನು ಬಿಡುತ್ತಾ ಸಕಾಲದಲ್ಲಿ ಫಲಪುಷ್ಪಗಳಿಲ್ಲದೆ ಇರುವ ಮರಗಳೂ, ಸಿಡಿಲಿನಿಂದ ಸೀಳಿಹೋದ ಮರಗಳೂ, ಕಾಗೆ ಹದ್ದುಮೊದಲಾದ ಕ್ರೂರಪಕ್ಷಿಗಳಿಗೆ ಆವಾಸಸ್ಥಾನವಾಗಿರುವ ಗಿಡಗಳೂ, ಒಂದು ಎರಡು ಮತ್ತು ಮೂರು ಕೊಂಬೆಗಳಿಂದ ಕೂಡಿರುವ ಮರಗಳೂ ಅಧಮ ವೃಕ್ಷಗಳೆನಿಸಿ ವಿಗ್ರಹ ನಿರ್ಮಾಣಮಾಡಲು ಯೋಗ್ಯವೆನಿಸಲಾರವು.

ಏಕಶಾಖಾ ದ್ವಿಶಾಖಾಶ್ಚ ತ್ರಿಶಾಖಾ ಅಧಮಾ ದ್ರುಮಾಃ ।
ಶುಚೌ ದೇಶೇ ವಿವಿಕ್ತೇ ಚ ಕೇಶಾಂಗಾರವಿವರ್ಜಿತೇ ॥ ೧೧ ॥

ಪ್ರಾಗುದಕ್‌ಪ್ರವಣೇ ಹೃದ್ಯೇ ದೇಶೇ ಕಂಟಕವರ್ಜಿತೇ ।
ನಿಸ್ತೀರ್ಣಸ್ಕಂಧವಿಟಃ ಪುಷ್ಪವಾನ್‌ಋಜುರವ್ರಣಃ ॥ ೧೨ ॥

ಅಭುಗ್ನ ಹೀನೋऽವಿಕಟಃ ಸ ತು ಗ್ರಾಹ್ಯಃ ಶುಭಸ್ತರುಃ ।
ತಸ್ಯಾಷ್ಟಸು ಮಾಸೇಷು ಗ್ರಹಣಂ ಕಾರ್ತಿಕಾದಿಷು ॥ ೧೩ ॥

ಪ್ರಶಸ್ತೇ ಪುಷ್ಯನಕ್ಷತ್ರೇ ಗುಣಯುಕ್ತೇ ಶುಭೇ ದಿನೇ ।
ಶಕುನೇ ಚ ಶುಭೇ ನಿತ್ಯಂ ಸೋಪವಾಸೋऽಧಿವಾಸಯೇತ್ ॥ ೧೪ ॥

ಸಮಂತಾದುಪಲಿಪ್ಯಾಥ ತಸ್ಯಾಧಸ್ತಾದ್ವಸುಂಧರಾಂ ।
ಗಾಯತ್ರ್ಯಾ ಪರಿಪೂತೇನ ಪರಿತಃ ಪ್ರೋಕ್ಷ್ಯ ವಾರಿಣಾ ॥ ೧೫ ॥

---

೧೧-೧೨. ಕೂದಲು, ಮಸೀಗೆಡ್ಡೆ (ಇದ್ದಿಲು) ಇವುಗಳಿಲ್ಲದೆ, ಮುಳ್ಳುಗಳಿಗೆ ಅವಕಾಶವಿಲ್ಲದಂತೆ, ಪೂರ್ವ ಮತ್ತು ಉತ್ತರದಿಕ್ಕಿನಲ್ಲಿ ಪರಿಶುದ್ಧವಾದ ಸ್ಥಳದಲ್ಲಿ ಒಂಟಿಯಾಗಿಯೂ (ಪ್ರತ್ಯೇಕವಾಗಿಯೂ) ನೋಡುವುದಕ್ಕೆ ಯೋಗ್ಯವಾಗಿಯೂ ಕಾಣುತ್ತಾ ವಿಶಾಲವಾದ ಕೊಂಬೆಗಳಿಂದಕೂಡಿ ಹೂವುಗಳಿಂದ ಪ್ರಕಾಶಿಸುತ್ತಾ ನೆಟ್ಟಗೆ, ಗಂಟುಗಳಿಲ್ಲದೆ, ಯಾವ ವಿಕಾರವನ್ನೂ ಹೊಂದದೇ ಇರುವ ಮರವು ವಿಗ್ರಹಗಳ ನಿರ್ಮಾಣಕೆ ಯೋಗ್ಯವೂ ಮಂಗಳಕರವೂ ಆದುದು.

೧೩-೧೪. ಕಾರ್ತೀಕಮಾಸವೇ ಮೊಲಾದ ಎಂಟು ತಿಂಗಳಲ್ಲಿ ಅಂದರೆ, ಕಾರ್ತೀಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುನ, ಚೈತ್ರ, ವೈಶಾಖ, ಜ್ಯೇಷ್ಠ, ಈ ಎಂಟು ತಿಂಗಳಿನಲ್ಲಿ ಯಾವುದಾದರೂ ಒಂದು ಶುಭ ಮಾಸದಲ್ಲಿ ಪ್ರಶಸ್ತವಾದ ಪುಷ್ಯನಕ್ಷತ್ರದಿಂದ ಕೂಡಿದ, ಒಳ್ಳೆಯವಾರ ಮತ್ತು ತಿಥಿಗಳನ್ನು ವಿಚಾರಿಸಿ, ಸರಿಯಾದ ಶಕುನಗಳಿಂದ ಕೂಡಿದವನಾಗಿ, ಉಪವಾಸದಿಂದ ಹಿಂದೆಹೇಳಿದ ಮರಗಳ ಸಮೀಪಕ್ಕೆ ಹೋಗಿ ಅಲ್ಲಿ ವಾಸಮಾಡಬೇಕು.

೧೫-೧೬. ಮರದ ಸಮೀಪಕ್ಕೆ ಹೋದನಂತರ ಅದರಸುತ್ತಲೂ ಇರುವ ಭೂಮಿಯನ್ನು ಸಾರಿಸಿ, ಆ ಮರದ ಕೆಳಭಾಗದ ಭೂಮಿಯನ್ನು ಗಾಯತ್ರೀ ಮಂತ್ರ

ಶುಕ್ಲೇ ಚಾಪರಿಭುಕ್ತೇ ಚ ಪರಿಧಾಯ ಚ ವಾಸಸೀ ।
ಪೂಜಯೇದ್ಗಂಧಮಾಲ್ಯೈಶ್ಚ ಧೂಪೈಃ ಸ ಬಲಿಕರ್ಮಭಿಃ ॥ ೧೬ ॥

ತತಃ ಕುಶಪರಿಸ್ತೀರ್ಣೇ ಹುತ್ವಾಗ್ನಿಂ ಚ ತದಂತಿಕೇ ।
ದೇವದಾರುಸಮಿದ್ಭಿಶ್ಚ ಮಂತ್ರೇಣಾನೇನ ತತ್ತ್ವವಿತ್ ॥ ೧೭ ॥

ಓಂ ಪ್ರಜಾಪತಯೇ ಸತ್ಯಸಂಧಾಯ ।
ನಿತ್ಯಂ ಸ್ರಷ್ಟ್ರೇ ವಿಧಾತ್ರೇ ಚ ಚರಾಚರಾತ್ಮನೇ ನಮಃ ॥
ಸಾನ್ನಿಧ್ಯಮಸ್ಮಿನ್ ಕುರು ದೇವ ವೃಕ್ಷೇ ।
ಸೂರ್ಯಾವೃತಂ ಮಂಡಲಮಾವಿಶಸ್ವ ಸ್ವಾಹಾ ॥ ೧೮ ॥

ಏವಂ ಸಂಪೂಜಯಿತ್ವಾ ತು ವಾಕ್ಯೈಸ್ತಂ ಪರಿಶಾಂತಯೇ ।
ವೃಕ್ಷಲೋಕಸ್ಯ ಶಾಂತ್ಯರ್ಥಂ ಗಚ್ಛ ದೇವಾಲಯಂ ಶುಭಂ ॥ ೧೯ ॥

---

ದಿಂದ ಪರಿಶುದ್ಧವಾದ ನೀರಿನಿಂದ ಪ್ರೋಕ್ಷಿಸಿ, ಶುಭ್ರವೂ, ಮತ್ತು ಹೊಸದೂ ಆದ ಬಟ್ಟೆಗಳನ್ನು ಉಟ್ಟುಕೊಂಡು, ಗಂಧ, ಹೂವು, ಧೂಪ ಮತ್ತು ನೈವೇದ್ಯಗಳಿಂದ ಕ್ರಮವಾಗಿ ಪೂಜೆಮಾಡಬೇಕು.

೧೭-೧೮. ಅನಂತರ ದರ್ಭೆಯ ಆಸನದ ಮೇಲೆ ಕುಳಿತುಕೊಂಡು ಆ ಮರದ ಹತ್ತಿರ ಅಗ್ನಿಯನ್ನು ಪ್ರಜ್ವಲಿಸಿ, ದೇವದಾರುವೃಕ್ಷದ ಸಮಿತ್ತುಗಳನ್ನು ತೆಗೆದುಕೊಂಡು "ಓಂ ಪ್ರಜಾಪತಯೇ, ಸತ್ಯಸಂಧಾಯ, ನಿತ್ಯಂ ಸ್ರಷ್ಟ್ರೇ ವಿಧಾತ್ರೇ ಚ ಚರಾಚರಾತ್ಮನೇ ನಮಃ ಸಾನ್ನಿಧ್ಯಮಸ್ಮಿನ್ ಕುರುದೇವ ವೃಕ್ಷೇ ಸೂರ್ಯಾವೃತಂ ಮಂಡಲಮಾವಿಶಸ್ವ ಸ್ವಾಹಾ "ಎಂಬ ಮಂತ್ರದಿಂದ ತತ್ವಜ್ಞಾನಿಯಾಗಿ ಹೋಮಮಾಡಬೇಕು.

೧೯-೨೧. ಹಿಂದೆ ಹೇಳಿದ ರೀತಿಯಲ್ಲಿ ಪೂಜಿಸಿ ಹೋಮಮಾಡಿ ಆ ದೇವರ ತೃಪ್ತ್ಯರ್ಥವಾಗಿ " ಎಲೈ ದೇವನೆ, ಈ ವೃಕ್ಷಸಮೂಹಕ್ಕೆ ಶಾಂತಿಯನ್ನುಂಟುಮಾಡ ಲೋಸುಗ ಮಂಗಳಕರವಾದ ದೇವಾಲಯವನ್ನು ನೀನು ಪ್ರವೇಶಿಸು. ಆಗ ನಿನ್ನನ್ನು ಯಾರೂ ಕತ್ತರಿಸಲಾರರು. ನಿನಗೆ ದಾಹಭೀತಿಯಿರುವುದಿಲ್ಲ. ನೀನು ಆ ದೇವ ನೆನಿಸುವೆ. ಸರ್ವದಾ ಜನಗಳು ಧೂಪ, ದೀಪ, ನೈವೇದ್ಯಾದಿಗಳಿಂದ ನಿನ್ನನ್ನೂ ಅಲ್ಲಿ ಪೂಜಿಸುವರು. ಆದುದರಿಂದ ನೀನು ಅಲ್ಲಿಗೆ ಹೋಗಿ ನಿಜವಾದ ಶಾಂತಿಹೊಂದು

ದೇವ ತ್ವಂ ಯಾಸ್ಯಸೇ ತತ್ರ ಚ್ಛೇದದಾಹವಿವರ್ಜಿತಃ ।
ಕಾಲೇ ಧೂಪಪ್ರದಾನೇನ ಸ ಪುಷ್ಪೈರ್ಬಲಿಕರ್ಮಭಿಃ ॥ ೨೦ ॥

ಲೋಕಾಸ್ತ್ವಾಂ ಪೂಜಯಿಷ್ಯಂತಿ ತತೋ ಯಾಸ್ಯಸಿ ನಿರ್ವೃತಿಂ ।
ವೃಕ್ಷಮೂಲೇ ಕುಠಾರಂ ಚ ಧೂಪೈಃ ಪುಷ್ಪೈಶ್ಚ ಪೂಜಯೇತ್ ॥ ೨೧ ॥

ಪ್ರಯಾತಾಯಾಂ ತು ಶರ್ವರ್ಯಾಂ ಪುನಃ ಸಂಪೂಜ್ಯ ತಂ ನಗಂ ।
ಬ್ರಾಹ್ಮಣೇಭ್ಯಸ್ತಥಾ ದತ್ವಾ ಯಾಜಕೇಭ್ಯಶ್ಚ ದಕ್ಷಿಣಾಂ ॥ ೨೨ ॥

ಛಿಂದ್ಯಾದ್ವನಸ್ಪತಿಂ ತಜ್ಞೈಸ್ತೈಃ ಕೃತೇ ಸ್ವಸ್ತಿವಾಚನೇ ।
ಪೂರ್ವಸ್ಯಾಂ ದಿಶಿ ಪಾತೋಽಸ್ಯ ಹ್ಯೈಶಾನ್ಯಾಂ ಚಾಪಿ ಯದ್ಭವೇತ್ ॥೨೩॥

ಅಥವಾ ಚೋತ್ತರಸ್ಯಾಂ ತು ತಥಾ ಛಿಂದ್ಯಾತ್ತು ನಾನ್ಯಥಾ ।
ಪೂರ್ವೇಶಾನ್ಯಾಮುದಕ್ಪಾತೋ ದಿಕ್ಷು ತಿಸೃಷು ಚೋತ್ತಮಃ ॥ ೨೪ ॥

---

ಎಂದು ವೃಕ್ಷದೇವತೆಯನ್ನು ಪ್ರಾರ್ಥಿಸಬೇಕು. ಅನಂತರ ಆ ಮರದ ಬುಡದಲ್ಲಿ ಕೊಡಲಿಯನ್ನಿಟ್ಟು ಅದನ್ನು ಧೂಪ ಮತ್ತು ಪುಷ್ಪವೊದಲಾದವುಗಳಿಂದ ಪೂಜಿಸಬೇಕು.

೨೨. ಹೀಗೆ ಪ್ರಾರ್ಥಿಸಿ, ಮಾರನೇದಿನ ಬೆಳಗಾಗುತ್ತಲೇ ಪುನಃ ಆ ಮರವನ್ನು ಶಾಸ್ತ್ರೋಕ್ತರೀತಿಯಿಂದ ಪೂಜಿಸಿ, ಅಲ್ಲಿ ಬ್ರಾಹ್ಮಣರಿಗೂ ಮತ್ತೂ ಯಾಜಕರಿಗೂ (ಪೂಜೆಯನ್ನು ಮಾಡಿಸುವ ಆಚಾರ್ಯರು) ದಕ್ಷಿಣೆಯನ್ನು ಕೊಡಬೇಕು.

೨೩. ಬ್ರಾಹ್ಮಣರು ದಕ್ಷಿಣೆಯನ್ನು ತೆಗೆದುಕೊಂಡು ಸ್ವಸ್ತಿವಚನಗಳನ್ನು ಹೇಳುತ್ತಿರುವಾಗಲೇ ನಿಪುಣರಾದ ಜನರು ಆ ಮರವನ್ನು ಪೂಜೆಮಾಡಿ ಸಿದ್ಧವಾಗಿ ಇಟ್ಟಿದ್ದ ಕೊಡಲಿಯಿಂದ ಕತ್ತರಿಸಬೇಕು. ಈರೀತಿ ಕತ್ತರಿಸುವಾಗ ಆಮರವು ಪೂರ್ವ ಅಥವಾ ಈಶಾನ್ಯ ಅಥವಾ ಉತ್ತರದಿಕ್ಕಿನಲ್ಲಿ ಬೀಳುವಂತೆ ಕತ್ತರಿಸಬೇಕು. ಬೇರೆ ದಿಕ್ಕಿನಲ್ಲಿ ಬೀಳುವಂತೆ ಕಡಿಯಬಾರದು.

೨೪-೨೫. ಮರವನ್ನು ಕಡಿದಾಗ ಅದು ಪೂರ್ವ, ಈಶಾನ್ಯ ಮತ್ತು ಉತ್ತರ ದಿಕ್ಕಿನಲ್ಲಿ ಬಿದ್ದರೆ ಉತ್ತಮವು. ನೈರುತ್ಯ, ಆಗ್ನೇಯ, ದಕ್ಷಿಣ ಈ ಮೂರುದಿಕ್ಕುಗಳಲ್ಲಿ

ನೈರ್ಋತ್ಯಾಗ್ನೇಯಯಾಮ್ಯಾಸು ದಿಕ್ಷು ಪಾತಸ್ತ್ವಶೋಭನಃ ।
ವಾಯವೀ ವಾರುಣೀಭ್ಯಾಂ ಚ ದಿಗ್ಭ್ಯಾಂ ಪಾತಸ್ತು ಮಧ್ಯಮಃ ॥ ೨೫ ॥

ಯಸ್ಯ ವಕ್ಷ್ಯಸ್ಥಿತಾಃ ಶಾಖಾ ವಿನಿರ್ದಿಷ್ಟಾಃ ಸುಶಾಖಿನಃ ।
ತಾಸು ಪೂರ್ವಂ ತತಶ್ಛಿತ್ವಾ ತತಃ ಪಶ್ಚಾದಧೋಚ್ಛಿನತ್ ॥ ೨೬ ॥

ಅವಿಲಗ್ನಮಶಬ್ದಂ ಚ ಪತನಂ ತು ಪ್ರಶಸ್ಯತೇ ।
ಉತ್ಪತೇ ದ್ವಿದಲಂ ಯಸ್ಯ ಆಪಶ್ಚ ಮಧುರಕ್ತಯೋಃ ॥ ೨೭ ॥

ಸರ್ಪಿಸ್ತೈಲಂ ಕ್ಷರೇದ್ಯಸ್ತು ಪಾದಪಂ ತಂ ವಿವರ್ಜಯೇತ್ ।
ಛೇದನಂ ತತ್ಕ್ಷಣೇ ವಾಪಿ ಮಂಡಲಂ ಯಸ್ಯ ದೃಶ್ಯತೇ ॥ ೨೮ ॥

ಸಗರ್ಭಂ ತಂ ವಿಜಾನೀಯಾತ್ ಚಿಹ್ನೈಃ ಸಮುಪಲಕ್ಷಿತಂ ।
ಪೀತಕೇ ಮಂಡಲೇ ಗೋಧಾ ಕೃಷ್ಣೇ ದೀರ್ಘಭುಜಂಗಮಃ ॥ ೨೯ ॥

---

ಬಿದ್ದರೆ ಕೆಟ್ಟದ್ದು. ವಾಯುವ್ಯ ಮತ್ತು ವರುಣ ಈ ಎರಡು ದಿಕ್ಕುಗಳಲ್ಲಿ ಬಿದ್ದರೆ ಮಧ್ಯಮ ಫಲಪ್ರದ ಎಂದು ತಿಳಿಯಬೇಕು.

೨೬. ಯಾವಮರದ ಕೊಂಬೆಯು ಸುಲಭವಾಗಿ ಕಡಿಯುವವನಿಗೆ ಅನುಕೂಲವಾಗಿರುವುದೋ, ಅದನ್ನು ಮೊದಲು ಕತ್ತರಿಸಿ ಅನಂತರ ಆಮರದ ಬುಡವನ್ನು ಕತ್ತರಿಸಬೇಕು.

೨೭. ಮರವು ಬೀಳುವಾಗ ಎಲ್ಲಿಯೂ ತಡೆಯಿಲ್ಲದೇ ನಿಶ್ಶಬ್ದವಾಗಿ ಬಿದ್ದರೆ ಶ್ರೇಷ್ಠವೆನಿಸುವುದು. ಮರವು ಬಿದ್ದಮೇಲೆ ಎರಡು ಭಾಗವಾಗುವುದು, ಆ ಮರದ ಬುಡದಿಂದ ಮಧುರಕ್ತಗಳಾದ ನೀರಾಗಲೀ, ಸುರಿಯುವುದೂ ಕಾಣಬಾರದು.

೨೮. ಮರವನ್ನು ಕಡಿದ ಕೂಡಲೇ ತುಪ್ಪ, ಎಣ್ಣೆಯಂತಿರುವ ದ್ರವವು ಸುರಿಯುವುದಾದರೆ ಅದನ್ನು ಬಿಟ್ಟುಬಿಡಬೇಕು.

ಮತ್ತು ಕಡಿದಕೂಡಲೆ ಅದರಲ್ಲಿ ಮಂಡಲಗಳು (ದುಂಡಾದ ಭಾಗಗಳು) ಕಾಣಿಸಿಕೊಂಡರೆ ಆ ಮರವು ಗರ್ಭವೃಕ್ಷವೆಂದು ತಿಳಿದು ಅದನ್ನೂ ಬಿಡಬೇಕು.

೨೯-೩೦. ಆ ಮಂಡಲವು ಹೊಂಬಣ್ಣವಾಗಿದ್ದರೆ ಉಡುಗರ್ಭವೆಂದೂ, ಕಪ್ಪಾಗಿದ್ದರೆ ಸರ್ಪಗರ್ಭವೆಂದೂ, ಬೆಲ್ಲದಬಣ್ಣವಾಗಿದ್ದರೆ ಪಾಷಾಣಗರ್ಭವೆಂದೂ, ಕಪಿಲ

**ಗುಡವರ್ಣೇ ತು ಪಾಷಾಣಃ ಕಪಿಲೇ ಗೃಹಗೋಧಿಕಾ ।**
**ಅಗ್ನಿವರ್ಣೇ ಜಲಂ ಜ್ಞೇಯಂ ಮಂಜಿಷ್ಠಾಭೇ ಭವೇತ್ ಕ್ರಿಮಿಃ ॥ ೩೦ ॥**

**ದೋಷೈರೇತೈರ್ವಿನಿರ್ಮುಕ್ತಂ ದಾರುಶ್ರೇಷ್ಠಮುದಾಹರೇತ್ ।**
**ಪ್ರಕ್ಷಾಲ್ಯ ಪಲ್ಲವೈಃ ಸಮ್ಯಕ್ ಕ್ವಚಿತ್ಕಾಲಂ ನಿಧಾರಯೇತ್ ॥ ೩೧ ॥**

**ಇತಿ ಶ್ರೀ ಸಾಂಬೇಪುರಾಣೇ ಪ್ರತಿಷ್ಠಾಪನಕಲ್ಪೇ ದಾರುಪರೀಕ್ಷಾ ನಾಮ ತ್ರಿಂಶತ್ತಮೋಽಧ್ಯಾಯಃ.**

---

ವರ್ಣವಾಗಿದ್ದರೆ ಹಲ್ಲೀಗರ್ಭವೆಂದೂ, ಅಗ್ನಿಯಂತೆ ರಕ್ತವರ್ಣವಾಗಿದ್ದರೆ ಜಲಗರ್ಭವೆಂದೂ, ಮಂಜಿಷ್ಠದಂತೆ, ಶ್ಯಾಮಲಬಣ್ಣವಾಗಿದ್ದರೆ ಕ್ರಿಮಿಗರ್ಭವೆಂದೂ, ತಿಳಿಯಬೇಕು.

೩೧. ಹಿಂದೆ ಹೇಳಿದ ಲಕ್ಷಣಗಳಿಂದ ಅವು ದೋಷಯುಕ್ತವಾದ ಮರಗಳೆಂದು ತಿಳಿದು, ನಿರ್ದೋಷವಾದ ಮರವನ್ನು ಆರಿಸಿಕೊಂಡು, ಅದನ್ನು ಚೆನ್ನಾಗಿ ತೊಳೆಯಬೇಕು. ಅನಂತರ ಆ ಮರವನ್ನು ಚಿಗುರುಗಳಿಂದ ಮುಚ್ಚಿ ಕೆಲವುಕಾಲ ಹಾಗೆಯೇ ಇಟ್ಟಿರಬೇಕು. ಆಮೇಲೆ ಅದನ್ನು ತೆಗೆದುಕೊಂಡುಬಂದು ಅದರಲ್ಲಿ ಪ್ರತಿಮೆಗಳನ್ನು ಮಾಡಬಹುದು ಎಂದು ವಸಿಷ್ಠಮಹರ್ಷಿಗಳು ಬೃಹದ್ಬಲರಾಜನಿಗೆ ಹೇಳಿದರು.

ಇಲ್ಲಿಗೆ ಸಾಂಬಪುರಾಣದಲ್ಲಿ ಪ್ರತಿಷ್ಠಾಕಲ್ಪದಲ್ಲಿ ಪ್ರತಿಮಾನಿರ್ಮಾಣಮಾಡಲು ಯೋಗ್ಯವಾದ ಮರಗಳ ಪ್ರತಿಷ್ಠೆಎಂಬ ಮೂವತ್ತನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಏಕತ್ರಿಂಶೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಪ್ರತಿಮಾಲಕ್ಷಣಂ ಕ್ರಮಾತ್ ।
ಏಕಹಸ್ತಾ ದ್ವಿಹಸ್ತಾ ಚ ತ್ರಿಹಸ್ತಾ ವಾ ಪ್ರಮಾಣತಃ ॥ ೧ ॥

ತಥಾ ಸಾರ್ಧತ್ರಿಹಸ್ತಾ ವಾ ಸವಿತುಃ ಪ್ರತಿಮಾ ಶುಭಾ ।
ಪ್ರಾಸಾದಾದ್ದ್ವಾರತೋ ವಾಪಿ ಯತ್ಪ್ರಮಾಣಂ ಪ್ರಕೀರ್ತಿತಂ ॥ ೨ ॥

---

## ಮೂವತ್ತೊಂದನೆಯ ಅಧ್ಯಾಯ.

೧-೨. ವಸಿಷ್ಠರು ರಾಜನನ್ನು ಕುರಿತು, ಎಲೈ ಬೃಹದ್ಬಲರಾಜನೆ, ಇನ್ನು ಮುಂದೆ ನಿನಗೆ ಪ್ರತಿಮೆಯ ಲಕ್ಷಣವನ್ನು ತಿಳಿಸುವೆನು, ಎಂದು ಹೇಗೆಂದರು. ಸೂರ್ಯ ಪ್ರತಿಮೆಯು ಒಂದುಹಸ್ತ (ಮೊಳ) ಎರಡುಹಸ್ತ ಅಥವ ಮೂರುಹಸ್ತ ಉದ್ದವಾಗಿ ಇರಬಹುದು. ಅದು ಶುಭಕರವೆನಿಸುವುದು.

ಅಥವಾ ಪ್ರಾಸಾದ ಮತ್ತು ಬಾಗಿಲು ಇವುಗಳ ಪ್ರಮಾಣಾನುಸಾರವಾಗಿ ಮೂರುವರೆಮೊಳದಷ್ಟು ಉದ್ದವಾಗಿರುವುದು. ಅದನ್ನು ಉತ್ತಮವೆಂದು ಹೇಳುವರು. ಪೂಜಾಫಲವನ್ನು ಬಯಸುವ ಪುರುಷನು ಪ್ರತಿಮಾನಿರ್ಮಾಣಮಾಡಿಸುವ ಕಾಲದಲ್ಲಿ ಅದನ್ನು ಚೆನ್ನಾಗಿ ಗಮನಿಸಿ ಮಾಡಿಸಬೇಕು. ಇದರಿಂದ ಒಳ್ಳೆಯದಾಗುವುದು.

ತದ್ವಾ ಪ್ರಮಾಣಂ ಕರ್ತವ್ಯಂ ಸತತಂ ಪ್ರಿಯಮಿಚ್ಛತಾ ।
ಏಕಹಸ್ತಾ ಭವೇತ್ಸೌಮ್ಯಾ ದ್ವಿಹಸ್ತಾ ಧನಧಾನ್ಯದಾ ॥ ೩ ॥

ತ್ರಿಹಸ್ತಾ ಪ್ರತಿಮಾ ಭಾನೋಃ ಸರ್ವಕಾಮಪ್ರದಾ ಸ್ಮೃತಾ ।
ಸಾರ್ಧತ್ರ್ಯತಯಹಸ್ತಾ ತು ಸುಭಿಕ್ಷಕ್ಷೇಮಕಾರಿಕಾ ॥ ೪ ॥

ಅಗ್ರೇ ಮಧ್ಯೇ ಚ ಮೂಲೇ ಚ ಪ್ರತಿಮಾ ಸರ್ವತಃ ಶುಭಾ ।
ಗಾಂಧರ್ವೀ ಸಾ ತು ವಿಜ್ಞೇಯಾ ಬಹುಧಾನ್ಯಧನಾವಹಾ ॥ ೫ ॥

ದೇವಾಗಾರಸ್ಯ ಯದ್ದ್ವಾರಂ ತಸ್ಮಾದಷ್ಟಾಂಗಮುತ್ಸೃಜೇತ್ ।
ತೃತೀಯೋ ಪಿಂಡಿಕಾ ಕಾರ್ಯಾ ದ್ವೌ ಭಾಗೌ ಪ್ರತಿಮಾ ಭವೇತ್ ॥ ೬ ॥

---

೩-೪. ಒಂದುಮೊಳ ಪ್ರಮಾಣವುಳ್ಳ ಪ್ರತಿಮೆಯು ಸೌಮ್ಯವಾದುದು. ಎರಡುಮೊಳ ಪ್ರಮಾಣವುಳ್ಳ ಸೂರ್ಯಪ್ರತಿಮೆಯು ಧನಧಾನ್ಯಾಭಿವೃದ್ಧಿಯನ್ನು ಉಂಟುಮಾಡುವುವು. ಮೂರುಮೊಳ ಉದ್ದವುಳ್ಳ ಸೂರ್ಯಪ್ರತಿಮೆಯು ಸಕಲ ಇಷ್ಟಾರ್ಥಗಳನ್ನೂ ಕೊಡುವುದು. ಮೂರೂವರೆ ಮೊಳದ ಪ್ರತಿಮೆಯು, ಯಜಮಾನ ನಿಗೆ ಸುಭಿಕ್ಷವನ್ನೂ ಕ್ಷೇಮವನ್ನೂ ಉಂಟುಮಾಡುವುದು.

೫. ಪ್ರತಿಮೆಯ ತುದಿ ಮಧ್ಯಭಾಗ ಮತ್ತು ಬುಡ ಇವೆಲ್ಲವೂ ಒಂದೇ ಸಮ ಪ್ರಮಾಣವುಳ್ಳದ್ದಾಗಿದ್ದರೆ ಆ ಪ್ರತಿಮೆಯು ಗಾಂಧರ್ವೀಪ್ರತಿಮೆಯೆನಿಸುವುದು. ಇದು ಯಜಮಾನನಿಗೆ ಧನ ಧಾನ್ಯಸಂಪತ್ತಿಯನ್ನು ಅಭಿವೃದ್ಧಿಮಾಡುವುದು.

೬. ದೇವಾಲಯದ ಬಾಗಿಲಿನ ಪ್ರಮಾಣವನ್ನು ಎಂಟುಭಾಗಮಾಡಿ ಆ ಎಂಟನೆಯ ಒಂದು ಪ್ರಮಾಣದಲ್ಲಿ ಪ್ರತಿಮೆಯನ್ನು ನಿರ್ಮಿಸಬೇಕು. ಅದರಲ್ಲಿ ಮೂರನೆಯ ಒಂದುಭಾಗ ಪ್ರಮಾಣವನ್ನಿಟ್ಟುಕೊಂಡು, ಅದರ ಅಳತೆಯಿಂದ ಪಿಂಡಿಕೆ ಯನ್ನು ಮಾಡಬೇಕು. (ಪ್ರತಿಮೆಯನ್ನು ನೆಡುವ ಭಾಗಕ್ಕೆ ಉಪಯೋಗಿಸುವ ಕಲ್ಲು ಅಥವ ಮರ ಮುಂತಾದುವುಗಳ ತುಂಡಿಗೆ ಪಿಂಡಿಕಾ ಎಂದು ಹೆಸರು.) ಉಳಿದ ಎರಡು ಭಾಗ ಪ್ರಮಾಣದಿಂದ ಪ್ರತಿಮೆಯನ್ನು ನಿರ್ಮಿಸಬೇಕು.

ಅಂಗುಲ್ಯೈಃ ಸ್ವೈರ್ಭವೇನ್ಮೂರ್ತಿರಶೀತಿಶ್ಚತುರಂಗುಲಾ ।
ವಿಸ್ತಾರಾಯಾಮತಃ ಕಾರ್ಯಂ ವದನಂ ದ್ವಾದಶಾಂಗುಲಂ ॥ ೭ ॥

ಮುಖಾತ್ತ್ರಿಭಾಗಂ ಚಿಬುಕಂ ಲಲಾಟಂ ನಾಸಿಕಾಂ ತಥಾ ।
ಕರ್ಣೌ ನಾಸಿಕಯಾ ತುಲ್ಯೌ ಪಾರ್ಶ್ವೋರ್ವಾ ನಿಯತೇ ತಯೋಃ ॥ ೮ ॥

ನಯನೇ ದ್ವ್ಯಂಗುಲೇ ಸ್ಯಾತಾಂ ತತ್ತ್ರಿಭಾಗೇ ತು ತಾರಕೇ ।
ತೃತೀಯಂ ತಾರಕಾಭಾಗೇ ಕುರ್ಯಾದ್ದೃಷ್ಟಿಂ ವಿಚಕ್ಷಣಃ ॥ ೯ ॥

ಲಾಟಂ ಮಸ್ತಕೋತ್ಸೇಧಂ ಕುರ್ಯಾತ್ತತ್ಸಮಮೇವ ತು ।
ಪರಿಣಾಹಸ್ತು ಶಿರಸೋ ಭವೇದ್ದ್ವಾತ್ರಿಂಶದಂಗುಲಂ ॥ ೧೦ ॥

---

೭. ಪ್ರತಿಮೆಯಪ್ರಮಾಣವು ಯಜಮಾನನ ಎಂಬತ್ತುನಾಲ್ಕು ಅಂಗುಲಕ್ಕೆ ಮೀರಿರಬಾರದು. ಪ್ರತಿಮೆಯ ವಿಸ್ತಾರಕ್ಕೆ ತಕ್ಕಂತೆ ಪ್ರತಿಮೆಯ ಮುಖವನ್ನು ರಚಿಸಬೇಕು. ಅಂದರೆ ಎಂಬತ್ತುನಾಲ್ಕುಅಂಗುಲ ಪ್ರಮಾಣದ ಪ್ರತಿಮೆಗೆ ಹನ್ನೆರಡಂಗುಲ ಪ್ರಮಾಣವುಳ್ಳ ಮುಖವನ್ನಿರಿಸಬೇಕು. ಅಂದರೆ ಪ್ರತಿಮೆಯ ಮುಖವು ಮೂರ್ತಿಯ ಒಟ್ಟು ಅಳತೆಯ ಏಳನೆಯ ಒಂದು ಭಾಗವಿರಬೇಕೆಂದು ಮುಖ್ಯ ತಾತ್ಪರ್ಯ.

೮-೯. ಮುಖಪ್ರಮಾಣದ ಮೂರನೆಯ ಒಂದುಭಾಗದಿಂದ ಗಲ್ಲವನ್ನೂ, ಹಣೆಯನ್ನೂ ಮತ್ತು ಮೂಗನ್ನೂ ಪ್ರತಿಮೆಯಲ್ಲಿ ರಚಿಸಬೇಕು. ಕಿವಿಯ ಅಳತೆಯು ಮೂಗಿನ ಪ್ರಮಾಣಕ್ಕೆ ಸರಿಯಾಗಿರಬೇಕು. ಪ್ರತಿಮೆಯಕಣ್ಣುಗಳು ಎರಡಂಗುಲ ಪ್ರಮಾಣವಿರಬೇಕು. ಆ ಕಣ್ಣಿನ ಪ್ರಮಾಣದ ಮೂರನೆಯ ಒಂದುಭಾಗ ಅಳತೆಯಿಂದ ಕಣ್ಣುಗುಡ್ಡೆಯನ್ನು ರಚಿಸಬೇಕು. ಅನಂತರ ಆ ಗುಡ್ಡೆಯ ಪ್ರಮಾಣವನ್ನು ಪುನಃ ಮೂರುಭಾಗ ಮಾಡಿಕೊಂಡು ಅದರ ಮೂರನೆಯ ಭಾಗದಲ್ಲಿ ನಿಪುಣನಾದ ಶಿಲ್ಪಿಯು ದೃಷ್ಟಿಯನ್ನಿರಿಸಬೇಕು.

೧೦. ಹಣೆ ಮತ್ತು ತಲೆ ಇವುಗಳ ಎತ್ತರವು ಸಮನಾಗಿರಬೇಕು. ಶಿರಸ್ಸಿನ ಸುತ್ತಳತೆಯು ಮೂವತ್ತೆರಡು ಅಂಗುಲವಿರಬೇಕು.

ತುಲ್ಯಾ ನಾಸಿಕಯಾ ಗ್ರೀವಾ ಮುಖೇನ ಹೃದಯಾಂತರಂ ।
ಮುಖಮಾತ್ರಾ ಭವೇನ್ನಾಭಿಃ ತತೋ ಮೇಢ್ರಮನಂತರಂ ॥ ೧೧ ॥

ಮುಖವಿಸ್ತಾರಮುರಸಃ ತತೋಽರ್ಧಂ ತು ಕಟಿರ್ಭವೇತ್ ।
ಬಾಹುಪ್ರಬಾಹಾ ತತ್ತುಲ್ಯಾ ವೂರೂಜಂಘೇ ಚ ತತ್ಸಮೇ ॥ ೧೨ ॥

ಗುಲ್ಫಾಧಸ್ತಾತ್ತು ಪಾದಃ ಸ್ಯಾದುಚ್ಛ್ರಿತಶ್ಚತುರಂಗುಲೈಃ ।
ಷಡಂಗುಲಸ್ತು ವಿಸ್ತೀರ್ಣಃ ತಸ್ಯಾಂಗುಷ್ಠೋಽಂಗುಲತ್ರಯಂ ॥ ೧೩ ॥

ಪ್ರದೇಶಿನೀ ಚ ತತ್ತುಲ್ಯಾ ಹೀನಾಃ ಶೇಷಾ ನಖೈರ್ಯುತಾಃ ।
ಚತುರ್ದಶಾಂಗುಲಃ ಪಾದಸ್ಯಾಯಾಮಃ ಪರಿಕೀರ್ತಿತಃ ॥ ೧೪ ॥

---

೧೧. ಪ್ರತಿಮೆಯ ಕುತ್ತಿಗೆಯ ಎತ್ತರವು ಮೂಗಿನ ಪ್ರಮಾಣದಷ್ಟೇ ಇರಬೇಕು. ನಾಭಿ ಮತ್ತು ಹೃದಯದ ಅಂತರಪ್ರಮಾಣವು ಮುಖಕ್ಕೆ ಸಮನಾಗಿರಬೇಕು. ನಾಭಿಯು (ಹೊಕ್ಕಳು) ಹೊರಭಾಗ ಮಾತ್ರ ಕಾಣುವಂತೆ ತೋರಬೇಕು. ಅನಂತರ ಶಿಶ್ನವನ್ನು ರಚಿಸಬೇಕು.

೧೨. ಎದೆಯ ಪ್ರಮಾಣವು ಮುಖದ ವಿಸ್ತಾರಕ್ಕನುಸಾರವಾಗಿ ಇರಬೇಕು. ಸೊಂಟದ ಅಳತೆಯು ಎದೆಯ ಸುತ್ತಳತೆಯ ಅರ್ಧದಷ್ಟಿರಬೇಕು. ತೋಳು ಮತ್ತು ಮೊಳಕೈಗಳು ತೊಡೆ ಮತ್ತು ಮೊಳಕಾಲುಗಳಿಗೆ ಸರಿಯಾಗಿರಬೇಕು.

೧೩. ಹರಡಿನ ಕೆಳಭಾಗದಲ್ಲಿ ಹೆಜ್ಜೆಯನ್ನು ರಚಿಸಬೇಕು. ಅದು ನಾಲ್ಕು ಅಂಗುಲದಷ್ಟು ದಪ್ಪವಿರಬೇಕು. ಆರು ಅಂಗುಲ ಅಗಲವಿರಬೇಕು. ಆ ಹೆಜ್ಜೆಯ ಹೆಬ್ಬೆರಳು ಮೂರು ಅಂಗುಲ ಉದ್ದವಿರಬೇಕು.

೧೪. ಕಾಲುಂಗುಷ್ಠದ ಪಕ್ಕದ ಬೆರಳು ಅಂಗುಷ್ಠದಷ್ಟೇ ಉದ್ದವಿರಬೇಕು. ಉಳಿದ ಬೆರಳುಗಳು ಒಂದಕ್ಕಿಂತಒಂದು ಪರಸ್ಪರ ಸ್ವಲ್ಪ ಕಿರಿದಾಗಿರಬೇಕು. ಎಲ್ಲಾ ಬೆರಳುಗಳಲ್ಲಿಯೂ, ಉಗುರುಗಳನ್ನು ಸ್ಪಷ್ಟವಾಗಿ ಕಾಣುವಂತೆ ಬಿಡಿಸಿರಬೇಕು. ಪಾದದ ಉದ್ದವು ಹದಿನಾಲ್ಕು ಅಂಗುಲವಿರಬೇಕು.

ಏವಂ ಲಕ್ಷಣಯುಕ್ತಾ ಯಾ ಭವೇತ್ಪೂಜಿತಲಕ್ಷಣಾ ।
ಅಂಸೌ ಭುಜೌ ತಥೈವೋರೂ ಭ್ರೂಲಲಾಟಂ ಸನಾಸಿಕಂ ॥ ೧೫ ॥

ಗಂಡಂ ಚ ನಿಯತಂ ಮೂರ್ತೇಃ ಕುರ್ಯಾತ್ತಜ್ಞಃ ಸಮುನ್ನತಿಂ ।
ವಿಶಾಲಧವಲಾ ತಾಮ್ರಪಕ್ಷ್ಮಲಾಯತಲೋಚನಃ ॥ ೧೬ ॥

ಸಸ್ಮಿತಾನನಪದ್ಮಾಸ್ಯಚಾರುಬಿಂಬಾಧರಃ ಶುಭಃ ।
ರತ್ನಪ್ರೋದ್ಭಾಸಿಮುಕುಟಃ ಕಟಕಾಂಗದಹಾರವಾನ್ ॥ ೧೭ ॥

ಅವ್ಯಂಗಪದಬಂಧಾದಿಸಮಾಯೋಗೋಪಶೋಭಿತಃ ।
ಸುಬಾಹುಮಂಡಲಶ್ಚಾರುವಿಚಿತ್ರಮಣಿಕುಂಡಲಃ ॥ ೧೮ ॥

---

೧೫-೧೬. ಹಿಂದೆ ಹೇಳಿದಂತೆ ಲಕ್ಷಣಗಳುಳ್ಳ ಪ್ರತಿಮೆಯು ಪೂಜಾಯೋಗ್ಯವಾದುದೆಂದು ಭಾವಿಸಬೇಕು. ಹೆಗಲು, ಭುಜ, ತೊಡೆ, ಹುಬ್ಬು, ಹಣೆ ಮತ್ತು ನಾಸಿಕ ಗಂಡಪ್ರದೇಶ (ಕಪೋಲಪ್ರದೇಶ) ಇವುಗಳೆಲ್ಲವನ್ನೂ ನಿಯಮಾನುಸಾರ ಉಬ್ಬಿದ ಹಾಗೆ ಕಾಣುವಂತೆ, ನಿಪುಣನಾದ ಶಿಲ್ಪಿಯು ರಚಿಸಬೇಕು. ಮತ್ತು ಮೂರ್ತಿಯ ಕಣ್ಣುಗಳು ವಿಶಾಲವಾಗಿ ಶುಭ್ರವಾಗಿಯೂ ಕೆಂಪಾದ ಬಣ್ಣವುಳ್ಳದ್ದಾಗಿಯೂ ಇರಬಹುದು. ರೆಪ್ಪೆಗಳ ಕೂದಲುಗಳು ದಟ್ಟವಾಗಿರಬೇಕು.

೧೭-೧೮. ವಿಗ್ರಹವು ಪದ್ಮದಂತಿರುವ ಮುಖದಿಂದ ಕೂಡಿ ಮುಗುಳುನಗೆಯನ್ನು ಬೀರುತ್ತಿರುವಂತಿರಬೇಕು. ತುಟಿಗಳು ತೊಂಡೆಹಣ್ಣುಗಳಂತೆ ದುಂಡಾಗಿ ಸುಂದರವಾಗಿರಬೇಕು. ಹೀಗಿದ್ದರೆ ಅದು ಶುಭಪ್ರದವೆನಿಸುವುದು. ಅಲ್ಲದೆ ಮೂರ್ತಿಗೆ ರತ್ನಗಳಿಂದ ಹೊಳೆಯುತ್ತಿರುವ ಕಿರೀಟವೂ, ಕಡಗ, ಭುಜಕೀರ್ತಿ ಮತ್ತು ಹಾರ ಇವುಗಳೂ ಕಾಣುವಂತಿರಬೇಕು. ಕಾಲಿಗೆ ಹಾಕುವ ಅವ್ಯಂಗಾಭರಣವನ್ನೂ, ಪದಬಂಧವೆಂದರೆ ಕಾಲುಬಳೆಯನ್ನೂ ಜೊತೆಯಲ್ಲಿ ಕೆತ್ತಿರಬೇಕು. ಒಳ್ಳೆಯ ಬಾಹುಮಂಡಲವನ್ನೂ, ಚಿತ್ರ ವಿಚಿತ್ರವಾಗಿ ಹೊಳೆಯುತ್ತಿರುವ ಮಣಿ ಮಂಡಲವನ್ನೂ ನಿರ್ಮಿಸಬೇಕು.

ಕರಾಭ್ಯಾಂ ಕಾಂಚನೀಮುದ್ರಾಪ್ರಾಪ್ತಹಸ್ತಸರೋರುಹಾಂ ।
ಏವಂ ಲಕ್ಷಣಸಂಯುಕ್ತಾಂ ಕಾರಯೇದೀಪ್ಸಿತಪ್ರದಾಂ ॥ ೧೯ ॥

ಪ್ರಜಾಭ್ಯಶ್ಚ ತದಾ ಭಾನುಃ ಶಿವಾರೋಗ್ಯಾಭಯಪ್ರದಃ ।
ಅತ್ಯಂಗಾಯಾಂ ನೃಪಭಯಂ ಹೀನಾಂಗಾಯಾಮಕಲ್ಪತಾ ॥ ೨೦॥

ಧ್ಯಾತಾಯಾಂ ಚಕ್ಷುಷಃ ಪೀಡಾ ಕೃಶಾಯಾಂ ತು ದರಿದ್ರತಾ ।
ಸಕ್ಷತಾಯಾಂ ಭಯಂ ಶಸ್ತ್ರಾತ್ ಸ್ಫುಟಿತಾ ಮೃತ್ಯುಕಾರಿಣೀ ॥ ೨೧ ॥

ದಕ್ಷಿಣಾವನತಾಯಾಂ ತು ಶಶ್ವತ್ಸ್ಯಾದಾಯುಷಃ ಕ್ಷಯಃ ।
ಉತ್ತರಾವನತಾಯಾಂ ತು ವಿಯೋಗೋ ಭವತಿ ಧ್ರುವಂ ॥ ೨೨ ॥

---

೧೯. ವಿಗ್ರಹದ ಕೈಯಲ್ಲಿ ಚಿನ್ನದ ಮುದ್ರಾಂಗುರಗಳೂ, ಕಮಲಗಳೂ ಇರುವಂತೆ ಕೆತ್ತಬೇಕು. ಈರೀತಿ ಎಲ್ಲಾ ಲಕ್ಷಣಗಳಿಂದಲೂ ಕೂಡಿದ್ದರೆ ಆಗ ಆ ಪ್ರತಿಮೆಯು ಕರ್ತೃವಿನ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವುದು.

೨೦. ಈರೀತಿ ಸೂರ್ಯದೇವನ ಪ್ರತಿಮೆಯನ್ನು ಎಲ್ಲಾ ಲಕ್ಷಣಗಳಿಂದಲೂ ಕೂಡಿರುವಂತೆ ಮಾಡಿಸಿ ಅದನ್ನು ಪೂಜಿಸಿದರೆ ಆಗ ಸೂರ್ಯಪರಮಾತ್ಮನು ತನ್ನ ಭಕ್ತ ಪ್ರಜೆಗಳಿಗೆ ಆರೋಗ್ಯವನ್ನೂ ಅಭಯವನ್ನೂ (ಅಂದರೆ ಯಾವಭೀತಿಯೂ ಇಲ್ಲದೇ ಇರುವಿಕೆಯನ್ನೂ) ಉಂಟುಮಾಡುವನು. ಪ್ರತಿಮೆಯಅಂಗಗಳು ಪ್ರಮಾಣಕ್ಕಿಂತಲೂ ಅಧಿಕವಾಗಿದ್ದರೆ ರಾಜಭಯವೂ, ಕಡಿಮೆ ಅವಯವವುಳ್ಳದ್ದಾಗಿದ್ದರೆ ಅಸಾಮರ್ಥ್ಯವೂ ಉಂಟಾಗುವುದು.

೨೧. ವಿಗ್ರಹವು ಚಿಂತಾಸಕ್ತವಾಗಿರುವಂತಿದ್ದರೆ, ದೃಷ್ಟಿದೋಷವುಳ್ಳದ್ದಾದರೆ ಕರ್ತೃವಿಗೆ ನೇತ್ರಪೀಡೆಯುಂಟು. ಕೃಶವಾಗಿದ್ದರೆ ದಾರಿದ್ರ್ಯ (ಬಡತನವು) ವುಂಟಾಗುವುದು. ಸ್ವಲ್ಪಭಿನ್ನವಾಗಿದ್ದರೆ ಶಸ್ತ್ರಭಯವು. ಬಿರಿದು ಪಾಲಾಗಿದ್ದರೆ ಮೃತ್ಯುವುಂಟಾಗುವುದೆಂದು ತಿಳಿಯಬೇಕು. ಈ ಫಲಗಳೆಲ್ಲವೂ ಕರ್ತೃವಿಗೆ ಸಂಬಂಧಪಡುವುವು.

೨೨. ಪ್ರತಿಮೆಯು ದಕ್ಷಿಣಕ್ಕೆ ಬಗ್ಗಿದ್ದರೆ ಕರ್ತೃವಿನ ಆಯುಸ್ಸು ಕ್ಷಯವಾಗುವುದು. ಉತ್ತರಕ್ಕೆ ವಾಲಿದ್ದರೆ ವಿಯೋಗವುಂಟಾಗುವುದು. ಇದು ನಿಶ್ಚಯ.

ನಾತಿಲೋಕ್ಯಾ ನ ಚಾಲೋಕ್ಯಾ ಋಜ್ವೀ ಮೂರ್ತಿಃ ಪ್ರಶಸ್ಯತೇ ।
ತಸ್ಮಾದ್ಭಾಸ್ಕರಭಕ್ತೇನ ಲೋಕದ್ವಯಹಿತೈಷಿಣಾ ॥ ೨೩ ॥

ತಾ ಮೂರ್ತಯಃ ಶುಭಾಃ ಕಾರ್ಯಾಸ್ತದಧೀನಾಸ್ತು ಸಂಪದಃ ।
ಶಿರೋರುಗಂಡವದನೈಃ ಸರ್ವಾಂಗಾವಯವೈಸ್ತಥಾ ।
ಏವಂ ಲಕ್ಷಣಸಂಪೂರ್ಣಾ ಸಾ ಶುಭಾ ಪ್ರತಿಮಾ ನೃಣಾಂ ॥ ೨೪ ॥

ಇತಿ ಶ್ರೀ ಸಾಂಬಪುರಾಣೇ ಏಕತ್ರಿಂಶತ್ತಮೋಽಧ್ಯಾಯಃ.

---

೨೩. ವಿಗ್ರಹದ ದೃಷ್ಟಿಯು ನೋಡಲು ಸಾಧ್ಯವಾಗದಂತೆ ಕ್ರೂರವಾಗಿರ ಬಾರದು, ದೃಷ್ಟಿಶೂನ್ಯವಾಗಿಯೂ ಇರಬಾರದು. ಯಾವಾಗಲೂ ನೆಟ್ಟಗಿರುವ ಮೂರ್ತಿಯು ಶ್ರೇಷ್ಠವೆನಿಸುವುದು. ಇಹಪರಗಳೆಂಬೆರಡು ಲೋಕಗಳಲ್ಲಿಯೂ ಹಿತವನ್ನು ಅಪೇಕ್ಷಿಸುವ ಸೂರ್ಯದೇವನ ಭಕ್ತನು ಈ ಲಕ್ಷಣಗಳೆಲ್ಲವನ್ನೂ ಚೆನ್ನಾಗಿ ಪರೀಕ್ಷಿಸಿ ಶುಭಕರವಾದ ಶುಭಲಕ್ಷಣಗಳಿಂದ ಕೂಡಿದ ಪ್ರತಿಮೆಗಳನ್ನು ನಿರ್ಮಿಸ ಬೇಕು. ಸಕಲಐಶ್ವರ್ಯಗಳೂ ಆ ವಿಗ್ರಹದ ಅಧೀನವಾಗಿರುವುದರಿಂದ ಅದನ್ನು ಗಮನವಿಟ್ಟು ಮಾಡಿಸಬೇಕು.

೨೪. ತಲೆ, ಎದೆ, ಕಪೋಲ, ಮುಖ, ಮುಂತಾದ ಎಲ್ಲಾ ಅವಯವಗಳೂ ಈ ಎಲ್ಲಾ ಭಾಗವೂ ಹಿಂದೆ ಹೇಳಿದಂತೆ ಲಕ್ಷಣಗಳಿಂದ ಪರಿಪೂರ್ಣವಾಗಿದ್ದರೆ ಅಂತಹ ಪ್ರತಿಮೆಯು ಎಲ್ಲಾ ಜನರಿಗೂ ಶುಭಕರವೆನಿಸಿ ಸಕಲ ಇಷ್ಟಾರ್ಥಗಳನ್ನೂ ಕೊಡುವುದು.

ಇಲ್ಲಿಗೆ ಸಾಂಬಪುರಾಣದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ದ್ವಾತ್ರಿಂಶತ್ತಮೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ಅತೋಽಧಿವಾಸನಂ ಕಾರ್ಯಂ ವಿಧಿದೃಷ್ಟೇನ ಕರ್ಮಣಾ ।
ಸಾಮುದ್ರಂ ತೋಯಮಾಹೃತ್ಯ ಜಾಹ್ನವ್ಯಂ ಯಾಮುನಂ ತಥಾ ॥ ೧ ॥

ಸಾರಸ್ವತಂ ಜಲಂ ಪುಣ್ಯಂ ಚಾಂದ್ರಭಾಗಂ ಸಸೈಂಧವಂ ।
ಪೌಷ್ಕರಂ ಚ ಜಲಂ ಶ್ರೇಷ್ಠಂ ಗಿರಿಪ್ರಸ್ರವಣೋದಕಂ ॥ ೨ ॥

---

## ಮೂವತ್ತೆರಡನೆಯ ಅಧ್ಯಾಯ.

೧-೩. ಅನಂತರ ಶಾಸ್ತ್ರೋಕ್ತರೀತಿಯಿಂದ ಅಧಿವಾಸ ಕರ್ಮವನ್ನು ಆರಂಭಿಸ ಬೇಕು. ಇದಕ್ಕೋಸ್ಕರ ಸಮುದ್ರದ ನೀರನ್ನೋ ಗಂಗಾನದಿಯ ನೀರನ್ನೋ ಅಥವಾ ಯಮುನಾನದಿಯ ನೀರನ್ನೋ ತಂದು ಅದರಲ್ಲಿ ಮೊದಲು ಆ ಪ್ರತಿಮೆಯನ್ನು ಇರಿಸಿ ಜಲಾಧಿವಾಸಮಾಡಿಸಬೇಕು.

ಸಾರಸ್ವತ ಜಲ, (ಸರಸ್ವತೀ ನದಿಯ ನೀರನ್ನು) ಚಂದ್ರಭಾಗಾನದಿಯ ನೀರು, ಪುಣ್ಯಕರವಾದ ಸಮುದ್ರದ ನೀರು, ಶುಭ್ರವಾದ ಕೊಳದನೀರು ಅಥವ ಬೆಟ್ಟಗುಡ್ಡ ಗಳಲ್ಲಿ ಜಿನುಗುವ ನೀರು ಇವುಗಳಲ್ಲಿ ಒಂದನ್ನು ತಂದು ಮೂರ್ತಿಯನ್ನು ಅಧಿವಾಸ ಮಾಡಿಸಬೇಕು.

ಅನ್ಯದ್ವಾ ಶುಚಿ ಯತ್ತೋಯಂ ನದೀನದತಡಾಗಜಂ ।
ಯಥಾಶಕ್ತ್ಯಾ ತದಾಹೃತ್ಯ ಕಲಶೈಃ ಕಾಂಚನಾದಿಭಿಃ ॥ ೩ ॥

ತತಸ್ತು ಮಣಿರತ್ನಾನಿ ಸರ್ವಬೀಜೌಷಧೀ ಸ್ತಥಾ ।
ಸುಗಂಧಾನಿ ಚ ಮಾಲ್ಯಾನಿ ಸ್ಥಲಜಾನ್ಯಂಬುಜಾನಿ ಚ ॥ ೪ ॥

ಚಂದನಾನಿ ಚ ಮುಖ್ಯಾನಿ ಗಂಧಾಂಶ್ಚ ವಿವಿಧಾನ್ ವರಾನ್ ।
ಬ್ರಾಹ್ಮೀಂ ಸುವರ್ಚಲಾಂ ಮುಸ್ತಾಂ ವಿಷ್ಣುಕ್ರಾಂತಾಂ ಶತಾವರೀಂ ॥ ೫ ॥

ದೂರ್ವಾಂ ಚ ಶಂಖಪುಷ್ಪೀಂ ಚ ಪ್ರಿಯಂಗೂಂ ರಜನೀಂ ವಚಾಂ ।
ಸಂಭೃತ್ಯೈತಾಂಸ್ತು ಸಂಭಾರಾನ್ ನಾನಾಕರ್ಮವಿಧಾನವಿತ್ ॥ ೬ ॥

ವಟಾಶ್ವತ್ಥಶಿರೀಷಾಣಾಂ ಪಲ್ಲವೈಃ ಕುಶಸಂಯುತೈಃ ।
ಕಲಶೋಪರಿ ವಿನ್ಯಸ್ತೈರ್ದೇಯಂ ಸ್ನಾನೋದಕಂ ರವೇಃ ॥ ೭ ॥

---

ಅಥವಾ ಶುದ್ಧವಾದ ನದೀ, ನದ ಮತ್ತು ಕೆರೆಗಳಲ್ಲಿರುವ ನೀರನ್ನು ಚಿನ್ನವೇ ಮೊದಲಾದ ಕಲಶಗಳಿಂದ ತೆಗೆದುಕೊಂಡು ಬಂದು, ಅದರಲ್ಲಿಯಾದರೂ ಅಧಿವಾಸ ಮಾಡಿಸಬಹುದು.

೪-೬. ಆ ಮೇಲೆ ಮುತ್ತು, ರತ್ನಗಳು, ಎಲ್ಲಾ ಬೀಜಗಳೂ, ಜ್ಯೋತಿರ್ಲತೆಗಳೂ, ಸುಗಂಧ ದ್ರವ್ಯಗಳು, ಹೂಮಾಲೆಗಳು. ನೆಲದಮೇಲೆ ಬೆಳದ ಹೂಗಳು ನೀರಿನಲ್ಲಿ ಬೆಳೆದ ಕಮಲವೇ ಮೊದಲಾದ ಪುಷ್ಪಗಳು, ಶ್ರೇಷ್ಠವಾದ ಚಂದನಗಳು ಉತ್ತಮವಾದ ಅನೇಕವಿಧ ಗಂಧಗಳೂ, ಸೋಮಲತೆ, ಸುವರ್ಚಲ ಎಂಬ ಲತೆ, ಕೊನ್ನಾರಿಗೆಡ್ಡೆ, ವಿಷ್ಣುಕ್ರಾಂತಿ ಶತಾವರೀ, ಗರಿಕೆ, ಶಂಖಪುಷ್ಪ, ನವಣೆ, ರಜನೀ, ಬಜೆ ಮುಂತಾದ ಸಾಮಾನುಗಳನ್ನೆಲ್ಲಾ ಸಿದ್ಧಪಡಿಸಿಟ್ಟುಕೊಳ್ಳಬೇಕು.

೭. ಹಿಂದೆ ಹೇಳಿದಂತೆ ಸುವರ್ಣವೇ ಮೊದಲಾದ ಕಲಶಗಳಿಂದ ತಂದ ನೀರಿನ ಮೇಲೆ ಅಂದರೆ ಕಲಶಗಳಮೇಲೆ ಆಲ, ಅರಳಿ, ಬಾಗೇಮರಗಳ ಪಲ್ಲವ, ದರ್ಭೆ ಇವುಗಳನ್ನು ಮುಚ್ಚಬೇಕು. (ಕಲಶಗಳ ಮೇಲೆ ಆ ಪಲ್ಲವಾದಿಗಳನ್ನು ಇರಿಸಬೇಕು.) ಅನಂತರ ಆ ಕಲಶೋದಕದಿಂದ ಸೂರ್ಯ ಪ್ರತಿಮೆಗೆ ಅಭಿಷೇಕಮಾಡಬೇಕು.

ಕಾಂಚನೈರಾಜತೈಸ್ತಾಮ್ರೈರ್ವಾರ್ನ್ಮಯೈಃ ಕಲಶೈ ಸ್ತಥಾ ।
ಸಾಕ್ಷತೈಃ ಸಹಿರಣ್ಯೈಶ್ಚ ಸರ್ವೌಷಧಿಸಮನ್ವಿತೈಃ ॥ ೮ ॥

ಗಾಯತ್ರೀಪರಿಭೂತೈಸ್ತೈರಷ್ಟಭಿಃ ಸ್ನಾಪಯೇದ್ರವಿಂ ।
ಕುಶೋತ್ತರಾಂಸ್ತತಃ ಕೃತ್ವಾ ವೇದೀಂ ಪಕ್ವೇಷ್ಟಿಕಾಮಯೀಂ ॥ ೯ ॥

ತಸ್ಯಾಂ ವೇದ್ಯಾಂ ಸಮಾರೋಪ್ಯ ಪರಿಧಾಪ್ಯಚ ವಾಸಸೀ ।
ಪ್ರತಿಮಾಮಭಿಷಿಂಚೇತ ಸೋಪವಾಸಃ ಪ್ರಯತ್ನತಃ ॥ ೧೦ ॥

ಮೂರ್ಧ್ನಿ ಸರ್ವೌಷಧೀನ್ದತ್ವಾ ತಥೈವಾಮಲಕಾನಿ ಚ ।
ವಾಕ್ಯಮುಚ್ಚಾರಯೇದ್ದೇವಮುಪರ್ಯುಪರಿ ಗಜ್ಜಲಂ ॥ ೧೧ ॥

ದೇವಾಸ್ತ್ವಾಮಭಿಷಿಂಚಂತು ಬ್ರಹ್ಮಾವಿಷ್ಣುಶಿವಾದಯಃ ।
ವ್ಯೋಮಗಂಗಾಂಬುಪೂರ್ಣೇನ ಶುದ್ಧೇನ ಕಲಶೇನ ತು ॥ ೧೨ ॥

---

೮-೯. ಚಿನ್ನ, ಬೆಳ್ಳಿ, ತಾಮ್ರ, ಅಥವಾ ಮಣ್ಣು ಮೊದಲಾದುವುಗಳಿಂದ ನಿರ್ಮಿತವಾದ ಎಂಟು ಕಲಶಗಳಲ್ಲಿಯೂ, ಅಕ್ಷತೆಕಾಳುಗಳು, ಸುವರ್ಣನಾಣ್ಯಗಳು, ಸಕಲ ಜ್ಯೋತಿರ್ಲತೆಗಳು, ಇವುಗಳನ್ನು ಹಾಕಿ ಆ ಕಲಶವನ್ನು ಗಾಯತ್ರೀ ಮಂತ್ರದಿಂದ ಪರಿಶುದ್ಧಿಮಾಡಿ, ಆ ನೀರಿನಿಂದ ಸೂರ್ಯ ಪ್ರತಿಮೆಗೆ ಅಭಿಷೇಕಮಾಡಬೇಕು. ಅನಂತರ ಉತ್ತರಾಭಿಮುಖವಾಗಿ ದರ್ಭೆಗಳನ್ನು ಹಾಕಿ ಚೆನ್ನಾಗಿ ಬೆಂದ ಇಟ್ಟಿಗೆಗಳನ್ನು ತೆಗೆದುಕೊಂಡು ಅವುಗಳಿಂದ ಜಗಲಿಯನ್ನು ಮಾಡಿಸಬೇಕು. (ವೇದಿಕೆ ಮಾಡಿಸಬೇಕು).

೧೦. ಅನಂತರ ಆ ವೇದಿಕೆಯಮೇಲೆ ವಸ್ತ್ರವನ್ನು ಹಾಸಿ, ಅದರಮೇಲೆ ಸೂರ್ಯದೇವನ ಪ್ರತಿಮೆಯನ್ನಿಟ್ಟು ಉಪವಾಸವ್ರತದಿಂದ ಆ ಪ್ರತಿಮೆಗೆ ಶ್ರದ್ಧೆಯಿಂದ ಅಭಿಷೇಕಮಾಡಬೇಕು.

೧೧-೧೨. ಆ ಮೇಲೆ ಪ್ರತಿಮೆಯಮೇಲೆ ನಾನಾವಿಧವಾದ ವನಸ್ಪತಿಗಳನ್ನೂ ನೆಲ್ಲಿಯ ಕಾಯಿಯನ್ನು ಸಹ ಇರಿಸಿ ಸ್ವಲ್ಪ ಸ್ವಲ್ಪವಾಗಿ ನೀರನ್ನು ಪ್ರೋಕ್ಷಿಸುತ್ತಾ "ಎಲೈ ದೇವದೇವನಾದ ಸೂರ್ಯನೇ, ಬ್ರಹ್ಮವಿಷ್ಣು ಮಹೇಶ್ವರರೇ ಮೊದಲಾದ ದೇವತೆಗಳು, ವ್ಯೋಮ ಗಂಗಾಜಲದಿಂದ ತುಂಬಿರುವ ಈ ಮೊದಲನೆಯ ಕಲಶದಿಂದ ನಿನಗೆ ಅಭಿಷೇಕ ಮಾಡಲಿ" ಎಂದು ಪ್ರಾರ್ಥಿಸುತ್ತಾ ಸ್ನಾನಮಾಡಿಸಬೇಕು.

ಮರುತಶ್ಚಾಽಭಿಷಿಂಚಂತು ಭಕ್ತಿಮಂತೋ ದಿವಸ್ಪತೇ ।
ಮೇಘತೋಯಸುಪೂರ್ಣೇನ ದ್ವಿತೀಯಕಲಶೇನ ತು ॥ ೧೩ ॥

ಸಾರಸ್ವತೇನ ತೋಯೇನ ಪೂರ್ಣೇನ ಸುರಸತ್ತಮಾಃ ।
ವಿದ್ಯಾಧರಾಭಿಷಿಂಚಂತು ಲೋಕಪಾಲಾಃ ಸಮಾಗತಾಃ ॥ ೧೪ ॥

ಸಾಗರೋದಕಪೂರ್ಣೇನ ಚತುರ್ಥಕಲಶೇನ ತು ।
ವಾರಿಣಾ ಪರಿಪೂರ್ಣೇನ ಪದ್ಮರೇಣುಸುಗಂಧಿನಾ ॥ ೧೫ ॥

ಪಂಚಮೇನಾಭಿಷಿಂಚಂತು ನಾಗಾಶ್ಚ ಕಲಶೇನ ತೇ ।
ಹಿಮವದ್ಧೇಮಕೂಟಾದ್ಯಾ ಅಭಿಷಿಂಚಂತು ಪರ್ವತಾಃ ॥ ೧೬ ॥

---

೧೩. "ಎಲೈ ಅಂತರಿಕ್ಷಾಧಿಪತಿಯಾದ ಸೂರ್ಯನೇ, ಮೇಘಗಳ ನೀರಿನಿಂದ ತುಂಬಿರುವ ಈ ಎರಡನೆಯ ಕಲಶದಿಂದ ಸಪ್ತಮರುತ್ತುಗಳೂ (ವಾಯುಗಳೂ) ಭಕ್ತಿಯಿಂದ ನಿನಗೆ ಅಭಿಷೇಕಮಾಡಲಿ" ಎನ್ನಬೇಕು.

೧೪. ಎಲೈ ಭಾಸ್ಕರನೆ, ಸರಸ್ವತೀನದಿಯ ನೀರಿನಿಂದ ತುಂಬಿದ ಕಲಶದಿಂದ ದೇವಶ್ರೇಷ್ಠರಾದ ವಿದ್ಯಾಧರರು ನಿನಗೆ ಅಭಿಷೇಕಮಾಡಲಿ. ಎಂದು ಹೇಳಬೇಕು.

೧೫. ಎಲೈ ದೇವನೇ, ಅಷ್ಟದಿಕ್ಪಾಲಕರು, ಸಮುದ್ರದ ನೀರಿನಿಂದ ತಂದಿರುವ ಈ ನಾಲ್ಕನೆಯ ಕಲಶದಿಂದ ನಿನಗೆ ಅಭಿಷೇಕಮಾಡಲಿ ಎಂದು ಹೇಳುತ್ತಾ ತಾನು ನೀರೆರೆಯಬೇಕು.

ಕಮಲದ ಪರಾಗದಿಂದ ಸುವಾಸನೆ ಹೊಂದಿರುವ ನೀರಿನಿಂದ ಪರಿಪೂರ್ಣವಾಗಿರುವ ಐದನೆಯ ಕಲಶದಿಂದ ನಾಗರು ನಿನಗೆ ಅಭಿಷೇಕಮಾಡಲಿ ಎಂದು ಹೇಳಬೇಕು.

೧೬. ಎಲೈ ದೇವನೆ, ಹಿಮವಂತ, ಹೇಮಕೂಟ ಮೊದಲಾದ ಪರ್ವತಗಳು, ಬೆಟ್ಟದ ಝರಿಗಳಲ್ಲಿ ಹರಿಯುವ ನೀರಿನಿಂದ ಪೂರ್ಣವಾಗಿರುವ ಈ ಆರನೆಯ ಕಲಶಗಳಿಂದ ನಿನ್ನನ್ನು ಅಭಿಷೇಕಮಾಡಲಿ ಎಂದು ಹೇಳಬೇಕು.

ನಿರ್ಝರೋದಕಪೂರ್ಣೇನ ಷಷ್ಠೇನ ಕಲಶೇನ ತು ।
ಸರ್ವತೀರ್ಥಾಂಬುಪೂರ್ಣೇನ ಕಲಶೇನ ದಿವಸ್ಪತೇ ॥ ೧೭ ॥

ಸಪ್ತಮೇನಾಽಭಿಷಿಂಚಂತು ಋಷಯಃ ಸಪ್ತಖೇಚರಾಃ ।
ವಸವಶ್ಚಾಭಿಷಿಂಚಂತು ಕಲಶೇನಾಷ್ಟಮೇನ ತೇ ॥ ೧೮ ॥

ಅಷ್ಟಮಂಗಲಯುಕ್ತೇನ ದೇವದೇವ ನಮೋಽಸ್ತು ತೇ ।
ಸ್ನಾಪಯಿತ್ವಾ ಕ್ರಮೇಣೈವ ಸ್ನಾನಕರ್ಮವಿಧಾನವಿತ್ ॥ ೧೯ ॥

ತತೋ ವರ್ಧನಿಕಾಂ ಗೃಹ್ಯ ವಾರಿಧಾರಾಂ ಸಮುತ್ಸೃಜೇತ್ ।
ತ್ರಿಂಶತ್ತು ಪುರತೋಽರ್ಕಸ್ಯ ಆಚಮಸ್ವೇತಿ ಚಾಬ್ರುವನ್ ॥ ೨೦ ॥

ತತೋಽನ್ಯತ್ರ ಶುಚೌ ದೇಶೇ ಸುಸಂಸೃಷ್ಟೋಪಲೇಪನೇ ।
ತಂಡುಲೈಃ ಪಂಚರಾಗೈಶ್ಚಾ ಲಿಖೇಚ್ಚತುರಂತಿಕಂ ॥ ೨೧ ॥

---

೧೭. ಎಲೈ ಸೂರ್ಯನೇ, ಸಕಲ ತೀರ್ಥೋದಕಗಳಿಂದ ಪರಿಪೂರ್ಣವಾಗಿರುವ ಈ ಏಳನೆಯ ಕಲಶಗಳಿಂದ ಅಂತರಿಕ್ಷಸಂಚಾರಿಗಳಾದ ಸಪ್ತರ್ಷಿಗಳೂ ನಿನಗೆ ಅಭಿಷೇಕಮಾಡಲಿ ಎನ್ನಬೇಕು.

೧೮. ಅನಂತರ ಎಲೈ ದೇವದೇವನೆ, ಅಷ್ಟಮಂಗಲ ದ್ರವ್ಯಗಳಿಂದಲೂ ಕೂಡಿರುವ ನೀರುಳ್ಳ ಈ ಎಂಟನೆಯ ಕಲಶದಿಂದ ಅಷ್ಟವಸುಗಳೂ ನಿನ್ನನ್ನು ಅಭಿಷೇಕಮಾಡಲಿ. ದೇವೋತ್ತಮನೆ, ನಿನಗೆ ನಮಸ್ಕಾರವು ಎಂದು ಪ್ರಾರ್ಥಿಸಬೇಕು.

೧೯-೨೦. ಈ ರೀತಿ ಕ್ರಮವಾಗಿ ಒಂದೊಂದು ಕಲಶವನ್ನೂ ತೆಗೆದುಕೊಂಡು ಹಿಂದೆ ಹೇಳಿದಂತೆ ದೇವತೆಗಳ ಹೆಸರನ್ನು ಹೇಳುತ್ತ ಸೂರ್ಯಪ್ರತಿಮೆಗೆ ಸ್ನಾನ ಮಾಡಿಸಿದಮೇಲೆ, ಮಡಿಬಟ್ಟೆಯನ್ನು ತೆಗೆದುಕೊಂಡು ಆ ನೀರನ್ನೆಲ್ಲಾ ಚೆನ್ನಾಗಿ ಒತ್ತಿತೆಗೆಯಬೇಕು. ಮತ್ತು ಸೂರ್ಯನಮುಂದೆ ಕುಳಿತುಕೊಂಡು ಮೂವತ್ತುಸಲ ಆಚಮನಮಾಡು ಎಂಬುದಾಗಿ ಹೇಳುತ್ತಿರಬೇಕು.

೨೧. ಅನಂತರ ಮತ್ತೊಂದುಕಡೆ ಶುದ್ಧವಾಗಿರುವ ಸ್ಥಳದಲ್ಲಿ ಚೆನ್ನಾಗಿ ಸಾರಿಸಿ ಅಕ್ಕಿಯಹಿಟ್ಟಿನ ರಂಗೋಲಿಯಿಂದಲೂ, ಪಂಚರಾಗಗಳ ಬಣ್ಣದಿಂದಲೂ ನಾಲ್ಕು ಕಡೆಗಳಲ್ಲಿಯೂ ಚಿತ್ರಿಸಬೇಕು.

ಪತಾಕಾತೋರಣಚ್ಛತ್ರಧ್ವಜಮಾಲಾದ್ಯಲಂಕೃತಂ ।
ವಿಚಿತ್ರಸ್ರಗ್ವಿತಾನಾಢ್ಯಂ ಪ್ರಕೀರ್ಣಕುಸುಮೋತ್ಕರಂ ॥ ೨೨ ॥

ತಸ್ಯ ಮಧ್ಯೇ ಕುಶಾಸ್ತೀರ್ಣೇ ಮೂರ್ತಿಂ ಸ್ಥಾಪ್ಯ ವಿವಸ್ವತಃ ।
ತಸ್ಯ ಚಾವಾಹನಂ ಕೃತ್ವಾ ದದ್ಯಾದರ್ಘ್ಯಂ ಪ್ರಯತ್ನತಃ ॥ ೨೩ ॥

ಸುವರ್ಣಮಧುಪರ್ಕಾದಿಸುಮನೋದೀಪಧೂಪಕೈಃ ।
ದೇವಾಯ ಸ್ಪರ್ಶಯೇದ್ಗಾಂ ಚ ಸವತ್ಸಾಂ ರೋಹಿಣೀಂ ಶುಭಾಂ ॥ ೨೪ ॥

ಓಂ ನಮೋ ಗೋಪತಯ ಇತ್ಯುಕ್ತ್ವಾ ಸಹಸ್ರಾಂಶೋ ಪ್ರಸೀದ ಮೇ ।
ಏವಂ ಮಂತ್ರೇಣ ಸಂಪೂಜ್ಯ ಪರಿಧಾಪ್ಯ ಚ ವಾಸಸೀ ॥ ೨೫ ॥

---

೨೨-೨೩. ಆಮೇಲೆ, ಬಾವುಟ, ತೋರಣ, ಛತ್ರಿ, ಧ್ವಜ, ಹಾರ ಇವುಗಳಿಂದಲೂ, ಬಣ್ಣಬಣ್ಣದ ಹಾರ ತೋರಣಗಳಿಂದಲೂ, ಹೂ ಮಾಲೆಗಳಿಂದಲೂ ಆಸ್ಥಳವನ್ನು ಅಲಂಕರಿಸಿ ನೆಲದಮೇಲೂ ಹೂವನ್ನು ಹರಡಬೇಕು. ಈ ರೀತಿ ಅಲಂಕೃತವಾದ ಸ್ಥಳದ ಮಧ್ಯಪ್ರದೇಶದಲ್ಲಿ ದರ್ಭೆಗಳನ್ನು ಹರಡಿ ಅಲ್ಲಿ ಸೂರ್ಯನ ಪ್ರತಿಮೆಯನ್ನು ಸ್ಥಾಪಿಸಿ ಆವಾಹನೆ ಮಾಡಿ ಕ್ರಮವಾಗಿ ಶ್ರದ್ಧೆಯಿಂದ ಆ ಸೂರ್ಯದೇವನಿಗೆ ಅರ್ಘ್ಯವನ್ನು ಕೊಡಬೇಕು.

೨೪. ಸುವರ್ಣಪುಷ್ಪ, ಮಧುಪರ್ಕ ದ್ರವ್ಯಗಳು, ಸುಗಂಧಯುತವಾದ ಪುಷ್ಪಗಳು ಮತ್ತು ಧೂಪಗಳಿಂದ ಪೂಜೆಮಾಡಿ, ಕರುವಿನೊಡಗೂಡಿದ ರೋಹಿಣೀ ಧೇನುವನ್ನು ಸೂರ್ಯದೇವನಿಗೆ ಅರ್ಪಿಸಬೇಕು.

೨೫. "ಓ ನಮೋ ಗೋಪತಯೇ" ಎಂದು (ಅಂದರೆ ಕಿರಣಗಳಿಗೆ ಒಡೆಯನಾದ ಸೂರ್ಯದೇವನಿಗೆ ನಮಸ್ಕಾರವೆಂದು) ಹೇಳಿ, ಅನಂತರ ಸಹಸ್ರಕಿರಣನಾದ ದೇವನೇ ಶಾಂತನಾಗು. ನನ್ನಲ್ಲಿ, ಅನುಗ್ರಹಮಾಡು ಎಂಬರ್ಥವನ್ನು ಸೂಚಿಸುವ "ಸಹಸ್ರಾಂಶೋ ಪ್ರಸೀದಮೇ" ಎಂಬ ಮಂತ್ರವನ್ನು ಉಚ್ಚರಿಸಿ ಪೂಜೆಮಾಡಿ ವಸ್ತ್ರವನ್ನು ಆ ಸೂರ್ಯಪ್ರತಿಮೆಗೆ ಹೊದಿಸಬೇಕು.

ಯಜ್ಞೋಪವೀತಮಾವೇಷ್ಟ್ಯ ಬದ್ಧೋತ್ಸಂಗಸ್ತಥೈವ ಚ ।
ಸರ್ವಗಂಧೈಃ ಸಮಾಲಿಪ್ಯ ಚಂದನಾಗುರುಕುಂಕುಮೈಃ ॥ ೨೬ ॥

ಅಲಂಕಾರೈರಲಂಕೃತ್ಯ ಕುಸುಮೈಶ್ಚ ಸುಗಂಧಿಭಿಃ ।
ಮಾಲಾಭಿಶ್ಚ ವಿಚಿತ್ರಾಭಿರಾಬದ್ಧಾಭಿರನೇಕಶಃ ॥ ೨೭ ॥

ತತೋ ಧೂಪಂ ಚ ನೈವೇದ್ಯಂ ದದ್ಯಾಚ್ಚೈವ ಪ್ರಯತ್ನತಃ ।
ತತ್ತೋರಣಂ ಸಮುತ್ಥಾಪ್ಯ ಮಣೇಃ ಶೌರಾದಯಾ ಧಿಯಾ ॥ ೨೮ ॥

ಪ್ರಜ್ವಾಲ್ಯಾಗ್ನಿಂ ವಿಧಾನೇನ ಕುರ್ಯಾಚ್ಛಾಂತಿಂ ವಿಧಾನತಃ ।
ತತಃ ಸ್ವಲಂಕೃತಾಂ ಸ್ನಾತಾಂ ಮಣಿರತ್ನವಿಭೂಷಿತಾಂ ॥ ೨೯ ॥

ಕೃತಾಂ ಪ್ರತಿಷ್ಠಿತಾಂ ರಕ್ಷಾಂ ಪ್ರತಿಮಾಮಧಿವಾಸಯೇತ್ ।
ದೇವಾಗಾರಾತ್ತಥೈಶಾನೇ ದಿಗ್ಭಾಗೇ ದಿವ್ಯಸಂಜ್ಞಿತೇ ॥ ೩೦ ॥

---

೨೬-೨೭. ಅನಂತರ ಸೂರ್ಯಪ್ರತಿಮೆಗೆ ಯಜ್ಞೋಪವೀತವನ್ನು ಧರಿಸಿ, ತಾನು ಸೊಂಟವನ್ನು ಕಟ್ಟಿಕೊಂಡು, ಸಕಲ ಗಂಧಗಳಿಂದಲೂ ಪ್ರತಿಮೆಯನ್ನು ಲೇಪನ ಮಾಡಿ, ಚಂದನ, ಅಗುರು, ಕುಂಕುಮಗಳಿಂದಲೂ, ಸುವಾಸನೆಯಾದ ಹೂವುಗಳಿಂದಲೂ, ಚಿತ್ರವಿಚಿತ್ರವಾದ ಮಾಲೆಗಳಿಂದಲೂ ಅಲಂಕಾರಮಾಡಬೇಕು. ಅನಂತರ ಧೂಪ, ದೀಪ ಮತ್ತು ನೈವೇದ್ಯಗಳನ್ನು ಪ್ರಯತ್ನಪೂರ್ವಕವಾಗಿ ಸೂರ್ಯನಿಗೆ ಸಮರ್ಪಿಸಬೇಕು.

೨೮-೨೯. ಅನಂತರ ಮಣಿ, ಮುತ್ತುಗಳಿಂದ ನಿರ್ಮಿಸಿದ್ದ ತೋರಣವನ್ನು ಮೇಲಕ್ಕೆ ಕಟ್ಟಿ, ಶುದ್ಧ ಮನಸ್ಸಿನಿಂದ ಅಗ್ನಿಯನ್ನು ಹುತಮಾಡಿ ಶಾಸ್ತ್ರೋಕ್ತವಾದ ಕ್ರಮದಿಂದ ಶಾಂತಿಕರ್ಮವನ್ನಾಚರಿಸಬೇಕು. ಆಮೇಲೆ ಅಭಿಷೇಕಮಾಡಿ ಪ್ರತಿಷ್ಠೆ ಮಾಡಲು ಸಿದ್ಧವಾಗಿಟ್ಟಿರುವ ಸೂರ್ಯಪ್ರತಿಮೆಯನ್ನು ಅಲ್ಲಿ ಅಧಿವಾಸಮಾಡಿಸಬೇಕು.

೩೦-೩೧. ದೇವರಮನೆಯಿಂದ ಈಶಾನ್ಯಕ್ಕಿರುವ ದಿವ್ಯಸಂಜ್ಞಕವಾದ ದಿಕ್ಕಿನಲ್ಲಿ ದರ್ಭೆಗಳನ್ನು ಹರಡಿ ಅದರಮೇಲೆ ಶ್ರೇಷ್ಠವಾದ ಚಾಪೆ ಮೊದಲಾದುವನ್ನು ಹಾಸಿ

ಕೃತ್ವಾ ಕುಶಪರಿಸ್ತೀರ್ಣೇ ವಸ್ತ್ರಾಸ್ತರಣಸಂವೃತೇ ।
ಪೂರ್ವಶೀರ್ಷಾಂ ಶುಭಾಂ ಶಯ್ಯಾಂ ಶುಕ್ಲಾಂ ಶುಕ್ಲಾಂಬರೋತ್ತಮಾಂ ॥

ತಸ್ಯಾಂ ಸಂವೇಶಯೇತ್ಸಮ್ಯಕ್ ಮಹಾಶ್ವೇತಾಮುದೀರಿತಾಂ ।
ನಿಕ್ಷುಭಾಂ ದಕ್ಷಿಣೇ ಪಾರ್ಶ್ವೇ ವಾಮೇ ರಾಜ್ಞೀಂ ಚ ಸ್ಥಾಪಯೇತ್॥ ೩೨ ॥

ದಂಡಪಿಂಗಲಕೌ ಚಾಸ್ಯ ಸ್ಥಾಪ್ಯೌ ಪಾದಪ್ರವೇಶಿತೌ ।
ತಸ್ಯಾಂ ಶಂಖಸಿತಾಯಾಂ ತು ಶಯ್ಯಾಯಾಂ ಪ್ರತಿಮಾಂ ರವೇಃ ॥ ೩೩ ॥

ವಸೇಚ್ಚ ರಜನೀಂ ತತ್ರ ಸ್ತೂಯಮಾನಂ ಚತುರ್ದಿಶಂ ।
ಬ್ರಾಹ್ಮಣೈರ್ವಂದಿಭಿಶ್ಚಾಪಿ ಗೀತಜ್ಞೈರ್ವರಣೈಸ್ತಥಾ ।
ಕುರ್ಯಾಜ್ಜಾಗರಣಂ ತತ್ರ ಸೂರ್ಯಭಕ್ತಿಸಮನ್ವಿತೈಃ ॥ ೩೪ ॥

---

ಅದರಮೇಲೆ ಪೂರ್ವದಿಕ್ಕಿಗೆ ತಲೆಯಾಗುವಂತೆ ಶುಭ್ರವರ್ಣವಾದ ವಸ್ತ್ರದಿಂದ ರಚಿತವಾದ ಶ್ರೇಷ್ಠವಾದ ಹಾಸಿಗೆಯನ್ನು ಹಾಸಬೇಕು.

೩೨. ಆ ಹಾಸಿಗೆಯಮೇಲೆ ಹಿಂದೆ ಹೇಳಿದ ಮಹಾಶ್ವೇತೆಯನ್ನೂ, ಬಲಭಾಗದಲ್ಲಿ ನಿಕ್ಷುಭಾದೇವಿಯನ್ನೂ, ಎಡಭಾಗದಲ್ಲಿ ರಾಜ್ಞೀದೇವಿಯನ್ನೂ ಸಹ ಸ್ಥಾಪಿಸಬೇಕು.

೩೩. ಆ ಸೂರ್ಯನ ಪ್ರತಿಮೆಯನ್ನು ಶಂಖದಂತೆ ಬಿಳುಪಾದ ಈ ಹಾಸಿಗೆಯಲ್ಲಿ ಸ್ಥಾಪಿಸಿ, ಅನಂತರ ಅದರ ಕಾಲಿನ ಹತ್ತಿರ ದಂಡನಾಯಕ ಪಿಂಗಲ ಇವರಿಬ್ಬರನ್ನೂ ಇರಿಸಬೇಕು.

೩೪. ಹೀಗೆ ಸೂರ್ಯನನ್ನು ಶಯ್ಯಾಧಿವಾಸಮಾಡಿಸಿದಮೇಲೆ, ಆ ರಾತ್ರಿ ಅಲ್ಲಿಯೇ ಜಾಗರಣೆ ಮಾಡುತ್ತಾ ಸೂರ್ಯಭಕ್ತರಾದ ಬ್ರಾಹ್ಮಣರು, ಸ್ತೋತ್ರಪಾಠಕರು, ಸಂಗೀತಗಾರರೂ ಇವರುಗಳ ಸಮೂಹಗಳೊಡನೆ ಸ್ತೋತ್ರಮಾಡುತ್ತಿರಬೇಕು.

ಪ್ರಭಾತಾಯಾಂ ತು ಶರ್ವರ್ಯಾಂ ಬೋಧಯೇದ್ದ್ವಿಗ್ವಿಧಾನತಃ ।
ಹವಿಷ್ಯಂ ಭೋಜಯಿತ್ವಾ ತು ಬ್ರಾಹ್ಮಣಾನ್ಯಾಜಕಾಂಸ್ತಥಾ ॥ ೩೫ ॥

ದಕ್ಷಿಣಾಭಿಶ್ಚ ಸಂಪೂಜ್ಯ ಕೃತೇ ವೈ ಸ್ವಸ್ತಿವಾಚನೇ ।
ದೀನಾಂಧಾನ್ ಕೃಪಣಾದೀಂಶ್ಚ ಸರ್ವಾನನ್ನೇನ ತೋಷಯೇತ್ ॥ ೩೬ ॥

ತತೋ ಗರ್ಭಗೃಹಸ್ಥಾನಮಧ್ಯೇ ಕೃತ್ವಾ ತು ಪಿಂಡಿಕಾಂ ।
ಅವಟೇ ಚಾಸ್ಯ ಸೌವರ್ಣಂ ನ್ಯಸ್ಯ ಸಪ್ತಹಯಂ ರಥಂ ॥ ೩೭ ॥

ಸರ್ವಬೀಜೌಷಧೀಶ್ಚೈವ ತತ್ರ ದತ್ವಾ ವಿಧಾನವಿತ್ ।
ದತ್ವಾರ್ಘ್ಯಂ ಸ್ಥಾಪಯೇತ್ತತ್ರ ಯಜಮಾನಃ ಸಹಾಯವಾನ್ ॥ ೩೮ ॥

---

೩೫-೩೬. ಬೆಳಗಾಗುತ್ತಲೆ ಬಲಭಾಗದಿಂದ ಆ ಮೂರ್ತಿಯನ್ನು ಎಚ್ಚರಗೊಳಿಸಿದಂತೆ ಮಾಡಿ, ತಾನು ಹವಿಸ್ಸನ್ನು ಭುಂಜಿಸಿ, ಬ್ರಾಹ್ಮಣರನ್ನೂ ಯಾಗ ಮಾಡಲು ಬಂದ ಋತ್ವಿಕ್ಕುಗಳನ್ನೂ ಆಚಾರ್ಯನನ್ನೂ ದಕ್ಷಿಣ ತಾಂಬೂಲಾದಿಗಳಿಂದ ಪೂಜಿಸಿ, ಅವರುಗಳಿಂದ ಸ್ವಸ್ತಿ ಪೂರ್ವಕವಾದ ಮಂಗಳಾಶೀರ್ವಾದವನ್ನು ಪಡೆದು, ದೀನರೂ, ಕುರುಡರೂ, ಇವರೇ ಮೊದಲಾದ ಅನಾಥರಿಗೆ ಅನ್ನವನ್ನು ಹಾಕಿ ಸಂತೋಷ ಪಡಿಸಬೇಕು.

೩೭-೩೮. ಅನಂತರ ಗರ್ಭಗೃಹದ ಮಧ್ಯಭಾಗದಲ್ಲಿ ಪಿಂಡಿಕೆಯನ್ನು ಮಾಡಿ ಆ ಹಳ್ಳದಲ್ಲಿ ಚಿನ್ನದ ಏಳು ಕುದುರೆಗಳುಳ್ಳ ಸೂರ್ಯನ ರಥವನ್ನು ಇರಿಸಿ, ಸಕಲ ಬೀಜಗಳನ್ನೂ ಮತ್ತು ಓಷಧಿಗಳನ್ನೂ (ಮೂಲಿಕೆಗಳು) ಕ್ರಮವಾಗಿ ಅಲ್ಲಿಟ್ಟು (ಅದರಲ್ಲಿ ಹಾಕಿ) ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಅಲ್ಲಿ ಯಜಮಾನನು ಜನಸಹಾಯವುಳ್ಳವನಾಗಿ ಪ್ರತಿಮೆಯನ್ನು ಸ್ಥಾಪಿಸಬೇಕು.

೩೯-೪೦. ಬಿಳಿಯಸಾಸುವೆಯನ್ನೂ ಆ ಪಿಂಡಿಕೆಯಲ್ಲಿ ಹಾಕಿ ಅನಂತರ, ಶಂಖ ದುಂದುಭಿ ಇವುಗಳ ಶಬ್ದಗಳಿಂದಲೂ, ತಾಳಗಳ ಧ್ವನಿಗಳಿಂದಲೂ ಕೂಡಿರುವ ಸಮಯದಲ್ಲಿ, ಪುಣ್ಯಾಹವನ್ನು ಮಾಡಿಸಿ, ಅಕ್ಷತೆಯನ್ನೂ ಹಿಡಿದು ಆ ಸೂರ್ಯದೇವಾ

ಗೌರಾಂಶ್ಚ ಸರ್ಷಪಾಂ ದತ್ವಾ ಅರ್ಚಾಂ ಸಂಸ್ಥಾಪಯೇತ್ತತಃ ।
ಶಂಖದುಂದುಭಿನಿರ್ಘೋಷೈ ಹಸ್ತಾಧಾರಾಸಹಾಕ್ಷತೈಃ ॥ ೩೯ ॥

ಕೃತ್ವಾ ಪುಣ್ಯಾಹಶಬ್ದೇನ ಸ್ವಾಲಯಸ್ಯ ಪ್ರದಕ್ಷಿಣಾಂ ।
ಶುಭೇ ಲಗ್ನೇ ದಿನೇ ಋಕ್ಷೇ ಪೂರ್ವಾಹ್ಣೇ ಭಾನವೇಕ್ಷಣೇ ॥ ೪೦ ॥

ಮುಹೂರ್ತೇ ಚ ಶುಭೇ ಭಾನೋಃ ಪ್ರತಿಮಾಂ ಸ್ಥಾಪಯೇದ್ಬುಧಃ ।
ನಾಧೋಮುಖೀಂ ನೋರ್ಧ್ವಮುಖೀಂ ನ ಪಾರ್ಶ್ವಂ ನ ನತಾಂಸ್ತಥಾ ।
ಸ ಮಾಮಭಿಮುಖೀಂ ಚೈವಾಂ ಪ್ರತಿಮಾಂ ಚ ನಿವೇಶಯೇತ್ ॥ ೪೧ ॥

ಪತ್ನ್ಯೌ ಚಾಸ್ಯ ತತಃ ಸಮ್ಯಕ್ಪಾರ್ಶ್ವಯೋರ್ವಿನಿವೇಶಯೇತ್ ।
ನಿಕ್ಷುಭಾಂ ದಕ್ಷಿಣೇ ಪಾರ್ಶ್ವೇ ರವೇರಾಜ್ಞೀಂ ತು ವಾಮತಃ ॥ ೪೨ ॥

ಪಿಂಗಲೋ ದಕ್ಷಿಣೇ ಭಾನೋಃ ವಾಮತೋ ದಂಡನಾಯಕಃ ।
ಸ್ಥಾಪ್ಯಶ್ಚೈವ ತತೋ ವಹ್ನಿಂ ಸಂಸ್ಥಾಪ್ಯ ವಿಧಿವತ್ ಪುನಃ ॥ ೪೩ ॥

---

ಲಯವನ್ನೂ ಪ್ರದಕ್ಷಿಣೆಮಾಡಬೇಕು. ಅನಂತರ ಶುಭ ಲಗ್ನ, ಶುಭ ನಕ್ಷತ್ರಯುತವಾದ ಪೂರ್ವಾಹ್ಣದ ಸೂರ್ಯನಿರೀಕ್ಷಣೆಯಿರುವ ಮುಹೂರ್ತದಲ್ಲಿ ಸೂರ್ಯನ ಪ್ರತಿಮೆಯನ್ನು ಪ್ರತಿಷ್ಠೆಮಾಡಬೇಕು.

೪೧. ಆ ಪ್ರತಿಮೆಯನ್ನು ಕೆಳಮುಖವಾಗಿಯೂ, ಮೇಲ್ಮುಖನಾಗಿ ದೃಷ್ಟಿಯಿರುವಂತೆಯೂ, ಪಕ್ಕಕ್ಕೆ ಓಲುವಂತೆಯೂ ಬಗ್ಗುವಂತೆಯೂ ನಿಲ್ಲಿಸದೆ ಸಮನಾಗಿ ನೆಟ್ಟಗೆ ಎದುರುದೃಷ್ಟಿಯಿರುವಂತೆ ನಿಲ್ಲಿಸಿ ಪ್ರತಿಷ್ಠೆಮಾಡಬೇಕು.

೪೨. ಅನಂತರ ಆ ಸೂರ್ಯಪ್ರತಿಮೆಯ ಬಲಭಾಗದಲ್ಲಿ ಸೂರ್ಯಪತ್ನಿಯಾದ ನಿಕ್ಷುಭಾದೇವಿಯನ್ನೂ ಎಡಭಾಗದಲ್ಲಿ ಭಾನುವಿನ ಅರ್ಧಾಂಗಿನಿಯಾದ ರಾಜ್ಞೀದೇವಿಯನ್ನೂ ಪ್ರತಿಷ್ಠೆಮಾಡಬೇಕು.

೪೩-೪೪. ಸೂರ್ಯನ ಬಲಭಾಗದಲ್ಲಿ ಪಿಂಗಳನನ್ನೂ, ಎಡಭಾಗದಲ್ಲಿ ದಂಡನಾಯಕನನ್ನೂ ಸ್ಥಾಪಿಸಿ, ಪುನಃ ಶಾಸ್ತ್ರೋಕ್ತರೀತಿಯಿಂದ ಅಗ್ನಿಯನ್ನು ಸ್ಥಾಪನೆ

ಯಜಮಾನಸ್ಯ ಶಾಂತ್ಯರ್ಥಂ ಶಾತಿಕರ್ಮವಿಧಾನವಿತ್ ।
ಹೋಮಯೇತ್ಸರ್ವದೇವಾನಾಂ ಸ್ವಾಹಾಕಾರೈರಿತಸ್ತತಃ ॥ ೪೪ ॥

ತತಸ್ತದುಪಹಾರಾರ್ಥಂ ಸಂಭಾರೈಃ ಪ್ರಾಕ್ ಸಮಾಹೃತೈಃ ।
ಮೋದಕೋಲ್ಲಾಪಿಕಾಪೂಪಶಷ್ಕುಲೀಭೂತಶೀರ್ಷಕೈಃ ॥ ೪೫ ॥

ಕೃಸರೈಃ ಪಾಯಸೋನ್ಮಿಶ್ರೈಃ ಸರ್ವದಿಕ್ಷು ಕ್ಷಿಪೇದ್ಬಲಿಂ ।
ತರ್ಪಯೇತ್ಕ್ಷೀರಮಧ್ವಾಜ್ಯೈಃ ಸ್ತೂಯಾತ್ಸ್ತೋತ್ರೈಶ್ಚ ಭಾಸ್ಕರಂ ॥ ೪೬ ॥

ವಿಪ್ರೇಭ್ಯೋ ಯಾಜಕೇಭ್ಯಶ್ಚ ತತೋ ದದ್ಯಾಚ್ಚ ದಕ್ಷಿಣಾಂ ।
ಸೂರ್ಯಕ್ರತೌ ಮಹಾಪುಣ್ಯೇ ತೇನ ಕುರ್ಯಾಚ್ಚ ದಕ್ಷಿಣಾಂ ॥ ೪೭ ॥

ಸ್ಥಾಪ್ಯತೇಽನೇನ ವಿಧಿನಾ ಮದ್ಭಕ್ತೈಃ ಪ್ರತಿಮಾ ತು ಯಾ ।
ಸಾ ತು ವೃದ್ಧಿಕರೀ ನಿತ್ಯಂ ಸಾನ್ನಿಧ್ಯಂ ಚ ಸದಾ ಭವೇತ್ ॥ ೪೮ ॥

---

ಮಾಡಿ ಯಜಮಾನನ ಶಾಂತಿನಿಮಿತ್ತವಾಗಿ (ಯಜಮಾನನಿಗೆ ಶಾಂತಿಯುಂಟಾಗುವುದಕ್ಕೋಸ್ಕರ) ಶಾಂತಿಕರ್ಮಪ್ರಯೋಗದಲ್ಲಿ ನಿಪುಣನಾದ ಆಚಾರ್ಯನು ಎಲ್ಲಾ ದೇವತೆಗಳಿಗೂ ಸ್ವಾಹಾಕಾರಪೂರ್ವಕವಾಗಿ ಹೋಮಮಾಡಬೇಕು.

೪೫-೪೬. ಆಮೇಲೆ ಉಪಹಾರಕ್ಕೋಸ್ಕರ ಮೊದಲು ತಂದಿಟ್ಟಿರುವ ಪದಾರ್ಥಗಳಿಂದ, ಕಡುಬು, ಕರ್ಜಿಗೆಕಾಯಿ, ಕರಿಗಡುಬು, ಒಬ್ಬಟ್ಟು, ಚಕ್ಕುಲಿ ಮತ್ತು ಸಜ್ಜಪ್ಪ ಇವೇಮೊದಲಾದವುಗಳನ್ನೂ, ಪಾಯಸದಿಂದ ಬೆರಸಿರುವ ಎಳ್ಳುಪುಡಿ ಅನ್ನವನ್ನೂ, ಎಲ್ಲಾ ದಿಕ್ಕುಗಳಲ್ಲಿಯೂ ಬಲಿಯನ್ನಾಗಿ ಹಾಕಬೇಕು. ಮತ್ತು ಹಾಲು, ಜೇನುತುಪ್ಪ ಮತ್ತು ತುಪ್ಪ ಇವುಗಳಿಂದ ತೃಪ್ತಿಗೊಳಿಸಿ ಸ್ತೋತ್ರಗಳಿಂದ ಸೂರ್ಯದೇವನನ್ನು ಸ್ತೋತ್ರಮಾಡಬೇಕು.

೪೭. ಆಮೇಲೆ ಬ್ರಾಹ್ಮಣರಿಗೂ ಆಚಾರ್ಯರಿಗೂ ದಕ್ಷಿಣೆಯನ್ನು ಕೊಡಬೇಕು. ಮಹಾಪುಣ್ಯಕರವಾದ ಸೂರ್ಯಯಾಗದಲ್ಲಿ ಯಜಮಾನನು ದಕ್ಷಿಣೆಯನ್ನು ತನ್ನ ಶಕ್ತಿಮೀರಿ ದಾನಮಾಡಬೇಕು.

೪೮. ಈರೀತಿ ಶಾಸ್ತ್ರೋಕ್ತವಾದ ರೀತಿಯಿಂದ ನನ್ನ (ಸೂರ್ಯನ) ಭಕ್ತರು ನನ್ನ ಪ್ರತಿಮೆಯನ್ನು ಸ್ಥಾಪಿಸಿದರೆ ಆ ಪ್ರತಿಮೆಯು ಅಂತಹವರಿಗೆ ಯಾವಾಗಲೂ ಅಭಿವೃದ್ಧಿಯನ್ನುಂಟುಮಾಡುವುದು, ಮತ್ತು ನಾನು ಯಾವಾಗಲೂ ಅದರ ಸನ್ನಿಧಾನದಲ್ಲಿಯೇ ಇರುವೆನು ಎಂದು ಸ್ವಾಮಿಯು ವಚನವಿದೆ.

ಚತುರ್ಣಾಮಪಿ ವರ್ಣಾನಾಂ ಸ್ಥಾಪಯೇದ್ಯಸ್ತು ಭಾಸ್ಕರಂ ।
ಸೋತ್ತೀರ್ಣ ಸ್ಸರ್ವಸಂಸಾರಾತ್ಸೂರ್ಯಲೋಕೇ ಮಹೀಯತೇ ॥ ೪೯॥

ಪಶ್ಯಂತಿ ಮಾನವಾ ಯೇ ತು ಆದಿತ್ಯಸ್ಯಾಧಿವಾಸನಂ ।
ಸಪ್ತಜನ್ಮಸು ತೇ ಜಾತಾ ನೀರೋಗಾಃ ಸಂಭವಂತಿ ಹಿ ॥ ೫೦ ॥

ತ್ರಿರಾತ್ರಂ ಯೇಽಪ್ಯುಪಾಸಂತೇ ಭಾನೋರ್ಯಾತ್ರಾಧಿವಾಸಿತಂ ।
ಗಂಧಮಾಲ್ಯೋಪಹಾರೈಶ್ಚ ತೇ ಯಾಂತಿ ಪರಮಾಂ ಗತಿಂ ॥ ೫೧ ॥

ಆತ್ಮೀಯಂ ಪರಕೀಯಂ ಚ ಪ್ರತಿಮಾಸ್ಥಾಪನಂ ರವೇಃ ।
ಯಃ ಪಶ್ಯತಿ ಪುಮಾನ್ ಭಕ್ತ್ಯಾ ಸ ಪಾಪಾತ್ಪರಿಮುಚ್ಯತೇ ॥ ೫೨ ॥

---

೪೯. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳಲ್ಲಿ ಯಾರು ಸೂರ್ಯನನ್ನು ಪ್ರತಿಷ್ಠೆಮಾಡಿಸುವರೋ, ಅಂತಹವರು ಸಂಸಾರಬಂಧನಗಳನ್ನೆಲ್ಲಾ ದಾಟಿ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಪೂಜ್ಯರಾಗುವರು.

೫೦. ಸೂರ್ಯನ ಅಧಿವಾಸವನ್ನು ನೋಡಿದವರು ಏಳುಜನ್ಮಗಳಲ್ಲಿ ಯಾವ ರೋಗವನ್ನೂ ಹೊಂದದೇ ಸೂರ್ಯನ ಕೃಪೆಯಿಂದ ಸುಖವಾಗಿ ಬಾಳುವರು.

೫೧. ಮೂರು ರಾತ್ರಿಗಳು ಹಾಗೆ ಯಾರು ಸೂರ್ಯನಸಮೀಪದಲ್ಲಿ ಉಪಾಸನೆ ಮಾಡುತ್ತ, ಗಂಧ, ಹೂಮಾಲೆ ನೈವೇದ್ಯಾದಿಗಳಿಂದ ಪೂಜಿಸುವರೋ, ಅವರು ಉತ್ತಮವಾದ ಗತಿಯನ್ನು ಪಡೆಯುವರು.

೫೨. ಸ್ವಂತ ಸೂರ್ಯಪ್ರತಿಮೆಯನ್ನು ಸ್ಥಾಪನೆಮಾಡಿಸಿದರೇ ಆಗಲಿ, ಅಥವಾ ಇನ್ನೊಬ್ಬರು ಮಾಡಿಸಿದ್ದನ್ನು ಭಕ್ತಿಯಿಂದ ನೋಡಿದರಾಗಲೀ, ಅವರ ಎಲ್ಲಾ ಪಾಪಗಳೂ ನಾಶವಾಗುವುವು.

ದಶಾನಾಮಶ್ವಮೇಧಾನಾಂ ವಾಜಪೇಯಶತಸ್ಯ ಚ ।
ಫಲಂ ಪ್ರಾಪ್ನೋತಿ ಪುರುಷಃ ಪ್ರತಿಷ್ಠಾಪ್ಯ ದಿವಾಕರಂ ॥ ೫೩ ॥

ಯಾವತ್ಕೀರ್ತಿಃ ಪುಣ್ಯಕೃತೋ ಭಾನೋಃ ಸ್ಥಾನನಿವೇಶನಾತ್ ।
ತಾವತ್ಸ ತು ಯದುಶ್ರೇಷ್ಠ ಸೂರ್ಯಲೋಕೇ ಮಹೀಯತೇ ॥ ೫೪ ॥

ಸ್ಥಾಪಯಿತ್ವಾ ರವಿಂ ಭಕ್ತ್ಯಾ ವಿಧಿದೃಷ್ಟೇನ ಕರ್ಮಣಾ ।
ಮಾಸೇ ಮಾಸೇ ಕ್ರತುಫಲಂ ಲಭತೇ ನಾತ್ರ ಸಂಶಯಃ ॥ ೫೫ ॥

ಏಕಾಹೇನಾಪಿ ಯದ್ಭಾನೋಃ ಪೂಜಯಾ ಪ್ರಾಪ್ಯತೇ ಫಲಂ ।
ನ ವ್ರತೈರುಪವಾಸೈರ್ವಾ ದಾನೈರ್ವಾ ತದವಾಪ್ಯತೇ ॥ ೫೬ ॥

---

೫೩. ಸೂರ್ಯನನ್ನು ಪ್ರತಿಷ್ಠೆಮಾಡಿದ ಪುರುಷನು ಹತ್ತುಅಶ್ವಮೇಧಯಾಗಗಳನ್ನು ಮಾಡಿದ್ದರಿಂದುಂಟಾದ ಫಲವನ್ನೂ, ನೂರು ವಾಜಪೇಯಯಾಗ ಮಾಡಿದ ಫಲವನ್ನೂ ಸಹ ಪಡೆಯುವನು.

೫೪. ಪುಣ್ಯಪ್ರದನಾದ ಸೂರ್ಯನನ್ನು ಪ್ರತಿಷ್ಠೆಮಾಡಿದ್ದರಿಂದ ಉಂಟಾದ ಕೀರ್ತಿಯು ಭೂಮಿಯಲ್ಲಿ ನೆಲಸಿರುವವರೆವಿಗೂ, ಎಲೈ ಯದುವಂಶಶ್ರೇಷ್ಠನಾದ ಸಾಂಬನೆ, ಅವನು ಸೂರ್ಯಲೋಕದಲ್ಲಿ ಪೂಜ್ಯನಾಗುವನು.

೫೫ ಪ್ರತಿತಿಂಗಳಲ್ಲಿಯೂ ಸೂರ್ಯನನ್ನು ಭಕ್ತಿಯಿಂದ ಶಾಸ್ತ್ರೋಕ್ತಕರ್ಮಾನುಷ್ಠಾನಗಳಿಂದ ಸ್ಥಾಪಿಸಿದವರು, ನಿಶ್ಚಯವಾಗಿಯೂ ಯಾಗಾಚರಣೆಯಿಂದ ಬರುವ ಫಲವನ್ನು ತಪ್ಪದೇಹೊಂದುವರು.

೫೬. ಸೂರ್ಯನನ್ನು ಒಂದೇದಿನ ಪೂಜೆಮಾಡಿದುದರಿಂದ ಉಂಟಾಗುವ ಫಲವು, ನಾನಾವಿಧಿಯಿಂದಲೂ ಇತರ ವ್ರತಾದಿಗಳಿಂದಲೂ ದಾನ ಧರ್ಮಗಳಿಂದಲೂ ಲಭಿಸಲಾರದು.

ಕೃತ್ವಾ ತು ಯನ್ಮಹತ್ಪಾಪಂ ಯಃ ಪಶ್ಚಾತ್ಸೇವತೇ ರವಿಂ ।
ಸ ಯಾತಿ ಸೂರ್ಯಲೋಕೇ ತು ನರೋ ವಿಗತಕಲ್ಮಷಃ ॥ ೫೭ ॥

ನ ಭವೇದ್ದುಷ್ಟಕಾ ಯಾ ಚ ಭೂಮಿಶ್ಚಂದ್ರೇಣ ಸಂಯುತಾ ।
ಸ್ವರ್ಗೇ ಮಹೀಯತೇ ತಾವದ್ಯಾವತ್ಸೂರ್ಯಸ್ಯ ವೇಶ್ಮನಿ ॥ ೫೮ ॥

ಇತ್ಯೇವಂ ಸುಜಯತಿ ತಸ್ಯ ಯಶ್ಚ ಭಾನೋಃ ।
ಭೂತಾನಾಂ ಸ್ಥಿತಿನಿಲಯಪ್ರಸೂತಿಹೇತೋಃ ॥
ಶ್ರೀಭಾಗೀ ಭವತಿ ನರೋ ನಿಕೇತಕಾರೀ ।
ಕಲ್ಪಾನಾಂ ವಸತಿಶತಂ ಚ ಸೂರ್ಯಲೋಕೇ ॥ ೫೯ ॥

ಯಃ ಪ್ರಾಸಾದಂ ರಚಯತಿ ಪುಮಾನ್ದೇವತಾನಾಂ ಪ್ರಯತ್ನಾತ್ ।
ಕೀರ್ತಿಸ್ತಸ್ಯ ಪ್ರಭವತಿ ವಿಫಲಾ ವಂಶಮಾರ್ಗಾನುಜಾತಾ ॥

---

೫೭. ಎಷ್ಟೇ ಪಾಪಿಷ್ಠನೆನಿಸಿದ್ದರೂ ಸೂರ್ಯನನ್ನು ಪೂಜಿಸುವ ಪುರುಷನು ಪಾಪರಹಿತನಾಗಿ ಸೂರ್ಯಲೋಕವನ್ನು ಸೇರುವನು.

೫೮. ಚಂದ್ರನೊಡಗೂಡಿದ ಭೂಮಿಯು ಎಲ್ಲಿಯವರೆವಿಗೆ ದುಷ್ಟವಾಗುವುದಿಲ್ಲವೊ, ಅಂದರೆ ಚಂದ್ರನಿರುವವರೆಗೂ ಸೂರ್ಯಭಕ್ತನು ಸೂರ್ಯಲೋಕದಲ್ಲಿ ನೆಲಸಿ ಪೂಜ್ಯನಾಗುವನು.

೫೯. ಹಿಂದೆ ಹೇಳಿದಂತೆ, ಪಂಚಭೂತಮಯವಾದ ಸಕಲ ಪ್ರಾಣಿಗಳ ಸೃಷ್ಟಿ ಸ್ಥಿತಿ ಸಂಹಾರಕರ್ತನಾದ ಸೂರ್ಯದೇವನಿಗೆ ಸಂತೋಷವನ್ನುಂಟುಮಾಡುತ್ತ ಆ ಸೂರ್ಯದೇವನಿಗೆ ದೇವಾಲಯವನ್ನು ಕಟ್ಟಿಸುವ ಮನುಷ್ಯನು, ಸಕಲ ಸಂಪತ್ತುಗಳನ್ನೂ ಪಡೆದು ಅನಂತರ ಸೂರ್ಯಲೋಕಕ್ಕೆಹೋಗಿ ನೂರು ಕಲ್ಪಗಳವರೆವಿಗೂ ಆ ಸೂರ್ಯಲೋಕದಲ್ಲಿಯೇ ವಾಸಮಾಡುವನು.

೬೦. ದೇವತೆಗಳಿಗೆ ಪ್ರಾಸಾದಗಳನ್ನು ಪ್ರಯತ್ನಪೂರ್ವಕವಾಗಿ ರಚಿಸುವವನಿಗೆ ವಂಶಪರಂಪರೆಯನ್ನು ಅನುಸರಿಸಿ ಕೀರ್ತಿಯುಂಟಾಗುವುದು. ಅಲ್ಲದೆ ಅವನು

ದಿವ್ಯಾನ್ಕಾಮಾನ್ಲಭತಿ ಚ ಸದಾ ಕಾಮತಶ್ಚಾಪ್ರಮೇಯಾನ್ ।
ತಾನ್ ಭುಕ್ತ್ವಾಽಸೌ ಪುನರಪಿ ಭವೇಚ್ಚಕ್ರವರ್ತೀ ಪೃಥಿವ್ಯಾಂ ॥ ೬೦ ॥

ಯೇ ಮಾನವಾಸ್ತ್ರಿದಶಮೂರ್ತಿನಿಕೇತಕಾನಿ ।
ಕುರ್ವೀತ ಸಾಧುಜನದೃಷ್ಟಿಮನೋಹರಾಣಿ ॥
ತೇಷಾಂ ಮೃತೇಽಪ್ಯಪರಮಾರ್ಥಮಯೇ ಶರೀರೇ ।
ಲೋಕೇ ಪರಿಭ್ರಮತಿ ಕೀರ್ತಿಮಯಂ ಶರೀರಂ ॥ ೬೧ ॥

ಇತಿ ಮುನಿವೃಷಭಃ ಸುತಾಯ ವಿಷ್ಣೋಃ ।
ವಿಧಿಮುಪದಿಶ್ಯ ಚ ನಾರದೋ ಜಗಾಮ ॥
ಸ ಚ ಸವಿತುರಿದಂ ಚಕಾರ ಭಕ್ತ್ಯಾ ।
ಭವನವರಂ ಭುವಿ ಶಾಶ್ವತಂ ಚ ನಾಮ್ನಾ ॥ ೬೨ ॥

ಇತಿ ಶ್ರೀ ಸಾಂಬಪುರಾಣೇ ಪ್ರತಿಮಾಕಲ್ಪೇ ನಾಮ
ದ್ವಾತ್ರಿಂಶೋಽಧ್ಯಾಯಃ.

---

ದಿವ್ಯವಾದ ಮತ್ತು ಅಪರಿಮಿತ ಐಹಿಕ ಸುಖಗಳನ್ನೂ ಅನುಭವಿಸಿ ಆಜನ್ಮ ಕಳೆದ ನಂತರ, ಪುನರ್ಜನ್ಮದಲ್ಲಿ ಭೂಮಂಡಲಕ್ಕೇ ಚಕ್ರವರ್ತಿಯಾಗಿ ಹುಟ್ಟುವನು.

೬೧. ದೇವತಾ ವಿಗ್ರಹಗಳಿಗೆ ಆಲಯವನ್ನು ಸತ್ಪುರುಷರು ನೋಡಲು ಮನೋಹರವಾಗಿರುವಂತೆ ನಿರ್ಮಾಣಮಾಡುವ ಮನುಷ್ಯರು, ಈ ನಶ್ವರದೇಹವನ್ನು ಬಿಟ್ಟು ಮೃತರಾದರೂ, ಅವರ ಕೀರ್ತಿಸ್ವರೂಪವಾದ ಶಾಶ್ವತಶರೀರವುಮಾತ್ರ ನಾಶ ಹೊಂದದೆ ಸಂಚಾರಮಾಡುವುದು.

೬೨. ಈರೀತಿ ಮುನಿಶ್ರೇಷ್ಠರಾದ ನಾರದರು ವಿಷ್ಣುವಿನ (ಕೃಷ್ಣನ) ಮಗನಾದ ಸಾಂಬನಿಗೆ ಸೂರ್ಯೋಪಾಸನಾವಿಧಿಯನ್ನು ಉಪದೇಶಮಾಡಿ ಹಿಂತಿರುಗಿದರು. ಅನಂತರ ಆ ಸಾಂಬನು ಸೂರ್ಯೋಪಾಸನೆಮಾಡಿ ಆ ಸೂರ್ಯದೇವನಿಗೆ ಶಾಶ್ವತವೂ ಉತ್ಕೃಷ್ಟವೂ ಆದ ದೇವಾಲಯವನ್ನು ಭಕ್ತಿಯಿಂದ ಕಟ್ಟಿಸಿ ತನ್ನ ಹೆಸರನ್ನು ಭೂಮಿಯಲ್ಲಿ ಪ್ರಸಿದ್ಧವಾಗಿರುವಂತೆ ಮಾಡಿಬಿಟ್ಟನು.

ಶ್ರೀ ಸಾಂಬಪುರಾಣದಲ್ಲಿ ಪ್ರತಿಮಾಕಲ್ಪವೆಂಬ ಮೂವತ್ತೆರಡನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ತ್ರಯ ಸ್ತ್ರಿಂಶತಿತಮೋಽಧ್ಯಾಯಃ

---

॥ ನಾರದ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಧ್ವಜಾರೋಪಣಮುತ್ತಮಂ ;
ಪುರಾ ದೇವಾಸುರೇ ಯುದ್ಧೇ ಯೋದ್ಧುಂ ದೇವೈರ್ಜಯೋಪ್ಸುಭಿಃ ॥ ೧ ॥

ಕೃತಾನ್ಯುಪರಿ ಚಿಹ್ನಾನಿ ವಾಹನಾನಿ ಶುಭಾನಿ ತು ।
ಲಕ್ಷ್ಮಚಿಹ್ನಧ್ವಜಃ ಕೇತುರಿತಿ ಪರ್ಯಾಯನಾಮಭಿಃ ॥ ೨ ॥

---

## ಮೂವತ್ತುಮೂರನೆಯ ಅಧ್ಯಾಯ.

೧-೨. ಸಾಂಬನೆ, ಇನ್ನುಮುಂದೆ ಧ್ವಜಾರೋಪಣವೆಂಬ ಉತ್ತಮ ವಿಷಯ ವನ್ನು ಹೇಳುತ್ತೇನೆ ಕೇಳು, ಎಂದು ನಾರದರು ಹೀಗೆ ಮುಂದುವರಿಸಿದರು. ಹಿಂದೆ ದೇವತೆಗಳು ಮತ್ತು ರಾಕ್ಷಸರೂ ಯುದ್ಧಮಾಡಿದಾಗ, ದೇವತೆಗಳು ಜಯಾಪೇಕ್ಷೆ ಯುಳ್ಳವರಾಗಿ ತಮ್ಮತಮ್ಮ ರಥದಮೇಲೆ ವಾಹನಗಳ ಗುರುತುಗಳನ್ನು ಮಾಡಿ ಕೊಂಡರು. ಅವೆಲ್ಲವೂ ಶುಭ ಸೂಚಕಗಳಾಗಿದ್ದುವು. ಲಕ್ಷ್ಮ, ಚಿಹ್ನ, ಧ್ವಜ, ಕೇತು ಈ ನಾಲ್ಕು ಪರ್ಯಾಯಪದಗಳು. (ಒಂದೇ ಅರ್ಥವನ್ನು ಸೂಚಿಸುವ ಭಿನ್ನಭಿನ್ನ ಪದಗಳು) ಧ್ವಜವು ಉತ್ಪತ್ತಿಯಾದುದೂ ಹೀಗೆಯೇ. ಈಗ ಅದರ ಪ್ರಮಾಣವನ್ನು ಹೇಳುವೆನು ಕೇಳು. ಎಂದು ನಾರದರು ಇಂತೆಂದರು.

ಕೀರ್ತಿತಸ್ಯ ಚ ತಸ್ಯೇಹ ಪ್ರಮಾಣಂ ಗದತಃ ಶೃಣು ।
ಧ್ವಜವಂಶಸ್ತು ಕರ್ತವ್ಯೋ ಹ್ಯವಿದ್ಧಋಜುರವ್ರಣಃ ॥ ೩ ॥

ಪ್ರಾಸಾದೇನ ಸ ತುಲ್ಯಸ್ತು ಧ್ವಜವಂಶಃ ಪ್ರಮಾಣತಃ ।
ಪತಾಕಾ ಚ ಧ್ವಜೇ ಕಾರ್ಯಾ ಧ್ವಜವಂಶೇ ವಿಲಂಬಿನೀ ॥ ೪ ॥

ದೇವಾಗಾರಸ್ಯ ಶಿಖರಾತ್ ತ್ರಿಭಾಗಮುಪಮಾರ್ಜನೀ ।
ಯುಕ್ತವಸ್ತ್ರಮಯೀ ಚಿತ್ರಾ ಸ ಘಂಟಾಸುಮನೋಹರಾ ॥ ೫ ॥

ಧ್ವಜಾಗ್ರೇ ಚಾಪಿ ಕರ್ತವ್ಯೋ ದೇವತಾಲಿಂಗಸೂಚಕಃ ।
ಕಾಂಚನೋ ವಾಽಥ ರೌಪ್ಯೋ ವಾ ಮಣಿರತ್ನಮಯೋಽಪಿ ವಾ ॥ ೬ ॥

ರಂಗಕಾಲಿಖಿತೋ ವಾಪಿ ತದ್ವಾಹನಸಮಾಕೃತಿಃ ।
ಗರುತ್ಮಾಂಸ್ತು ಧ್ವಜೇ ವಿಷ್ಣೋರೀಶ್ವರಸ್ಯ ಧ್ವಜೇ ವೃಷಃ ॥ ೭ ॥

---

೩-೪. ಬಾವುಟವನ್ನು ಕಟ್ಟುವ ಬಿದಿರು ಎಲ್ಲಿಯೂ ಬಿರಿಯದೇ, ನೆಟ್ಟಗೆ ಯಾವತರಹದ ಗಂಟುಗಳೂ ಇಲ್ಲದಂತೆ ನಯವಾಗಿರಬೇಕು. ಆ ಧ್ವಜದ ದಂಡ ಪ್ರಮಾಣವು ಪ್ರಾಸಾದದ (ಉಪ್ಪರಿಗೆಯ) ಪ್ರಮಾಣಕ್ಕೆ ಸಮನಾಗಿರಬೇಕು. ಆ ಧ್ವಜದಲ್ಲಿ ಪತಾಕೆಯನ್ನು ಬಿದಿರು ದಂಡದಲ್ಲಿ ಜೋಲುಬೀಳುವಂತೆ ನಿರ್ಮಿಸಬೇಕು.

೫. ದೇವಾಲಯದ ಶಿಖರದ ಮೂರನೆಯ ಒಂದುಭಾಗದಷ್ಟು ಕೆಳಗೆ ಜೋಲುವಂತೆ ಪತಾಕೆಯನ್ನು ನಿರ್ಮಿಸಬೇಕು. ಅದಕ್ಕೆ ಬಣ್ಣದಬಟ್ಟೆಗಳನ್ನು ಸೇರಿಸಿರಬೇಕು. ಮತ್ತು ಗಂಟೆಯನ್ನುಸೇರಿಸಿ ನೋಡುವುದಕ್ಕೆ ಮನೋಹರವಾಗಿರುವಂತೆ ನಿರ್ಮಾಣ ಮಾಡಬೇಕು.

೬. ಧ್ವಜದ ತುದಿಯಲ್ಲಿ ದೇವತೆಗಳ ಗುರುತನ್ನು ಸೂಚಿಸುವ ಆಯಾಯ ದೇವತೆಗಳ ವಾಹನಗಳನ್ನು, ಚಿನ್ನದಿಂದಲೋ, ಬೆಳ್ಳಿಯಿಂದಲೋ, ಮಣಿ ಮುತ್ತು ರತ್ನಗಳಿಂದಲೋ ಅಥವ ಬಣ್ಣದಿಂದಲೋ ನಿರ್ಮಿಸಿ, ಅದರಲ್ಲಿ ಸೇರಿಸಿರಬೇಕು ಆ ಆಕೃತಿಯ ವಾಹನಗಳ ಆಕಾರಕ್ಕೆ ಸಮನಾಗಿರಬೇಕು.

೭-೯. ವಿಷ್ಣುವಿನ ಧ್ವಜದಲ್ಲಿ ಗರುಡನೂ, ಈಶ್ವರನ ಧ್ವಜದಲ್ಲಿ ವೃಷಭವೂ (ಎತ್ತೂ) ಬ್ರಹ್ಮನ ಧ್ವಜದಲ್ಲಿ ಪದ್ಮವೂ, ಸೂರ್ಯಧ್ವಜದಲ್ಲಿ ವ್ಯೋಮವೂ, ವರು

ಬ್ರಹ್ಮಣಃ ಪಂಕಜಂ ಕಾರ್ಯಂ ರವೇರ್ವ್ಯೋಮ ಸ್ಮೃತೋ ಧ್ವಜೇ ।
ಹಂಸೋ ಜಲಾಧಿಪಸ್ಯೋಕ್ತೋ ಧನದಸ್ಯ ನರೋ ಧ್ವಜೇ ॥ ೮ ॥

ಮಯೂರಃ ಕಾರ್ತಿಕೇಯಸ್ಯ ಹೇರಂಬಸ್ಯ ಚ ಮೂಷಕಃ ।
ಕುಂಜರೋ ದೇವರಾಜಸ್ಯ ಯಮಸ್ಯ ಮಹಿಷೋ ಧ್ವಜೇ ॥ ೯ ॥

ಸಿಂಹೋ ಧ್ವಜೇ ತು ದುರ್ಗಾಯಾ ಇತ್ಯೇಷಾ ಧ್ವಜಕಲ್ಪನಾ ।
ಯಸ್ಯ ಯೋ ವಾಹನಃ ಪ್ರೋಕ್ತೋ ಧ್ವಜಸ್ತಸ್ಯ ಸ ಏವ ತು ॥ ೧೦ ॥

ತತಃ ಸರ್ವೌಷಧೀಭಿಸ್ತು ಸ್ನಾಪಯಿತ್ವಾ ಪ್ರಯತ್ನತಃ ।
ಸಮಾಲಭ್ಯ ಚ ಬಧ್ನೀಯಾನ್ಮಧ್ಯೇ ಪ್ರತಿಸರಂ ತತಃ ॥ ೧೧ ॥

ಕಲ್ಪಯಿತ್ವಾ ಶುಭಾಂ ವೇದೀಂ ಕಲಶೈರುಪಶೋಭಿತಾಂ ।
ತಸ್ಯಾಂ ವೇದ್ಯಾಂ ಸಮಾರೋಪ್ಯ ತಾಂ ರಾತ್ರಿಮಧಿವಾಸಯೇತ್ ॥ ೧೨ ॥

---

ಣನ ಧ್ವಜದಲ್ಲಿ ಹಂಸವೂ, ಕುಬೇರಧ್ವಜದಲ್ಲಿ ಮನುಷ್ಯನೂ, ಕುಮಾರಸ್ವಾಮಿಯ ಧ್ವಜದಲ್ಲಿ ನವಿಲೂ, ಗಣಪತಿಯ ಧ್ವಜದಲ್ಲಿ ಇಲಿಯೂ, ಇಂದ್ರಧ್ವಜದಲ್ಲಿ ಕೋಣವೂ ದುರ್ಗಾದೇವಿಯ ಧ್ವಜದಲ್ಲಿ ಸಿಂಹವೂ, ಈರೀತಿ ಧ್ವಜಗಳಲ್ಲಿ ಆಯಾಯಾ ವಾಹನಗಳ ಆಕೃತಿಗಳನ್ನು ಕಲ್ಪಿಸಬೇಕು.

೧೦. ಯಾವ ದೇವತೆಗೆ ಯಾವ ಪ್ರಾಣಿಯು ವಾಹನವಾಗಿರುವುದೋ ಅದೇ ಆ ದೇವತೆಗೆ ಧ್ವಜದಲ್ಲಿ ಗುರುತಾಗಿರಬೇಕೆಂಬುದೇ ಮುಖ್ಯತತ್ತ್ವ.

೧೧. ಅನಂತರ ಸಕಲ ಔಷಧಿಗಳಿಂದಲೂ ಸೂರ್ಯನನ್ನು ಸ್ನಾನಮಾಡಿಸಿ (ಅಭಿಷೇಕಮಾಡಿ) ಆಮೇಲೆ ಆ ಧ್ವಜದ ಮಧ್ಯಭಾಗದಲ್ಲಿ ಕಂಕಣವನ್ನು (ಪ್ರತಿಸರವನ್ನು) ಕಟ್ಟಬೇಕು.

೧೨. ಇದಾದ ಮೇಲೆ ಮಂಗಳಕರವಾದ ವೇದಿಕೆಯನ್ನು ರಚಿಸಿ ಆ ವೇದಿಕೆಯ ಮೇಲೆ ಕಲಶಗಳನ್ನಿಟ್ಟು ಅಲಂಕರಿಸಿ, ಆದರಲ್ಲಿ ಸೂರ್ಯನ ಬಾವುಟವನ್ನು ಏರಿಸಿ ಆ ರಾತ್ರಿ ಅಲ್ಲಿ ಅಧಿವಾಸ ಮಾಡಿಸಬೇಕು.

ನಾನಾಕುಸುಮಚಿತ್ರಾಶ್ಚ ಸ್ರಜಸ್ತಸ್ಯಾಂ ಚ ಲಂಬಯೇತ್ ।
ಅಭ್ಯರ್ಚ್ಯ ವೈ ಪ್ರಯತ್ನೇನ ಧೂಪಮಸ್ಯ ನಿವೇದನಂ ॥ ೧೩ ॥
ಬಲಿಕರ್ಮ ತತಃ ಕುರ್ಯಾತ್ ಕೃಸರಾಪೂಪಕಾದಿಭಿಃ ।
ಪಲಲೋಲ್ಲಿಪಿಕಾಭಿಶ್ಚ ದಧಿಪಾಯಸಮೋದಕೈಃ ॥ ೧೪ ॥

ಉದ್ದಿಶ್ಯ ಲೋಕಪಾಲೇಭ್ಯೋ ಬಲಿಂ ದದ್ಯಾತ್ತು ವಾಯವೇ ।
ಬ್ರಾಹ್ಮಣಾನ್ಸ್ವಸ್ತಿ ವಾಚ್ಯಾಥ ಕೃತ್ವಾ ಪುಣ್ಯಾಹಮಂಗಳಂ ॥ ೧೫ ॥

ವಾದಿತ್ರಕೃತನಿರ್ಘೋಷಂ ಜಯಶಬ್ದೇನ ಸಂಕುಲಂ ।
ಶುಭೇ ಲಗ್ನೇ ದಿನೇ ಋಕ್ಷೇ ಧ್ವಜಮಾರೋಪಯೇದ್ಬುಧಃ ॥ ೧೬ ॥

ಏವಮಾರೋಪಯೇದ್ಯಸ್ತು ಧ್ವಜಂ ದೇವಾಲಯೋಪರಿ ।
ಶ್ರಿಯಾ ಸಂವರ್ಧತೇ ನಿತ್ಯಂ ಪ್ರಾಪ್ನೋತಿ ಚ ಶುಭಾಂ ಗತಿಂ ॥ ೧೭ ॥

---

೧೩-೧೪. ಆಮೇಲೆ ಅನೇಕ ಹೂವುಗಳನ್ನು ಸೇರಿಸಿ ಚಿತ್ರವಿಚಿತ್ರವಾಗಿ ಕಾಣುವಂತೆ ಹೂವಮಾಲೆಗಳನ್ನು ಮಾಡಿ ಅದನ್ನು ಆ ಧ್ವಜಕ್ಕೆ ಮಾಲಾಕಾರದಲ್ಲಿ ಹಾಕಬೇಕು. ಅನಂತರ ಅದನ್ನು ಪ್ರಯತ್ನ ಪೂರ್ವಕವಾಗಿ ಶ್ರದ್ಧೆಯಿಂದ ಧೂಪ ದೀಪ ನೈವೇದ್ಯಾದಿಗಳಿಂದ ಪೂಜಿಸಿ, ಆಮೇಲೆ ಕೃಸರ (ಎಳ್ಳುಉಂಡೆ, ಅಥವ ಎಳ್ಳಿನಿಂದ ಮಾಡಿದ ಪದಾರ್ಥಗಳು) ಕಡಬು, ಗೆಡ್ಡೆಗೆಣಸುಗಳಿಂದ ಮಾಡಿದ ಪದಾರ್ಥಗಳು, ಮೊಸರು, ಹಾಲು, ಪಾಯಸ ಮೊದಲಾದವುಗಳಿಂದ ಬಲಿಯನ್ನು ಕೊಡಬೇಕು. ಅಂದರೆ ಈ ಪದಾರ್ಥಗಳನ್ನು ನೈವೇದ್ಯಮಾಡಬೇಕು.

೧೫-೧೬. ಹಿಂದೆ ಹೇಳಿದ ಬಲಿಯನ್ನು ಲೋಕಪಾಲಕರನ್ನುದ್ದೇಶಿಸಿ ವಾಯುವಿಗೆ ಕೊಡಬೇಕು. ಅನಂತರ ಬ್ರಾಹ್ಮಣರಿಂದ ಸ್ವಸ್ತಿವಾಚನಪೂರ್ವಕವಾಗಿ ಪುಣ್ಯಾಹವನ್ನು ಮಾಡಿಸಿ, ವಾದ್ಯಗಳ ಧ್ವನಿಗಳಿಂದಲೂ ಜಯಘೋಷದಿಂದಲೂ ವ್ಯಾಪ್ತವಾದ ಶುಭಲಗ್ನ ಶುಭದಿವಸ, ಶುಭನಕ್ಷತ್ರ, ಇವುಗಳು ಸರಿಯಾಗಿ ಸೇರುವ ದಿವಸವನ್ನು ನಿಶ್ಚಯಿಸಿ ಆ ದಿವಸ ಪಂಡಿತನಾದವನು ಧ್ವಜಾರೋಪಣ ಮಾಡಬೇಕು.

೧೭. ಈ ರೀತಿ ದೇವಾಲಯದ ಮೇಲೆ ಕ್ರಮವಾಗಿ ಧ್ವಜಾರೋಪಣೆ ಮಾಡುವವನು ಅನವರತವೂ ಸಂಪತ್ತುಗಳಿಂದ ಕೂಡಿದವನಾಗಿ ಮುಂದೆ ಉತ್ತಮವಾದ ಗತಿಯನ್ನು ಹೊಂದುತ್ತಾನೆ.

ನ ಸುರಾ ವಸ್ತುಮಿಚ್ಛಂತಿ ಧ್ವಜಹೀನೇ ಸುರಾಲಯೇ ।
ಮಂತ್ರಸ್ತು ಸ್ಥಾಪನೇ ಪ್ರೋಕ್ತೋ ವಿಧಾನಜ್ಞೈರ್ಧ್ವಜಸ್ಯ ತು ॥ ೧೮ ॥
ಏಹ್ಯೇಹಿ ಭಗವನ್ನೀಶ ವಿನಿರ್ಮಿತಾಪರಿಚರವಾಯುಸಾರ್ಧಾನುಸಾರಿಣಾ ।
ಶ್ರೀಕರಶ್ರೀನಿವಾಸರಿಪುಧ್ವಂಸಕಾರಿನ್ ಪಕ್ಷಿನಿಲಯಸರ್ವದೇವತಾ ॥
ಸತತಂ ಕುರು ಸಾನ್ನಿಧ್ಯಂ ಶಾಂತಿಂ ಸ್ವಸ್ತ್ಯಯನಂ ಚ ಮೇ ಭವತು ।
ಸರ್ವವಿಘ್ನಾ ಅಪಸರಂತು ಸ್ವಾಹಾ (ಧ್ವಜಾರೋಪಣ ಮಂತ್ರೋಽಯಂ) ॥

ಇತಿ ಶ್ರೀ ಸಾಂಬಪುರಾಣೇ ಧ್ವಜಾರೋಪಣಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ.

---

೧೮-೧೯ ಧ್ವಜವಿಲ್ಲದ ದೇವಾಲಯದಲ್ಲಿ ದೇವತೆಗಳು ವಾಸಮಾಡಲು ಅಪೇಕ್ಷಿಸುವುದಿಲ್ಲ. ಧ್ವಜಾರೋಪಣವಿಧಿಯನ್ನು ತಿಳಿದ ವಿದ್ವಾಂಸರು "ಏಹ್ಯೇಹಿ ........... ಸರ್ವವಿಘ್ನಾ ಅಪಸರಂತು ಸ್ವಾಹಾ" ಎಂಬ ಮಂತ್ರದಿಂದ ಧ್ವಜಾರೋಪಣ ಮಾಡುವರು. (ಪರಮಾತ್ಮನೇ ಸಪರಿವಾರನಾಗಿ ಇಲ್ಲಿಗೆಬಂದು ಸಂಪತ್ಪ್ರದನಾಗಿ, ಶತ್ರುನಾಶಕನಾಗಿ ಸರ್ವದಾ ಭಕ್ತರನ್ನು ರಕ್ಷಿಸುತ್ತ ಸ್ಥಿರವಾಗಿ ನೆಲಸು. ನಮ್ಮ ವಿಘ್ನಗಳೆಲ್ಲಾ ಪರಿಹಾರವಾಗಲಿ.)

ಇಲ್ಲಿಗೆ ಸಾಂಬಪುರಾಣದಲ್ಲಿ ಧ್ವಜಾರೋಪಣ ನಿರೂಪಣವೆಂಬ
ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಚತುಸ್ತ್ರಿಂಶೋಽಧ್ಯಾಯಃ

---

॥ ವಸಿಷ್ಠ ಉವಾಚ ॥

**ಅಥ ಸಂವತ್ಸರೇ ಪೂರ್ಣೇ ಸ್ಥಾಪಿತಸ್ಯ ದಿವಸ್ಪತೇಃ ।**
**ಸಾಂಬಃ ಪಪ್ರಚ್ಛ ಭೂಯೋಽಪಿ ನಾರದಂ ಚರ್ಷಿಸತ್ತಮಂ ॥ ೧ ॥**

॥ ಸಾಂಬ ಉವಾಚ ॥

**ಸ್ಥಾಪಿತಸ್ಯ ಸಹಸ್ರಾಂಶೋಃ ಪೂರ್ಣೇ ಸಂವತ್ಸರೇ ಪುನಃ ।**
**ಕಥಂ ಸಾಂವತ್ಸರೀ ಪೂಜಾ ಕರ್ತವ್ಯಾ ಚರ್ಷಿಸತ್ತಮ ॥ ೨ ॥**

---

ಮೂವತ್ತುನಾಲ್ಕನೆಯ ಅಧ್ಯಾಯ.

೧. ಹೀಗೆ ಸೂರ್ಯನನ್ನು ಸ್ಥಾಪಿಸಿ ಒಂದುವರ್ಷಮುಗಿದಮೇಲೆ ಸಾಂಬನು ಪುನಃ ಋಷಿಶ್ರೇಷ್ಠನಾದ ನಾರದನನ್ನು ಮುಂದೆಹೇಳುವಂತೆ ಪ್ರಶ್ನೆಮಾಡಿದನು

೨. "ಎಲೈ ಋಷಿಶ್ರೇಷ್ಠನಾದ ನಾರದನೆ; ಸಹಸ್ರಕಿರಣನಾದ ಸೂರ್ಯದೇವನನ್ನು ಪ್ರತಿಷ್ಠೆಮಾಡಿ, ಇಲ್ಲಿಗೆ ಒಂದುವರ್ಷವಾಯಿತು. ಈಗ ಆ ದೇವನಿಗೆ ವಾರ್ಷಿಕ ಪೂಜೆಯನ್ನು ಯಾವರೀತಿ ಮಾಡಬೇಕು" ಎಂದು ಸಾಂಬನು ನಾರದನನ್ನು ಪ್ರಾರ್ಥಿಸಿದನು.

ಅಧ್ಯಾಯ ೩೫

॥ ನಾರದ ಉವಾಚ ॥

ಯಥೋಕ್ತೇನ ವಿಧಾನೇನ ಪ್ರತಿಮಾಸ್ಥಾಪನೇ ಕೃತೇ ।
ಸಂವತ್ಸರೇ ತತಃ ಪೂರ್ಣೇ ಸ್ನಾನಕರ್ಮವಿಧಾನವಿತ್ ॥ ೩ ॥

ತೀರ್ಥೋದಕಮುಪಾನೀಯ ಹ್ಯನ್ಯಚ್ಚಾಪಿ ಜಲಂ ಶುಚಿಃ ।
ಪೂರ್ವೋಕ್ತೇನ ವಿಧಾನೇನ ಪ್ರತಿಮಾಂ ಸ್ನಾಪಯೇದ್ಬುಧಃ ॥ ೪ ॥

ಜಪೇಚ್ಚ ತೀರ್ಥಸಾಮಾನಿ ಮನಸಾ ಸಂಸ್ಮರೇತ್ತತಃ ।
ಪುಷ್ಕರಂ ನೈಮಿಷಂ ಚೈವ ಕುರುಕ್ಷೇತ್ರಂ ಪೃಥೂದಕಂ ॥ ೫ ॥

ಗಂಗಾಸರಸ್ವತೀಸಿಂಧುಶ್ಚಂದ್ರಭಾಗಾ ಚ ನರ್ಮದಾ ।
ಪಯೋಷ್ಣೀ ಯಮುನಾ ತಾಮ್ರಾ ಕ್ಷಿಪ್ರಾ ವೇತ್ರವತೀ ತಥಾ ॥ ೬ ॥

---

೩-೪. ಆಗ ನಾರದನು ಸಾಂಬನಮಾತನ್ನು ಕೇಳಿ ಹೀಗೆಂದನು; ಶಾಸ್ತ್ರೋಕ್ತವಾದ ಕ್ರಮದಿಂದ (ಹಿಂದೆ ನಾನುನಿನಗೆ ಹೇಳಿದಕ್ರಮದಿಂದ) ಸೂರ್ಯಪ್ರತಿಮೆಯುನ್ನು ಪ್ರತಿಷ್ಠೆಮಾಡಿ ಒಂದುವರ್ಷಕಳೆಯಲು, ಕರ್ಮಾನುಷ್ಠಾನ ಸ್ವರೂಪವನ್ನು ಚೆನ್ನಾಗಿತಿಳಿದ ಯಜಮಾನನು ಪುಣ್ಯಕರವಾದ ತೀರ್ಥೋದಕವನ್ನೂ ಮತ್ತು ಬೇರೆ ಶುದ್ಧವಾದ ಸರಸ್ಸು ಮೊದಲಾದವುಗಳ ನೀರನ್ನೂತರಿಸಿ ಹಿಂದೆಹೇಳಿದ ರೀತಿಯಿಂದ ಸೂರ್ಯಪ್ರತಿಮೆಗೆ ಅಭಿಷೇಕಮಾಡಬೇಕು.

೫-೬. ಅಭಿಷೇಕಮಾಡುವಾಗ ತೀರ್ಥಗಳ ಹೆಸರುಗಳನ್ನು ಮನಸ್ಸಿನಲ್ಲಿ ಉಚ್ಚರಿಸುತ್ತಾ (ಜಪಿಸುತ್ತಾ) ಪುಷ್ಕರ, ನೈಮಿಶ, ಕುರುಕ್ಷೇತ್ರ, ಪೃಥೂದಕಾ, ಗಂಗಾ, ಸರಸ್ವತಿ, ಸಿಂಧು, ಚಂದ್ರಭಾಗಾ, ನರ್ಮದಾ, ಪಯೋಷ್ಣೀ, ಯಮುನಾ ತಾಮ್ರಾ, ಕ್ಷಿಪ್ರಾ, ವೇತ್ರವತೀ, ಮೊದಲಾದ ಸರೋವರಗಳೂ, ಸಾಗರಗಳೂ, ನದಿಗಳೂ, ಪುಣ್ಯತೀರ್ಥಗಳೂ, ಸೂರ್ಯದೇವನಿಗೆ ಅಭಿಷೇಕಮಾಡುವ ಜಲದಲ್ಲಿ ಸಾನ್ನಿಧ್ಯವನ್ನು ಹೊಂದಲಿ ಎಂದು ಮನಸಾಪ್ರಾರ್ಥಿಸಬೇಕು.

ಸರಿತಃ ಸಾಗರಾಶ್ಚೈವ ಸಾನ್ನಿಧ್ಯಂ ಕಲ್ಪಯಂತು ವೈ ।
ಏವಂ ಸ್ನಾನವಿಧಿಂ ಕೃತ್ವಾ ಹ್ಯರ್ಚಯಿತ್ವಾ ಪ್ರಣಮ್ಯ ಚ ॥ ೭ ॥

ಧೂಪಮರ್ಘಂ ಚ ದತ್ವಾ ತು ಪ್ರತಿಮಾಮಧಿವಾಸಯೇತ್ ।
ತ್ರಿರಾತ್ರಂ ಸಪ್ತರಾತ್ರಂ ವಾ ಮಾಸಾರ್ಧಂ ಮಾಸಮೇವ ಚ ॥ ೮ ॥

ಅತೋಽಸ್ಯ ಕಾರಯೇದ್ಯಾತ್ರಾಂ ಶಾಂತಿಹೇತೋರ್ಜನಸ್ಯ ಚ ।
ರಥೇನ ದರ್ಶನೀಯೇನ ಕಿಂಕಿಣೀಜಾಲಮಾಲಿನಾ ॥ ೯ ॥

ಪ್ರೀಣಯಿತ್ವಾ ದ್ವಿಜಾನ್ಸರ್ವಾನ್ದಕ್ಷಿಣಾಭೋಜನಾದಿಭಿಃ ।
ರಥಸ್ಥಾಂ ಪ್ರತಿಮಾಂ ಕೃತ್ವಾ ಕುರ್ಯಾತ್ಸ್ಥಾನಪ್ರದಕ್ಷಿಣಂ ॥ ೧೦ ॥

ಏವಂ ತು ಕ್ರಿಯಮಾಣಾಯಾಂ ಯಾತ್ರಾಯಾಂ ಪ್ರತಿವತ್ಸರಂ ।
ಪ್ರಜಾಶ್ಚ ಸುಖಮೇಧಂತೇ ರಾಜಾ ಜಯತಿ ಚಾಹಿತಾತ್ ॥ ೧೧ ॥

---

೭-೮. ಹೀಗೆ ಸ್ನಾನವಿಧಿಯನ್ನು ಮಾಡಿ ನಡೆಸಿ ಆ ಮೇಲೆ ಧೂಪವನ್ನು ಅರ್ಘ್ಯವನ್ನೂ ಸಮರ್ಪಿಸಿ, ಆ ಸೂರ್ಯಪ್ರತಿಮೆಯನ್ನು ಮೂರು ರಾತ್ರಿ, ಅಥವಾ ಏಳು ರಾತ್ರಿ, ಅರ್ಧತಿಂಗಳು, (ಹದಿನೈದು ದಿನ ರಾತ್ರಿ) ಅಥವ ಒಂದು ತಿಂಗಳುಕಾಲ ಇವುಗಳಲ್ಲಿ ಯಾವುದನ್ನಾದರೂ ಆಶ್ರಯಿಸಿ, ಹಿಂದೆ ತಂದಿಟ್ಟಿರುವ ತೀರ್ಥೋದಕಗಳಲ್ಲಿ ಅಧಿವಾಸಮಾಡಿಸಬೇಕು.

೯. ಅನಂತರ ಆ ಸೂರ್ಯಪ್ರತಿಮೆಯನ್ನು ಪ್ರಜಾಶಾಂತಿಗೋಸ್ಕರ ಸುಂದರವೂ ಗಂಟೆಗಳ ಸಮೂಹದಿಂದ ಕೂಡಿರುವುದೂ ಆದ ರಥದಲ್ಲಿ ಕೂರಿಸಿ ಯಾತ್ರೆ ಮಾಡಿಸಬೇಕು. (ಮೆರವಣಿಗೆ ಅಥವ ಉತ್ಸವ ಮಾಡಿಸಬೇಕು)

೧೦ ದ್ವಿಜರನ್ನು ದಕ್ಷಿಣ ತಾಂಬೂಲಗಳಿಂದ, ಒಳ್ಳೆಯ ಭೋಜನಗಳಿಂದಲೂ ಸಂತೋಷಪಡುವಂತೆ ಮಾಡಿ, ಅನಂತರ ಸೂರ್ಯಪ್ರತಿಮೆಯನ್ನು ರಥದ ಮೇಲೆ ಕೂರಿಸಿಕೊಂಡು ಆ ದೇವಾಲಯದ ಸುತ್ತಲೂ ಪ್ರದಕ್ಷಿಣೆ ಬರುವಂತೆ ಉತ್ಸವ ಮಾಡಿಸಬೇಕು.

೧೧-೧೨. ಹೀಗೆ ಪ್ರತಿವರ್ಷವೂ ಸೂರ್ಯದೇವನಿಗೆ ಉತ್ಸವವನ್ನು ನಡೆಸುತ್ತಿದ್ದರೆ ಪ್ರಜೆಗಳು ಸುಖ ಶಾಂತಿಯನ್ನು ಪಡೆಯುವರು. ರಾಜನು ನಿರಾಯಾಸವಾಗಿ

ನೀರುಜಶ್ಚ ಜನಃ ಸರ್ವೋ ಗವಾಂ ಶಾಂತಿರ್ಭವೇತ್ತಥಾ ।
ಕರ್ತಾರಶ್ಚಾಪಿ ಯಾತ್ರಾಯಾಃ ಸ್ವರ್ಗಭಾಜೋ ಭವಂತಿ ವೈ ॥ ೧೨ ॥

॥ ಸಾಂಬ ಉವಾಚ ॥

ಕಥಂ ಸಂಚಾಲಯೇದ್ಭೂಯಃ ಸ್ಥಾಪಿತಾಂ ಪ್ರತಿಮಾಂ ಸಕೃತ್ ।
ಏತತ್ತು ವದ ವಿಪ್ರರ್ಷೇ ಸುಮಹಾನ್ ಸಂಶಯೋ ಹಿ ಮೇ ॥ ೧೩ ॥

ಪೂರ್ವಮೇವ ಸಹಸ್ರಾಂಶೋರ್ಯಾನಹೇತೋರ್ಮಹಾತ್ಮನಃ ।
ಸಂವತ್ಸರಸ್ಯಾವಯವೈರ್ಬ್ರಹ್ಮಣಾ ಕಲ್ಪಿತೋ ರಥಃ ॥ ೧೪ ॥
ಸರ್ವೇಷಾಂ ತು ರಥಾನಾಂ ವೈ ಶ್ರೇಷ್ಠಃ ಸ ಚ ರಥಃ ಸ್ಮೃತಃ ।
ತಂ ದೃಷ್ಟ್ವಾ ತು ತತಸ್ತ್ವನ್ಯೇ ಸ್ಯಂದನಾ ವಿಶ್ವಕರ್ಮಣಾ ॥ ೧೫ ॥

---

ತನ್ನ ಶತ್ರುಗಳನ್ನು ನಾಶಪಡಿಸುವನು. ಜನಗಳೆಲ್ಲರೂ ರೋಗಹೀನರಾಗುವರು. ಗೋವುಗಳಿಗೆಲ್ಲಾ ನೆಮ್ಮದಿಯುಂಟಾಗುವುದು. ಮತ್ತೂ ಸೂರ್ಯದೇವನ ಉತ್ಸವವನ್ನು ಮಾಡಿಸುವ ಯಜಮಾನನು ಇಹದಲ್ಲಿ ಸುಖವನ್ನು ಹೊಂದಿ ಪರದಲ್ಲಿ ಸ್ವರ್ಗವನ್ನು ಸೇರುವನು.

೧೩. ನಾರದಮಹರ್ಷಿಯು ಹೀಗೆ ನುಡಿಯಲು ಸಾಂಬನು ಅದನ್ನೆಲ್ಲವನ್ನೂ ಕೇಳಿ, ಪುನಃ ನಾರದನನ್ನು ಕುರಿತು, "ಎಲೈ ಬ್ರಾಹ್ಮಣಶ್ರೇಷ್ಠನೇ, ಮೊದಲು ಸ್ಥಾಪನೆ ಮಾಡಿದ ಪ್ರತಿಮೆಯನ್ನು ಪುನಃ ಚಾಲನೆಮಾಡುವುದು ಹೇಗೆ? (ಹಾಗೆ ಮಾಡದೇ ಹೋದರೆ ಆ ಪ್ರತಿಮೆಗೆ ಅಧಿವಾಸಮಾಡಲು ಸಾಧ್ಯವೇ ಇಲ್ಲವಲ್ಲ.) ಈ ವಿಷಯದಲ್ಲಿ ನನಗೆ ತುಂಬಾ ಸಂಶಯವುಂಟಾಗಿರುವುದು. ದಯವಿಟ್ಟು ನನಗೆ ಆ ವಿಷಯವನ್ನು ತಿಳಿಸಿ ನನ್ನ ಸಂದೇಹವನ್ನು ದೂರಮಾಡು" ಎಂದು ಪ್ರಶ್ನೆಮಾಡಿದನು.

೧೪-೧೭. ಆಗ ನಾರದನು, ಅಯ್ಯಾ ಸಾಂಬನೆ, ಮಹಾಪುರುಷನಾದ ಸಹಸ್ರಕಿರಣ (ಸೂರ್ಯ)ನು ಸಂಚಾರಮಾಡುವುದಕ್ಕೋಸ್ಕರ ಬ್ರಹ್ಮನು ಮೊದಲೇ ಸಂವತ್ಸರದ ಅವಯವಗಳಿಂದ ಕೂಡಿದ ಒಂದು ರಥವನ್ನು ನಿರ್ಮಿಸಿದನು. ಆ ರಥವು ಎಲ್ಲಾ ರಥಗಳಿಗಿಂತಲೂ ಶ್ರೇಷ್ಠವೆನಿಸಿದುದು. ಹೀಗೆ ಬ್ರಹ್ಮನು ಸೂರ್ಯನಿಗೋಸ್ಕರ

ಕಲ್ಪಿತಾಃ ಸರ್ವದೇವಾನಾಂ ಸೋಮಾದೀನಾಮನೇಕಶಃ ।
ವೈವಸ್ವತೇನ ಚ ತತೋ ಮನುನೇಕ್ಷ್ವಾಕವೇ ಪುನಃ ॥ ೧೬ ॥

ರಥೋ ದತ್ತಸ್ತು ತೇನಾತಿಮಾನುಷೇಷ್ವವತಾರಿತಃ ।
ಅತಸ್ತು ರಥಯಾನೇನ ಚಾಲನಂ ತು ಹಿತಂ ರವೇಃ ॥ ೧೭ ॥

ತಸ್ಮಾನ್ನ ದುಷ್ಯತೇ ಸಾಂಬ ಸವಿತುಶ್ಚಾಲನಂ ಚ ಯತ್ ।
ತಸ್ಮಾದ್ರಥೇನ ಪರ್ಯೇತಿ ಭಾಸ್ಕರಃ ಪೃಥಿವೀಮಿಮಾಂ ॥ ೧೮ ॥

ಗಚ್ಛನ್ನದೃಶ್ಯತೇ ಚೈವ ಮಂಡಲಂ ಸವಿತುಃಸದಾ ।
ಅದೃಶ್ಯಂ ಚಂಚಲಂ ದೃಷ್ಟಂ ಯಸ್ಮಾಜ್ಜಾಂಬವತೀಸುತ ॥ ೧೯ ॥

---

ಸಂವತ್ಸರದ ಸ್ವರೂಪವಾದ ರಥವನ್ನು ನಿರ್ಮಿಸಿದಮೇಲೆ, ಅದನ್ನು ನೋಡಿ ವಿಶ್ವಕರ್ಮನು ಸೋಮನೇ (ಚಂದ್ರನೆ) ಮೊದಲಾದ ಉಳಿದ ದೇವತೆಗಳಿಗೆಲ್ಲಾ ಬೇರೆ ಬೇರೆ ರಥಗಳನ್ನು ನಿರ್ಮಿಸಿಕೊಟ್ಟನು. ಆ ಸೂರ್ಯರಥವು ವೈವಸ್ವತಮನುವಿನಿಂದ ಇಕ್ಷ್ವಾಕುಮಹಾರಾಜನಿಗೆ ಕೊಡಲ್ಪಟ್ಟಿತು. ಆ ಇಕ್ಷ್ವಾಕುವು ಆ ಸೂರ್ಯರಥವನ್ನು ಮನುಷ್ಯಲೋಕದಲ್ಲಿ ಇಳಿಸಿಕೊಂಡು ಬಂದನು. ಆದುದರಿಂದ ಆ ಸೂರ್ಯನನ್ನು ರಥದಲ್ಲಿ ಸ್ಥಾಪನೆಮಾಡಿ ಎಳೆದರೆ ಸೂರ್ಯದೇವನಿಗೆ ತೃಪ್ತಿಯುಂಟಾಗುವುದು.

೧೮. ಎಲೈ ಸಾಂಬನೆ, ಈ ರೀತಿ ಸೂರ್ಯನನ್ನು ಚಾಲನೆಮಾಡಿ ರಥದ ಮೇಲೆ ಕೂರಿಸಿ ಉತ್ಸವ ಮಾಡುವುದರಿಂದ ಯಾವ ಬಗೆಯ ದೋಷವೂ ಉಂಟಾಗುವುದಿಲ್ಲ. ಏಕೆಂದರೆ ಆ ಸೂರ್ಯನು ಈ ಭೂಮಂಡಲವನ್ನೆಲ್ಲಾ ರಥದ ಮೇಲೆ ಕುಳಿತೇ ಸಂಚರಿಸುವನು.

೧೯. ಜಾಂಬವತೀ ಪುತ್ರನೆ; ಅದರಿಂದಲೇ ಸೂರ್ಯನು ಸಂಚರಿಸುತ್ತಿರುವಾಗ ಯಾವಾಗಲೂ ಆವನ ಮಂಡಲವು ಸರಿಯಾಗಿ ಕಾಣದೆ, ಚಲನೆಯ ವೇಗದಿಂದ ಚಂಚಲವಾಗಿ ಕಾಣುತ್ತಿರುವುದು.

'ತದೇತಾಂ ರಥಯಾತ್ರಾಂ ತು ದೃಷ್ಟ್ವಾ ಭಾನೋರ್ಮನೀಷಿಭಿಃ ।
ಅನ್ಯೇಷಾಂ ಚಾಲನಂ ನಾಸ್ತಿ ದೇವಾನಾಂ ಯದುನಂದನ ॥ ೨೦ ॥

ಬ್ರಹ್ಮವಿಷ್ಣುಶಿವಾದೀನಾಂ ಸ್ಥಾಪಿತಾನಾಂ ವಿಧಾನತಃ ।
ತಸ್ಮಾದ್ರಥೇನ ದೇವಸ್ಯ ರವೇರ್ಯಾತ್ರಾಽಭಿಧೀಯತೇ ॥ ೨೧ ॥

ಪ್ರಜಾನಾಮಿಹ ಶಾಂತ್ಯರ್ಥಂ ಪ್ರತಿಸಂವತ್ಸರಂ ತಥಾ ।
ಕಾಂಚನೋ ವಾಥ ರೌಪ್ಯೋ ವಾ ದೃಢದಾರುಮಯೋಽಪಿ ವಾ ॥ ೨೨ ॥

ದೃಢಾಕ್ಷರಥಚಕ್ರಶ್ಚ ರಥಃ ಕಾರ್ಯಃ ಸುಯಂತ್ರಿತಃ ।
ತಸ್ಮಿನ್ರಥೇ ವರೇ ಶ್ರೇಷ್ಠೇ ಕಲ್ಪಿತೇ ಸುಮನೋಹರೇ ॥ ೨೩ ॥

ಆರೋಪ್ಯ ಪ್ರತಿಮಾಂ ಯತ್ನಾದ್ಯೋಜಯೇದ್ವಾಜಿನಃ ಶುಭಾನ್ ।
ಹರಿಲ್ಲಕ್ಷಣಸಂಪನ್ನಾನ್ ಸುಮುಖಾನ್ವಶವರ್ತಿನಃ ॥ ೨೪ ॥

---

೨೦-೨೧. ಈ ರೀತಿ ಸೂರ್ಯನ ರಥೋತ್ಸವವನ್ನು ವಿದ್ವಾಂಸರು ಒಪ್ಪಿರುವರು. ಉಳಿದ ಬ್ರಹ್ಮ ವಿಷ್ಣು ಮಹೇಶ್ವರರು ಶಾಸ್ತ್ರೋಕ್ತವಾಗಿ ಸ್ಥಾಪಿಸಲ್ಪಟ್ಟಿದ್ದರೂ ಅವರನ್ನು ಚಾಲನೆ ಮಾಡಬೇಕಾಗಿಲ್ಲ. ಆದುದರಿಂದ ಎಲೈ ಯದುನಂದನನೇ! ಸೂರ್ಯದೇವನಿಗೆ ರಥದಲ್ಲಿಯೇ ಯಾತ್ರೆ ಮಾಡಿಸಬೇಕು.

೨೨. ಪ್ರಜೆಗಳಿಗೆ ಶಾಂತಿಯುಂಟಾಗುವುದಕ್ಕೋಸ್ಕರ ಪ್ರತಿವರ್ಷದಲ್ಲಿಯೂ ಚಿನ್ನ, ಬೆಳ್ಳಿ, ಅಥವಾ ಗಟ್ಟಿಯಾದ ಮರ, ಇವುಗಳಲ್ಲಿ ತನ್ನ ಯೋಗ್ಯತೆಗನುಸರಿಸಿ ದೃಢವಾದ ಅಚ್ಚು ಮತ್ತು ಚಕ್ರಗಳಿಂದ ಯುಕ್ತವಾದ ರಥವನ್ನು ನಿಯಮದಿಂದ ಮಾಡಿಸಬೇಕು.

೨೩-೨೪. ಹೀಗೆ ಸಿದ್ಧವಾದ ಶ್ರೇಷ್ಠವೂ ಮನೋಹರವೂ ಆದ ರಥದಲ್ಲಿ ಸೂರ್ಯ ಪ್ರತಿಮೆಯನ್ನಿರಿಸಿ ಪ್ರಯತ್ನ ಪೂರ್ವಕವಾಗಿ ಹರಿದ್ವರ್ಣಯುಕ್ತವೂ, ಸುಂದರವಾದ ಮುಖವುಳ್ಳವುಗಳೂ ಆದ ಕುದುರೆಗಳನ್ನು ಆ ರಥಕ್ಕೆ ಕಟ್ಟಬೇಕು. ಆ ಕುದುರೆಗಳು ತನಗೆ ಅಧೀನವಾಗಬೇಕು.

ಕುಂಕುಮೇನ ಸಮಾಲಭ್ಯಾಂಶ್ಚಾಮರೇಣ ವಿಭೂಷಿತಾನ್ ।
ಸದಶ್ವಾನ್ಯೋಜಯಿತ್ವಾ ತು ರಥಾಚಾರ್ಯಂ ಪ್ರದಾಪಯೇತ್ ॥ ೨೫ ॥

ವಿಧಿವತ್ಪೂಜಯಿತ್ವಾ ತು ಧೂಪಮಾಲ್ಯಾನುಲೇಪನೈಃ ।
ಆಹಾರೈರ್ವಿವಿಧೈಶ್ಚಾಪಿ ಭೋಜಯಿತ್ವಾ ದ್ವಿಜೋತ್ತಮಾನ್ ॥ ೨೬ ॥

ಸೂರ್ಯಕ್ರತೌ ತು ವಿತತೇ ಏವಮಾಹುರ್ಮನೀಷಿಣಃ ।
ಯಚ್ಚಿಂತಯತಿ ಭಗ್ನಾಶಃ ಕ್ಷುಧಯಾ ಚ ಪ್ರಪೀಡಿತಃ ॥ ೨೭ ॥

ಅದಾತಾ ಹಿ ಪಿತ್ರ್ಯಾಂಸ್ತೇನ ಸ್ವರ್ಗಸ್ಥಾನಪಿ ಪಾತಯೇತ್ ।
ಯಜ್ಞಶ್ಚ ದಕ್ಷಿಣಾಹೀನಃ ಸವಿತುರ್ನ ಪ್ರಶಸ್ಯತೇ ॥ ೨೮ ॥

ತಸ್ಮಾನ್ನಾನಾವಿಧೈಃ ಕಾಮ್ಯೈರ್ಭಕ್ಷ್ಯಭೋಜ್ಯಾನ್ನವಿಸ್ತರೈಃ ।
ಪ್ರೀಣಯಿತ್ವಾ ಜನಂ ಸರ್ವ ಮಿಮಮುಚ್ಚಾರಯೇದ್ವಿಧಿಂ ॥ ೨೯ ॥

---

೨೫-೨೬. ಆ ಕುದುರೆಗಳಿಗೆ ಕುಂಕುಮಗಳನ್ನು ಬಳಿದು ಚಾಮರಗಳಿಂದ ಅಲಂಕರಿಸಬೇಕು. ಅನಂತರ ಆ ಶ್ರೇಷ್ಠವಾದ ಕುದುರೆಗಳನ್ನು ಸಾರಥಿಯ ವಶಕ್ಕೆ ಕೊಡಬೇಕು. ಆ ಸಾರಥಿಯನ್ನೂ ಕ್ರಮವಾಗಿ ಧೂಪ, ಮಾಲೆ, ಅನುಲೇಪನ ಇವುಗಳಿಂದ ಅರ್ಚಿಸಬೇಕು. ಅನಂತರ ನಾನಾವಿಧ ಭಕ್ಷ್ಯ ಭೋಜ್ಯಾದಿ ಆಹಾರ ಗಳಿಂದ ಬ್ರಾಹ್ಮಣೋತ್ತಮರನ್ನು ಭೋಜನ ಮಾಡಿಸಿ ತೃಪ್ತಿಪಡಿಸಬೇಕು.

೨೭-೨೮. ವಿಸ್ತಾರವಾದ ಸೂರ್ಯಯಾಗದಲ್ಲಿ ಒಬ್ಬನು ಹಸಿವಿನಿಂದ ಪೀಡಿತ ನಾದರೂ, ನಿರಾಶನಾದ ಅವನಿಂದ, ಯಾಗವನ್ನು ಮಾಡಿಸುವ ಯಜಮಾನನ ಸ್ವರ್ಗ ವಾಸಿಗಳಾದ ಪಿತೃಗಳು ಹೀನಲೋಕಕ್ಕೆ ಬಂದು ಬಿಡುವರೆಂದು ತಿಳಿದವರು ಹೇಳುವರು ದಕ್ಷಿಣೆಯಿಲ್ಲದೆ ಇರುವ ಸೂರ್ಯಯಾಗವು ಶ್ರೇಷ್ಠವಾಗಲಾರದು.

೨೯. ಆದುದರಿಂದ ನಾನಾವಿಧವಾದ ಜನಗಳಿಗೆ ಇಷ್ಟವಾದ ಭಕ್ಷ್ಯ ಭೋಜ್ಯ, ಮೊದಲಾದುವುಗಳಿಂದ ಎಲ್ಲರನ್ನೂ ಸಂತೋಷಗೊಳಿಸಿ ಈ ಮುಂದೆ ಹೇಳುವಂತೆ ಪ್ರಾರ್ಥಿಸಬೇಕು.

ಬಲಿಂ ಗೃಹ್ಣಂತು ಮೇ ದೇವಾ ಆದಿತ್ಯಾ ವಸವಸ್ತಥಾ ।
ಮರುತಶ್ಚಾಶ್ವಿನೌ ರುದ್ರಾಃ ಸುಪರ್ಣಾಃ ಪನ್ನಗಾ ಗ್ರಹಾಃ ॥ ೩೦ ॥

ಅಸುರಾ ಯಾತುಧಾನಾಶ್ಚ ರಥಸ್ಥಾ ದೇವತಾಶ್ಚ ಯಾಃ ।
ದಿಕ್ಪಾಲಾ ಲೋಕಪಾಲಾಶ್ಚ ಯೇ ಚ ವಿಘ್ನವಿನಾಯಕಾಃ ॥ ೩೧ ॥

ಜಗತಃ ಸ್ವಸ್ತಿಕುರ್ವಾಣಾಃ ತಥಾ ದಿವ್ಯಾ ಮಹರ್ಷಯಃ ।
ಮಾ ವಿಘ್ನೋ ಮಾ ಚ ಮೇ ಪಾಪಂ ಮಾ ಚ ಮೇ ಪರಿಪಂಥಿನಃ ॥ ೩೨ ॥

ಸೌಮ್ಯಾ ಭವಂತು ತೃಪ್ತಾಶ್ಚ ದೇವಾ ಭೂತಗಣಾಸ್ತಥಾ ॥ ೩೩ ॥

ವಾಮದೇವ್ಯೈಃ ಪವಿತ್ರೈಶ್ಚ ಮಾನಸ್ತೋಕರಥಂತರೈಃ ।
ಆಕೃಷ್ಣೇನ ರಜಸೇತಿ ಋಚಮೇತಾಮುದಾಹರೇತ್ ॥ ೩೪ ॥

---

೩೦-೩೩. ದೇವತೆಗಳೂ, ಆದಿತ್ಯರೂ, ವಸುಗಳೂ, ಮರುತ್ತುಗಳೂ, ಅಶ್ವಿನಿ, ದೇವತೆಗಳೂ, ಏಕಾದಶರುದ್ರರೂ, ಸುಪರ್ಣರೂ, (ಗರುಡರೂ) ಅಂದರೆ ಪಕ್ಷಿಗಳೂ ನಾಗಗಳೂ, ನವಗ್ರಹಗಳೂ, ರಾಕ್ಷಸರೂ, ಯಾತುಧಾನರೂ ರಥದಲ್ಲಿರುವ ದೇವತೆಗಳೂ ಅಷ್ಟದಿಕ್ಪಾಲಕರೂ, ಲೋಕಪಾಲಕರೂ, ವಿಘ್ನಗಳಿಗೆ ಅಧಿಪತಿಯಾದ ದೇವತೆಗಳೂ, ಮತ್ತೂ, ಲೋಕಕ್ಕೆ ಕಲ್ಯಾಣವನ್ನುಂಟುಮಾಡುವ ದಿವ್ಯಮಹರ್ಷಿಗಳೂ, ನಾನು ಕೊಡುವ ಈ ಬಲಿಯನ್ನು ತೆಗೆದುಕೊಳ್ಳಲಿ ಎಂದು ಪ್ರಾರ್ಥಿಸಬೇಕು. ನನಗೆ ವಿಘ್ನವೂ ಪಾಪವೂ, ಶತ್ರುಗಳೂ, ಸಹ ಇರಬಾರದು ಎಂದು ಬೇಡಿಕೊಳ್ಳಬೇಕು. ಅನಂತರ ಎಲ್ಲಾ ದೇವಗಣಗಳೂ ಭೂತಗಣಗಳೂ ಸಹ ತೃಪ್ತರಾಗಿ ಶಾಂತಿಯನ್ನು ಹೊಂದಲಿ ಎಂದು ಕೇಳಿಕೊಳ್ಳಬೇಕು.

೩೪. ಅನಂತರ ಪವಿತ್ರವಾದ ವಾಮದೇವ, ಮಾನಸ್ತೋಕ, ರಥಂತರ, ಈ ಮಂತ್ರಗಳಿಂದಲೂ ಆ ಕೃಷ್ಣೇನರಜಸಾ, ಎಂಬ ಸವಿತೃದೇವತಾಕವಾದ ಋಕ್ಕಿನಿಂದಲೂ ಸ್ವಾಮಿಯನ್ನು ಭಜಿಸಬೇಕು.

ತತಃ ಪುಣ್ಯಾಹಶಬ್ದೇನ ಕೃತವಾದಿತ್ರನಿಸ್ವನಃ ।
ರಥಾಪಕ್ರಮಣಂ ಕುರ್ಯಾದ್ವರ್ತ್ಮನಾ ಸುಖಮೇಧತೇ ॥ ೩೫ ॥

ಪುರುಷೈಶ್ಚಾಪಿ ವೋಢವ್ಯಃ ಸೂರ್ಯಭಕ್ತಿಸಮನ್ವಿತೈಃ ।
ಸುಕೃತಾಗ್ರಹದಾನೈಶ್ಚ ಬಲೀವರ್ದೈರಥಾಪಿ ವಾ ॥ ೩೬ ॥

ಯಥಾಪರ್ವಮುದಾನಸ್ಯಾದ್ವಿಜನೇ ಪಥಿ ಗಚ್ಛತಃ ।
ಯುಗಾಕ್ಷಚಕ್ರಭಂಗೋ ವಾ ತಥಾ ನೇಯಃ ಶನೈಃ ಶನೈಃ ॥ ೩೭ ॥

ರಥಭಂಗೇ ದ್ವಿಜಭಯಂ ಭಗ್ನೇಽಕ್ಷೇ ಕ್ಷತ್ರಿಯಸ್ಯ ಚ ।
ತುಲಾಭಂಗೇ ತು ವೈಶ್ಯಾನಾಂ ಶಮ್ಯಾಃ ಶೂದ್ರಭಯಂ ಭವೇತ್ ॥ ೩೮ ॥

---

೩೫. ಅನಂತರ ಪುಣ್ಯಾಹವನ್ನು ಮಾಡಿಸಿ ಮಂಗಳವಾದ್ಯಗಳೊಡನೆ ಸರಿಯಾದ ಮಾರ್ಗದಲ್ಲಿ ರಥವನ್ನು ಬಿಡಬೇಕು. (ಎಳೆಯಬೇಕು) ಹೀಗೆ ಮಾಡಿದರೆ ಯಜಮಾನನಿಗೆ ಸೂರ್ಯಾನುಗ್ರಹವೂ ಸುಖವೂ ಲಭಿಸುವುದು.

೩೬. ಸೂರ್ಯನ ರಥವನ್ನು ಪುಣ್ಯಶಾಲಿಗಳೂ ದಾನಶೀಲರೂ ಸೂರ್ಯನಲ್ಲಿ ಭಕ್ತಿಯುಳ್ಳವರೂ ಆದ ಪುರುಷರು ಎಳೆದುಕೊಂಡು ಹೋಗಬಹುದು. ಅಥವ ಹೋರಿಗಳನ್ನಾದರೂ ಕಟ್ಟಿ ಎಳೆಸಬಹುದು.

೩೭. ಜನರಹಿತವಾದ ಮಾರ್ಗದಲ್ಲಿ ರಥವನ್ನು ಎಳೆದುಕೊಂಡು ಹೋಗುವಾಗ ನೊಗ, ಅಚ್ಚು, ಚಕ್ರ, ಇವುಗಳಾವುದಕ್ಕೂ ಅಪಾಯವುಂಟಾಗದಂತೆ ಮೆಲ್ಲಮೆಲ್ಲಗೆ ಎಳೆದುಕೊಂಡು ಹೋಗಬೇಕು.

೩೮-೪೦. ಹೀಗೆ ರಥವನ್ನು ಎಳೆದುಕೊಂಡು ಹೋಗುತ್ತಿರುವಾಗ ರಥವೇ ಮುರಿದು ಹೋದರೆ ಬ್ರಾಹ್ಮಣರಿಗೆ ಭಯವುಂಟಾಗುವುದು. ಅಚ್ಚು ಮುರಿದರೆ ಕ್ಷತ್ರಿಯರಿಗೆ ಹಾನಿಯುಂಟು. ರಥದ ಭಾರವನ್ನು ಹೊತ್ತಿರುವ ಕಬ್ಬಿಣದ ಸಲಾಕಿಯು (ಚಕ್ರಕ್ಕೆ ಮಧ್ಯದಲ್ಲಿ ರಂಧ್ರಮಾಡಿರುವ ಸ್ಥಳದಲ್ಲಿ ಕಬ್ಬಿಣದ ಪಟ್ಟಿಯನ್ನು ಹಾಕುವರು ಅದಕ್ಕೆ ಇಲ್ಲಿ ತುಲಾಶಬ್ದದಿಂದ ಅರ್ಥಮಾಡಿದೆ) ಮುರಿದು ಹೋದರೆ ವೈಶ್ಯರಿಗೆ

ಯುಗಭಂಗೇ ತ್ವನಾವೃಷ್ಟಿಃ ಪೀಠಭಂಗೇ ಪ್ರಜಾಭಯಂ ।
ಪರಚಕ್ರಾಗಮಂ ವಿದ್ಯಾಚ್ಚಕ್ರಭಂಗೇ ರಥಸ್ಯ ತು ॥ ೩೯ ॥

ಧ್ವಜಸ್ಯ ಪತನೇ ಚಾಪಿ ಭಯಂ ನೃಣಾಂ ವಿನಿರ್ದಿಶೇತ್ ।
ಪ್ರತಿಮಾ ವ್ಯಂಗತಾಯಾಂ ತು ರಾಜ್ಞೀಮರಣಮಾದಿಶೇತ್ ॥ ೪೦ ॥

ಪರ್ಯಸ್ತೇ ಸುರಥೇ ಸಾಂಬ ಸರ್ವಜಾನಪದೇ ಭಯಂ ।
ಉತ್ಪನ್ನೇಷ್ವೇವಮಾದ್ಯೇಷು ಹ್ಯುತ್ಪಾತೇಷ್ವಶುಭೇಷು ಚ । ॥ ೪೧ ॥

ಬಲಿಕರ್ಮ ತತಃ ಕುರ್ಯಾಚ್ಛಾಂತಿಹೋಮಂ ತಥೈವ ಚ ।
ಬ್ರಾಹ್ಮಣಾನ್ಭೋಜಯೇದ್ಯಸ್ತು ಭೂಯೋ ದದ್ಯಾಚ್ಚ ದಕ್ಷಿಣಾಂ ॥ ೪೨ ॥

ಪೂರ್ವೋತ್ತರೇ ದಿಶೋ ಭಾಗೇ ರಥಸ್ಯಾಗ್ನಿಂ ಪ್ರಕಲ್ಪಯೇತ್ ।
ಸಮಿದ್ಭಿಸ್ತು ಘೃತಾಕ್ತಾಭಿರ್ಹೋಮಯೇಜ್ಜಾತವೇದಸಂ ॥ ೪೩ ॥

---

ತೊಂದರೆಯು. ನೊಗದ ಕೀಲು ಮುರಿದರೆ ಶೂದ್ರರಿಗೆ ಭಯ ತಪ್ಪುವುದಿಲ್ಲ. ಮೂಕಿಯು ಮುರಿದು ಹೋದರೆ ಅನಾವೃಷ್ಟಿಯುಂಟಾಗುವುದು. ಪೀಠವು ಮುರಿದರೆ ಪ್ರಜೆಗಳಿಗೆ ಭಯಪ್ರಾಪ್ತಿಯು. ರಥದ ಚಕ್ರವೇ ಭಗ್ನವಾದರೆ ಶತ್ರುರಾಜರು ಬಂದು ದೇಶವನ್ನು ನಾಶಪಡಿಸುವರು. ಮತ್ತು ಆಕ್ರಮಿಸಿಕೊಳ್ಳುವರು. ಬಾವುಟವು ಬಿದ್ದು ಹೋದರೆ ಜನರಿಗೆ ನಾನಾವಿಧವಾದ ಕಷ್ಟವುಂಟು. ಎಂದು ತಿಳಿಯಬೇಕು. ಸೂರ್ಯ ದೇವನ ಪ್ರತಿಮೆಗೆ ಏನಾದರೂ ವಿಕಾರವುಂಟಾದರೆ ಆ ದೇಶದ ರಾಣಿಯು ಮೃತಳಾಗುವಳು.

೪೧-೪೨. ಎಲೈ ಸಾಂಬನೆ ! ರಥವೇ ವ್ಯತ್ಯಾಸವಾಗಿ ಮುಗುಚಿಕೊಂಡರೆ ಸಕಲ ದೇಶಗಳಲ್ಲಿಯೂ ಭಯವುಂಟಾಗುವುದು. ಈ ರೀತಿ ಇವೇ ಮೊದಲಾದ ಅಮಂಗಳ ಸೂಚಕಗಳಾದ ಉತ್ಪಾತಗಳುಂಟಾದರೆ. ಆಗ ಬಲಿಕರ್ಮವನ್ನೂ ಶಾಂತಿ ಕರ್ಮವನ್ನೂ ಸಹ ಮಾಡಬೇಕು. ಮತ್ತು ಬ್ರಾಹ್ಮಣರಿಗೆ ಭೋಜನಾದಿಗಳಿಂದ ತೃಪ್ತಿಯನ್ನುಂಟುಮಾಡಿ ಅವರಿಗೆ ದಕ್ಷಿಣೆಗಳನ್ನು ಕೊಡಬೇಕು.

೪೩-೪೪. ರಥವು ಭಂಗವಾಗಿರುವ ಸ್ಥಳದಿಂದ ಈಶಾನ್ಯದಿಕ್ಕಿನಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ ತುಪ್ಪದಿಂದ ನೆನಸಿದ ಸಮಿತ್ತುಗಳಿಂದ ಯಜ್ಞೇಶ್ವರನಿಗೆ ಹೋಮ

ಸ್ವಾಹಾಕಾರಂ ವದನ್ಸಮ್ಯಗ್ದೇವತಾಭ್ಯಸ್ತ್ವನುಕ್ರಮಾತ್ ।
ಗ್ರಹೇಭ್ಯಶ್ಚ ಪ್ರಜಾಭ್ಯಶ್ಚ ನಾಮಾನ್ಯುದ್ದಿಶ್ಯ ಹೋಮಯೇತ್ । ॥ ೪೪ ॥

ಪ್ರಥಮಂ ಚಾಗ್ನಯೇ ಸ್ವಾಹಾ ಸ್ವಾಹಾ ಸೋಮಾಯ ಚೈವ ಹಿ ।
ಸ್ವಾಹಾ ಪ್ರಜಾಪತಯ ಇತಿ ದದ್ಯಾದಾಹುತಯಃ ಕ್ರಮಾತ್ । ॥ ೪೫ ॥

ಸ್ವಸ್ತ್ಯಸ್ತ್ವಿಹ ಚ ವಿಪ್ರೇಭ್ಯಃ ಸ್ವಸ್ತಿ ರಾಜ್ಞೇ ತಥೈವ ಚ ।
ಗೋಭ್ಯಃ ಸ್ವಸ್ತಿ ಪ್ರಜಾಭ್ಯಶ್ಚ ಜಗತಃ ಶಾಂತಿರಸ್ತು ವೈ । ॥ ೪೬ ॥

ಶನ್ನೋಽಸ್ತು ದ್ವಿಪದೇ ನಿತ್ಯಂ ಶನ್ನಶ್ಚಾಸ್ತು ಚತುಷ್ಪಥೇ ।
ಶಂಪ್ರಜಾಭ್ಯಸ್ತಥೈವಾಽಸ್ತು ಶಂಸದಾತ್ಮನಿ ಚಾಸ್ತು ಮೇ । ॥ ೪೭ ॥

ಭೂಃ ಶಾಂತಿರಸ್ತು ದೇವೇಶ ಭುವಃ ಶಾಂತಿಸ್ತಥೈವ ಚ ।
ಸ್ವಶ್ಚೈವಾಸ್ತು ತಥಾ ಶಾಂತಿಃ ಶಾಂತಿಸ್ಸರ್ವತ್ರವಾಸ್ತು ನಃ । ॥ ೪೮ ॥

---

ಮಾಡಬೇಕು. ಚೆನ್ನಾಗಿ ಸ್ವಾಹಾಕಾರಗಳನ್ನು ಸ್ಫುಟವಾಗಿ ಉಚ್ಚರಿಸುತ್ತಾ ದೇವತೆಗಳಿಗೂ ಗ್ರಹಗಳಿಗೂ, ಪ್ರಜೆಗಳಿಗೂ, ನಾಮೋಚ್ಚಾರಣೆಯು ಪೂರ್ವಕವಾಗಿ ಹೋಮವನ್ನು ಮಾಡಬೇಕು.

೪೫. ಮೊದಲು "ಅಗ್ನೇಯೇ ಸ್ವಾಹಾ" ಎಂದೂ, ಆಮೇಲೆ "ಸೋಮಾಯ ಸ್ವಾಹಾ" ಎಂದೂ ಅನಂತರ "ಪ್ರಜಾಪತಯೇ ಸ್ವಾಹಾ" ಎಂಬುದಾಗಿಯೂ ಮಂತ್ರವನ್ನುಚ್ಚರಿಸುತ್ತಾ ಕ್ರಮವಾಗಿ ಆಯಾಯ ದೇವತೆಗಳಿಗೆ ಹೋಮ ಮಾಡಬೇಕು.

೪೬-೪೮. ಅನಂತರ ಅಲ್ಲಿರುವ ಬ್ರಾಹ್ಮಣರಿಗೂ, ರಾಜನಿಗೂ, ಗೋವುಗಳಿಗೂ ಪ್ರಜೆಗಳಿಗೂ ಮತ್ತು ಜಗತ್ತಿಗೂ ಸಹ ಮಂಗಳವುಂಟಾಗಲಿ. ನಮ್ಮಲ್ಲಿರುವ ಎರಡು, ಮತ್ತು ನಾಲ್ಕುಕಾಲಿನ ಪಶುವರ್ಗಕ್ಕೂ, ಪ್ರಜೆಗಳಿಗೂ, ನಮಗೂ ಸಹ ಶಾಂತಿಯು ಲಭಿಸಲಿ. ಭೂಲೋಕವೂ ಶಾಂತಿಯನ್ನು ಹೊಂದಲಿ, ಭುವರ್ಲೋಕ ಸುವರ್ಲೋಕಗಳಿಗೂ ಶಾಂತಿಯುಂಟಾಗಲಿ; ಎಲೈ ದೇವೇಶನೆ; ಸರ್ವತ್ರ ಶಾಂತಿಯು ಲಭಿಸಲಿ.

ತ್ವಮೇವ ಜಗತಃ ಸ್ರಷ್ಟಾ ಪೋಷ್ಟಾ ಚೈವ ತ್ವಮೇವ ಹಿ ।
ಪ್ರಜಾಃ ಪಾಲಯ ದೇವೇಶ ಶಾಂತಿಂ ಕುರು ದಿವಸ್ಪತೇ ॥ ೪೯ ॥

ಇದಮನ್ಯಚ್ಚ ವಕ್ಷ್ಯಾಮಿ ಶಾಂತೇಃ ಪರಮಕಾರಣಂ ।
ಯಾತ್ರಾಕಾರಣಭೂತಸ್ಯ ಪುರುಷಸ್ಯ ಸ್ವಜನ್ಮನಃ ॥ ೫೦ ॥

ದುಷ್ಟಾನ್ಗ್ರಹಾಂಶ್ಚ ವಿಜ್ಞಾಯ ಗ್ರಹಶಾಂತಿಂ ಸಮಾಚರೇತ್ ।
ಪ್ರಾದೇಶಮಾತ್ರಾಃ ಕರ್ತವ್ಯಾಸ್ಸಮಿಧೋಽಥ ಪ್ರಮಾಣತಃ ॥ ೫೧ ॥

ಅರ್ಕಮಯ್ಯಸ್ತಥಾಽರ್ಕಸ್ಯ ಪಾಲಾಶ್ಯಃ ಶಶಿನಸ್ತಥಾ ।
ಖಾದಿರ್ಯಶ್ಚೈವ ಭೌಮಾಯ ಹ್ಯಪಾಮಾರ್ಗೋ ಬುಧಾಯ ಚ ।
ಅಶ್ವತ್ಥಾಶ್ಚೈವ ಜೀವಾಯ ಹ್ಯೌದುಂಬರ್ಯಃ ಸಿತಾಯ ಚ ॥ ೫೨ ॥

---

೪೯. "ನೀನೇ ಜಗತ್ತನ್ನೆಲ್ಲಾ ಸೃಷ್ಟಿಮಾಡುವವನು. ಪೋಷಣೆಮಾಡುವವನೂ ನೀನೇ ಆಗಿರುವೆ; ಎಲೈ ಅಂತರಿಕ್ಷಾಧಿಪತಿಯಾದ ದೇವೇಶನೆ; ಸರ್ವತ್ರ ಶಾಂತಿಯನ್ನು ಉಂಟುಮಾಡು" ಎಂದು ಸೂರ್ಯನನ್ನು ಭಕ್ತಿಯಿಂದ ಪ್ರಾರ್ಥಿಸಬೇಕು.

೫೦. ಅಯ್ಯ ಸಾಂಬನೆ, ಯಾತ್ರೆಗೆ ಕಾರಣಭೂತನೂ ಸ್ವಯಂ ಉತ್ಪತ್ತಿ ಹೊಂದುವವನೂ, ಪರಮ ಪುರುಷನೂ ಆದ ಸೂರ್ಯದೇವನಿಗೆ ಶಾಂತಿ ಮಾಡಲು ಮುಖ್ಯಕಾರಣವನ್ನು ತಿಳಿಸುವೆನು ಕೇಳು.

೫೧. ಗ್ರಹಗಳು ದುಷ್ಟವಾಗಿವೆಯೋ (ಕ್ರೂರವಾಗಿವೆಯೋ) ಎಂಬುದನ್ನು ತಿಳಿದು ಅವುಗಳಿಂದುಂಟಾಗುವ ಕ್ರೂರಫಲಗಳನ್ನು ನಿವಾರಣೆಮಾಡುವುದಕ್ಕೋಸ್ಕರ ನವಗ್ರಹ ಶಾಂತಿಯನ್ನು ಮಾಡಬೇಕು. ಆ ಗ್ರಹಗಳಿಗೆ ಹೋಮ ಮಾಡಲು ಸಮಿತ್ತುಗಳನ್ನು ಪ್ರಾದೇಶಮಾತ್ರ ಎಂದರೆ, ಒಂದು ಚೋಟುದ್ದ ಪ್ರಮಾಣವುಳ್ಳ ಹಾಗೆ ಮಾಡಬೇಕು.

೫೨-೫೩. ಸೂರ್ಯನಿಗೆ ಎಕ್ಕದ ಸಮಿತ್ತುಗಳು ಶ್ರೇಷ್ಠವಾದವುಗಳು. ಚಂದ್ರನಿಗೆ ಮುತ್ತುಗದ ಸಮಿತ್ತುಗಳೂ, ಅಂಗಾರಕನಿಗೆ ಕಗ್ಗಲೀ ಸಮಿತ್ತುಗಳೂ, ಶ್ರೇಷ್ಠ

ಅಸಿತಾಯ ಶಮೀಮಯ್ಯೋ ದೂರ್ವಾಃ ಕಾರ್ಯಾಸ್ತು ರಾಹವೇ ।
ಕೇತವೇ ತು ಕುಶಾಃ ಕಾರ್ಯಾ ದಕ್ಷಿಣಾಂಚಾಪ್ಯತಃ ಶೃಣು ॥ ೫೩ ॥

ಸೂರ್ಯಾಯ ಚೋತ್ತಮಾಂ ಧೇನುಂ ಶಂಖಂ ದದ್ಯಾತ್ತಥೇಂದವೇ ।
ರಕ್ತೋರ್ಣಂ ಚೈವ ಭೌಮಾಯ ಕಾಂಚನಂ ಸೋಮಸೂನವೇ ॥ ೫೪ ॥

ಪೀತವಾಸಾಂಸಿ ಜೀವಾಯ ಶುಕ್ರಾಯಾಶ್ವಂ ಸಿತಂ ತಥಾ ।
ಶನೈಶ್ಚರಾಯ ಗಾಂ ನೀಲಾಂ ರಾಹವೇ ಖಂಡಪಾಯಸಂ ॥ ೫೫ ॥

ಛಾಗಂ ತು ಕೇತವೇ ದದ್ಯಾಚ್ಛೃಣ್ವೇಷಾಂ ಭೋಜನಾನಿ ಚ ।
ಗುಡೌದನಂ ತು ಸೂರ್ಯಾಯ ಸೋಮಾಯ ಘೃತಪಾಯಸಂ ॥ ೫೬ ॥

---

ವಾದವುಗಳು. ಬುಧನಿಗೆ ಅಪಾಮಾರ್ಗ, (ಉತ್ತರಣೆ) ಬೃಹಸ್ಪತಿಗೆ ಅರಳೀ, ಶುಕ್ರನಿಗೆ ಅತ್ತಿ, ಶನೈಶ್ಚರನಿಗೆ ಬನ್ನೀ, ರಾಹುವಿಗೆ ಗರಿಕೆ, ಕೇತುವಿಗೆ ದರ್ಭೆ, ಹೀಗೆ ಸಮಿತ್ತುಗಳು ಉಕ್ತವಾಗಿವೆ. ಈಗ ದಾನಕೊಡುವ ವಿವರಣವನ್ನೂ ತಿಳಿಸುವೆನು ಕೇಳು.

೫೪-೫೫. ಸೂರ್ಯಪ್ರೀತ್ಯರ್ಥವಾಗಿ ಶ್ರೇಷ್ಠವಾದ ಹಸುವನ್ನು ದಾನ ಕೊಡಬೇಕು. ಚಂದ್ರನಿಗೆ ಶಂಖವನ್ನೂ, ಅಂಗಾರಕನಿಗೆ ಕೆಂಪು ಉಣ್ಣೆಯ ಬಟ್ಟೆಯನ್ನೂ, ಚಂದ್ರನ ಮಗನಾದ ಬುಧನಿಗೆ ಚಿನ್ನವನ್ನೂ, ಗುರುವಿಗೆ ಹಳದೀ ಬಟ್ಟೆಗಳನ್ನೂ, ಶನೈಶ್ಚರನಿಗೆ ಕಪ್ಪು ಹಸುವನ್ನೂ, ರಾಹುವಿಗೆ ಕಲ್ಲುಸಕ್ಕರೀ ಪಾಯಸವನ್ನೂ, ಮತ್ತು ಕೇತುವಿಗೆ ಆಡನ್ನೂ ದಾನವಾಗಿ ಕೊಡಬೇಕು. ಇನ್ನುಮುಂದೆ ಈ ಒಂಬತ್ತು ಗ್ರಹಗಳಿಗೂ ಭೋಜನವಿಧಿಯನ್ನೂ ಹೇಳುವೆನು ಕೇಳು.

೫೬-೫೭ ಸೂರ್ಯನಿಗೆ ಬೆಲ್ಲದನ್ನವನ್ನೂ, ಚಂದ್ರನಿಗೆ ತುಪ್ಪದಿಂದ ಮಾಡಿದ ಪಾಯಸವನ್ನೂ (ಹೆಚ್ಚು ತುಪ್ಪ ಉಪಯೋಗಿಸಿ ಮಾಡಿದ ಪಾಯಸವನ್ನೂ)

ಹವಿಷ್ಯಮನ್ನಂ ಭೌಮಾಯ ಕ್ಷೀರಾನ್ನಂ ಸೋಮಸೂನವೇ ।
ದಧ್ಯೋದನಂ ತು ಜೀವಾಯ ಶುಕ್ರಾಯಾಥ ಘೃತಾಶನಂ ॥ ೫೭ ॥

ತಿಲಪಿಷ್ಟಂ ಚ ಮಾಷಂ ಚ ಸೂರ್ಯಪುತ್ರಾಯ ದಾಪಯೇತ್ ।
ಯಥಾ ಬಾಣಪ್ರಹಾರಾಣಾಂ ವಾರಣಂ ಕವಚಂ ಸ್ಮೃತಂ ।
ತಥಾ ದೈವೋಪಘಾತಾನಾಂ ಶಾಂತಿರ್ಭವತಿ ವಾರಣಂ ॥ ೫೯ ॥

ಅಹಿಂಸಕಸ್ಯ ದಾಂತಸ್ಯ ಧರ್ಮಾರ್ಜಿತಧನಸ್ಯ ಚ ।
ನಿತ್ಯಂ ಚ ನಿಯಮಸ್ಥಸ್ಯ ಸದಾನುಗ್ರಹದಾ ಗ್ರಹಾಃ ॥ ೬೦ ॥

---

ಅಂಗಾರಕನಿಗೆ ಹವಿಸ್ಸಿನ ಸಂಬಂಧವಾದ ಅನ್ನವನ್ನೂ, ಚಂದ್ರಪುತನಾದ ಬುಧನಿಗೆ ಹಾಲನ್ನವನ್ನೂ, ಗುರುವಿಗೆ (ಬೃಹಸ್ಪತಿಗೆ) ಮೊಸರನ್ನವನ್ನೂ, ಶುಕ್ರನಿಗೆ ತುಪ್ಪದ ಅನ್ನವನ್ನೂ, ಶನೈಶ್ಚರನಿಗೆ ಎಳ್ಳಿನ ಚಿಗಳಿಯನ್ನೂ ರಾಹುವಿಗೆ ಮಾಂಸವನ್ನೂ, ಮತ್ತು ಕೇತುವಿಗೆ ಚಿತ್ರಾನ್ನವನ್ನೂ ಅಥವಾ ಉದ್ದಿನ ಪದಾರ್ಥಗಳನ್ನೂ ನಿವೇದನ ಮಾಡಬೇಕು.

೫೯. ಬಾಣ ಪ್ರಯೋಗಮಾಡುವುದರಿಂದ ಬಾಣಗಳು ತಗಲಿ ಶರೀರಕ್ಕೆ ಘಾಯಗಳಾಗದಂತೆ ವಜ್ರಕವಚವು ಹೇಗೆ ಶರೀರವನ್ನು ರಕ್ಷಿಸುವುದೋ, ಅದರಂತೆ ದೇವತೆಗಳಿಗೆ ಸಂಬಂಧಪಟ್ಟ ಆಕಸ್ಮಿಕ ಉಪಘಾತಕಗಳಿಗೆ ಈ ರೀತಿ ಶಾಂತಿಮಾಡುವುದರಿಂದ ತಡೆಯುಂಟಾಗಿ ಸುಖವುಂಟಾಗುತ್ತವೆ. ಅಂದರೆ ದೇವತೆಗಳು ತಮಗಾದ ಅವಯವ ಭಂಗಗಳಿಂದ ಕುಪಿತರಾದರೂ ಈ ರೀತಿ ಶಾಂತಿ ಮಾಡಿದ ಪಕ್ಷದಲ್ಲಿ ಕುಪಿತರಾಗದೆ ಶಾಂತರಾಗುವರೆಂದು ತಿಳಿಯಬೇಕು.

೬೦. ಅಹಿಂಸಾಪರನೂ, ಇಂದ್ರಿಯಗಳನ್ನು ನಿಗ್ರಹಿಸುವವನೂ, ಧರ್ಮರೀತಿಯಿಂದಲೇ ದ್ರವ್ಯಸಂಪಾದನೆ ಮಾಡಿದವನೂ ಯಾವಾಗಲೂ ನಿಯಮಗಳಿಂದಿರುವವನೂ ಆದ ಪುರುಷನಿಗೆ ನವಗ್ರಹಗಳು ಸದಾ ಅನುಗ್ರಹ ಮಾಡುವುವು.

ಗ್ರಹಾ ಗಾವೋ ನರೇಂದ್ರಾಶ್ಚ ಬ್ರಾಹ್ಮಣಾಶ್ಚ ವಿಶೇಷತಃ ।
ಪೂಜಿತಾಃ ಪೂಜಯಂತ್ಯೇತೇ ನಿರ್ದಹಂತ್ಯಪಮಾನಿತಾಃ ॥ ೬೧ ॥

ಯಥಾ ಸಮುತ್ಥಿತಂ ಯಂತ್ರಂ ಯಂತ್ರೇಣ ಪ್ರತಿಹನ್ಯತೇ ।
ತಥಾ ಸಮುತ್ಥಿತಾಂ ಪೀಡಾಂ ಗ್ರಹಶಾಂತ್ಯಾ ಪ್ರಶಾಮಯೇತ್ ॥ ೬೨ ॥

ಯಜ್ವನಾಂ ಸತ್ಯವಾಕ್ಯಾನಾಂ ತಥಾ ನಿತ್ಯೋಪವಾಸಿನಾಂ ।
ಜಪಹೋಮಪರಾಣಾಂ ಚ ಗ್ರಹಪೀಡಾ ಪ್ರಶಾಮ್ಯತಿ ॥ ೬೩ ॥

ಏವಂ ಕೃತ್ವಾ ಪ್ರಜಾಶಾಂತಿಂ ಕೃತ್ವಾ ಚ ಸ್ವಸ್ತಿವಾಚನಂ ।
ಪುನಃ ಸೂರ್ಯರಥಂ ಕೃತ್ವಾ ಕುರ್ಯಾತ್ಪ್ರಕ್ರಮಣಂ ತತಃ ॥ ೬೪ ॥

---

೬೧. ನವಗ್ರಹಗಳೂ, ಗೋವುಗಳೂ, ರಾಜರೂ, ಸರ್ಪಗಳೂ, ವಿಶೇಷ ವಾಗಿ ಬ್ರಾಹ್ಮಣರೂ ಸಹ ತಮ್ಮನ್ನು ಪೂಜೆಮಾಡಿದವರಿಗೆ ತಾವೂ ಸೇವೆಯನ್ನು ಸಲ್ಲಿಸುವರು. ಇಲ್ಲದೇ ತಮ್ಮನ್ನು ಪೂಜಿಸದೇ ಅವಮಾನ ಮಾಡಿದವರನ್ನು ನಿಃಸಂದೇಹವಾಗಿ ಸುಟ್ಟುಬಿಡುವರು.

೬೨. ಮೇಲಕ್ಕೆ ಎದ್ದಿರುವ ಯಂತ್ರವು ಇನ್ನೊಂದು ಯಂತ್ರದಿಂದ ನಾಶ ವಾಗುವಂತೆ, ಒಂದು ಯಂತ್ರದ ಬಾಧೆಯನ್ನೂ, ಮತ್ತೊಂದು ಯಂತ್ರವು ತಪ್ಪಿಸು ವಂತೆ, ದೇವತೆಗಳ ಉಪ ಘಾತಕಗಳಿಂದುಂಟಾಗಿರುವ ಪೀಡೆಯನ್ನು ಗ್ರಹಗಳಿಗೆ ಮಾಡುವ ಶಾಂತಿಕರ್ಮವು ನಾಶಪಡಿಸುವುದು.

೬೩. ಯಾಗಶೀಲರೂ, ಯಾವಾಗಲೂ ಸತ್ಯವಚನವನ್ನೇ ಆಡುವವರೂ ನಿತ್ಯವೂ ಉಪವಾಸಮಾಡುವವರೂ, ಮತ್ತು ಜಪ ಹೋಮ ಇವುಗಳನ್ನಾಚರಿಸು ವುದರಲ್ಲಾಸಕ್ತರೂ ಆದ ಜನರಿಗೆ ಗ್ರಹಪೀಡೆಯು ಬರಲಾರದು. ಬರುವುದೇ ಇಲ್ಲ. ಒಂದುವೇಳೆ ಬಂದರೂ ಜಾಗ್ರತೆಯಾಗಿ ನಾಶವಾಗುವುದು.

೬೪. ಹೀಗೆ ಪ್ರಜಾಶಾಂತಿಕರ್ಮವನ್ನು ಮಾಡಿ ಬ್ರಾಹ್ಮಣರಿಂದ ಸ್ವಸ್ತಿ ವಾಚನಗಳನ್ನು ಮಾಡಿಸಿ, ಪುನಃ ಸೂರ್ಯರಥವನ್ನು ಸರಿಪಡಿಸಿ ಮುಂದಕ್ಕೆ ಎಳೆಯ ಬೇಕು.

ಮಾರ್ಗಶೇಷಂ ತತೋ ಗತ್ವಾ ನಯೇದ್ದೇವಾಲಯಂ ತತಃ ।
ಅವತಾರ್ಯ ರಥಾಚ್ಚೈನಂ ಸ್ಥಾಪಯೇನ್ಮಂಡಲೇ ತಥಾ ॥ ೬೫ ॥

ಚತುರ್ಥೇಽಹನಿ ಕರ್ತವ್ಯಂ ತತೋ ವಿಶ್ರಮಣಂ ರವೇಃ ।
ಧೂಪಮಾಲ್ಯೋಪಹಾರೈಶ್ಚ ಪೂಜಯೇನ್ಮಂಡಲಂ ಪುನಃ ॥ ೬೬ ॥

ಏವಂ ವಿಧಿಂ ತು ಸೂರ್ಯಾಯ ಯಃ ಕುರ್ಯಾತ್ಕೋಽಪಿ ಮಾನವಃ ।
ಸ ಪರಾರ್ದ್ಧಂ ತು ವರ್ಷಾಣಾಂ ಸೂರ್ಯಲೋಕೇ ಮಹೀಯತೇ ॥ ೬೭ ॥

ನ ಕುಲೇ ಜಾಯತೇ ತಸ್ಯ ದರಿದ್ರೋ ವ್ಯಾಧಿತೋಽಪಿ ವಾ । ॥ ೬೮ ॥

---

೬೫. ರಥವು ಊನವಾಗಿಯೋ ಅಥವಾ ರಥಾವಯವಗಳು ಭಿನ್ನವಾಗಿಯೋ ಮೂರ್ತಿ ವಿಕಾರಗಳಾಗಲೀ, ರಥ ವಿಕಾರವಾಗಲೀ, ಸಂಭವಿಸಿದರೆ ನಿಲ್ಲಿಸಿದ್ದ ಸ್ಥಳದಿಂದ, ಮುಂದೆ ಎಳೆಯುತ್ತಾ ಉಳಿದಿದ್ದ ದಾರಿಯನ್ನು ದಾಟಿ ದೇವಾಲಯದ ಸಮೀಪಕ್ಕೆ ಬರಬೇಕು. ಅನಂತರ ರಥದ ಮೇಲಿನಿಂದ ಸೂರ್ಯ ಪ್ರತಿಮೆಯನ್ನು ಇಳಿಸಿ ಅದನ್ನು ದೇವಾಲಯದಲ್ಲಿ ಮಾಡಿರುವ ಮಂಡಲದಲ್ಲಿ ಇರಿಸಬೇಕು.

೬೬. ಆಮೇಲೆ ನಾಲ್ಕನೆಯ ದಿವಸ ಸೂರ್ಯನಿಗೆ ವಿಶ್ರಾಂತಿಕರ್ಮವನ್ನು ಆಚರಿಸಬೇಕು ಆದಿನ ಧೂಪ, ಪುಷ್ಪ, ನೈವೇದ್ಯಾದಿಗಳಿಂದ ಆ ಸೂರ್ಯಮಂಡಲ ವನ್ನು ಪುನಃ ಭಕ್ತಿಯಿಂದ ಪೂಜಿಸಬೇಕು.

೬೭. ಹಿಂದೆ ಹೇಳಿದಂತೆ ಸೂರ್ಯನಿಗೆ ವಿಧಿಪ್ರಕಾರ ಪೂಜೆಮಾಡುವವನು ಸೂರ್ಯಲೋಕವನ್ನು ಹೊಂದಿ, ಅಲ್ಲಿ ಅನೇಕ ಸಾವಿರ ವರ್ಷಗಳು ಪೂಜ್ಯನೆನಿಸು ವನು.

೬೮. ಈ ರೀತಿ ಸೂರ್ಯವ್ರತ ವಿಧಿಯನ್ನು ಆಚರಿಸುವವನ ವಂಶದಲ್ಲಿ ದರಿದ್ರನೂ, ರೋಗಿಯೂ, ಆದವನು ಎಂದೂ ಜನಿಸಲಾರನು. ಅಂದರೆ ಅವನ ವಂಶದಲ್ಲಿ ಉದಯಿಸುವವರು, ಯಾವಾಗಲೂ ಬಡವರಾಗದೆ ಶ್ರೀಮಂತರೆನಿಸಿ ಆರೋಗ ದೃಢಕಾಯರಾಗಿರುವರು.

ಅಥ ಸಂವತ್ಸರೇ ಪೂರ್ಣೇ ಭಾನೋರ್ಯಾತ್ರಾ ದಿನೇ ಯದಿ ।
ರಥಪ್ರಕ್ರಮಣಂ ತತ್ರ ಕಥಂಚಿನ್ನಿಕೃತಂ ಭವೇತ್ ॥ ೬೯ ॥

ತತೋ ದ್ವಾದಶವರ್ಷೇಷು ಕರ್ತವ್ಯಂ ನಾಂತರಾ ಪುನಃ ।
ಶಾಂತಿಕರ್ಮಾಥ ಕೃತ್ವಾ ವೈ ಹೋತವ್ಯಂ ಭೂತಿಮಿಚ್ಛತಾ ॥ ೭೦ ॥

ಶಕ್ರಧ್ವಜಸ್ಯ ಚಾಪ್ಯೇವಂ ಯದಿ ನೋತ್ಥಾಪನಂ ಕೃತಂ ।
ತತೋ ದ್ವಾದಶಕೇ ವರ್ಷೇ ಕರ್ತವ್ಯಂ ನಾಂತರಾ ಪುನಃ ॥ ೭೧ ॥

ಇತಿ ಮುನಿವೃಷಭಃ ಸುತಾಯ ವಿಷ್ಣೋಃ ।
ವಿಧಿಮುಪದಿಶ್ಯ ತು ನಾರದೋ ಜಗಾಮ ।

---

೬೯-೭೦. ಸೂರ್ಯಪ್ರತಿಮೆಯನ್ನು ಪ್ರತಿಷ್ಠೆಮಾಡಿ ಒಂದು ವರ್ಷವಾದ ಮೇಲೆ, ಆ ವರ್ಷದ ಆರಂಭದ ದಿನ ಸೂರ್ಯನ ರಥೋತ್ಸವವನ್ನು ನಡೆಸಬೇಕೆಂದು ಹಿಂದೆಯೇ ಹೇಳಿದೆ. ಹಾಗೆ ಮಾಡಲು ಕಾರಣಾಂತರದಿಂದ ರಥ ಯಾತ್ರೆಯು ನಿಂತ ಹೋದರೆ, ಅಲ್ಲಿಂದ ಹನ್ನೆರಡನೆಯ ವರ್ಷದಲ್ಲಿ ರಥೋತ್ಸವವನ್ನು ನಡೆಸಬೇಕು ಮಧ್ಯದಲ್ಲಿ ಯಾವಾಗಲೂ ರಥೋತ್ಸವವನ್ನು ಮಾಡಬಾರದು. ಹಾಗೆ ಹನ್ನೆರಡನೆಯ ವರ್ಷದಲ್ಲಿ ಮಾಡಬೇಕಾದರೂ ಹಿಂದೆ ಹೇಳಿದಂತೆ ಶಾಂತಿಕರ್ಮಗಳನ್ನೆಲ್ಲಾ ಮಾಡಿಸಿ ಕ್ರಮವಾಗಿ ಗ್ರಹಗಳಿಗೆ ಹೋಮ ಮಾಡಬೇಕು. ಹೀಗೆಮಾಡಿದರೆ ಯಜಮಾನನು ಯಾವಾಗಲೂ ಸುಖವನ್ನು ಪಡೆಯುವನು.

೭೧. ಹೀಗೆ ದೇವಾಲಯ ನಿರ್ಮಾಣಕಾಲದಲ್ಲಿ ಶಕ್ರಧ್ವಜವನ್ನು ಏರಿಸದೇ ಹೋದರೆ, ಪುನಃ ಅಲ್ಲಿಂದ ಹನ್ನೆರಡು ವರ್ಷದಲ್ಲಿಯೇ ಆ ಶಕ್ರಧ್ವಜವನ್ನು ಪುನಃ ಆರೋಹಣ ಮಾಡಿಸಬೇಕು. ಮಧ್ಯದಲ್ಲಿ ಯಾವಾಗಲೂ ಧ್ವಜಸ್ಥಾಪನೆ ಮಾಡಬಾರದು.

೭೨. ಈ ರೀತಿ ಮುನಿಶ್ರೇಷ್ಠನಾದ ನಾರದ ಮಹರ್ಷಿಯು ಜಾಂಬವತೀ ಕುಮಾರನಾದ ಸಾಂಬನಿಗೆ ಸೂರ್ಯೋಪಾಸನಾ ವಿಧಿಯನ್ನು ಉಪದೇಶಮಾಡಿ ಹೊರಟು

ಸ ಚ ದಶಶತದೀಧಿತೇಶ್ಚಕಾರ ।
ಪ್ರಣಿಪತಿತಾರ್ತಿಹರಸ್ಯ ದೇವಯಾತ್ರಾಂ ॥ ೭೨ ॥

ಇತಿ ಶ್ರೀ ಸಾಂಬಪುರಾಣೇ ದೇವಯಾತ್ರಾ ನಾಮ
ಚತುಸ್ತ್ರಿಂಶೋಽಧ್ಯಾಯಃ.

---

ಹೋದನು. ಅನಂತರ ಆ ಕೃಷ್ಣಪುತ್ರನಾದ ಸಾಂಬನು ಅದರಂತೆಯೇ ಎಲ್ಲವನ್ನೂ ಆಚರಿಸಿ ನಮಸ್ಕಾರ ಮಾಡಿದವರ ಪೀಡೆಯನ್ನೆಲ್ಲಾ ಧ್ವಂಸಮಾಡುವ ಸಹಸ್ರ ಕಿರಣನಾದ ಸೂರ್ಯದೇವನಿಗೆ ರಥೋತ್ಸವವನ್ನು ಮಾಡಿಸಿದನು. ಎಂದು ವಸಿಷ್ಠ ಮಹರ್ಷಿಗಳು ಬೃಹದ್ಬಲರಾಜನಿಗೆ ಹೇಳಿದರು.

ಇಲ್ಲಿಗೆ ಸಾಂಬಪುರಾಣದಲ್ಲಿ ದೇವಯಾತ್ರಾವರ್ಣನೆಯೆಂಬ ಮೂವತ್ತುನಾಲ್ಕನೆಯ
ಅಧ್ಯಾಯವು ಮುಗಿದುದು

ಶ್ರೀಃ

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಪಂಚತ್ರಿಂಶೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ಪುನರ್ಯಾತ್ರಾವಿಧಿಂ ಚೇಮಂ ಸಮಾಸಾತ್ಕಥಯಾಮಿ ತೇ ।
ನಾರದೇನೈವ ಕಥಿತಂ ಸಾಂಬೋಽನುಗ್ರಹಕಾರಣಂ ॥ ೧ ॥

ವರ್ತಮಾನೇ ತು ಭಾಗೇ ವೈ ರಥೇ ದೇವಗಣೇ ಸ್ಥಿತೇ ।
ಯಸ್ಯ ಯಶ್ಚ ನಿಯೋಗಃ ಸ್ಯಾದ್ದೇವಸ್ಯ ಕಥಿತೋ ಮಯಾ ॥ ೨ ॥

ಸ ತಸ್ಮಿನ್ನೇವ ಮನಸಾ ಸ್ಥಾಪನೀಯೋ ರಥೇ ಬುಧೈಃ ।
ದ್ಯಾರ್ವಮಹೀದೇವಮೂರ್ತಿಸ್ಥೇ ಯಥಾಪೂರ್ವಂ ಪ್ರಕೀರ್ತಿತೇ ॥ ೩ ॥

---

## ಮೂವತ್ತೈದನೆಯ ಅಧ್ಯಾಯ.

೧. "ಅಯ್ಯ ಬೃಹದ್ಬಲನೆ; ಪುನಃ ನಾರದಮಹರ್ಷಿಯು ಸೂರ್ಯದೇವನ ಯಾತ್ರಾವಿಧಿಯನ್ನು ಸಾಂಬನಲ್ಲಿ ವಿಶ್ವಾಸದಿಂದ ತಿಳಿಸಿದ ಕ್ರಮವನ್ನು ನಿನಗೆ ಸಂಕ್ಷೇಪವಾಗಿ ಹೇಳುವೆನು ಕೇಳು" ಎಂದು ವಸಿಷ್ಠರು ಹೀಗೆಂದರು.

೨. ಸೂರ್ಯನ ರಥದಲ್ಲಿ ದೇವತೆಗಳು ಯಾವ ಯಾವ ಭಾಗಗಳಲ್ಲಿ ಯಾವ ಯಾವ ರೀತಿ ಇರಬೇಕೆಂಬುದನ್ನು ನಾನು ನಿನಗೆ ಹೇಳಿರುವೆನು.

೩. ಆ ರೀತಿಯಲ್ಲಿಯೇ ಭಕ್ತಿಪೂರ್ವಕವಾಗಿ ರಥದಲ್ಲಿ ದೇವತೆಗಳನ್ನು ಸ್ಥಾಪಿಸಬೇಕು. ಸ್ವರ್ಗ ಮತ್ತು ಭೂಮಿ ಇವುಗಳ ಮೂರ್ತಿಸ್ವರೂಪವೇ ರಥವೆಂಬುದನ್ನು ತಿಳಿಸಲು ದೇವೇಶನಾದ ಸೂರ್ಯನ ಮೂರ್ತಿಯ ವಿಷಯವನ್ನೂ ರಥದ ನಿರ್ಮಾಣಕ್ರಮವನ್ನೂ ಮೊದಲೇ ಹೇಳಿರುವೆನು.

ತಥೈವ ರಾಜ್ಞೀ ದ್ಯೌರ್ಜ್ಞೇಯಾ ನಿಕ್ಷುಭಾ ಪೃಥಿವೀ ಸ್ಮೃತಾ ।
ನಿತಾಭ್ಯಾಮಪಿ ದೇವೀಭ್ಯಾಂ ತಥೈವ ಸವಿತುಸ್ತಥಾ ॥ ೪ ॥

ದಂಡಿನಂ ಪಿಂಗಲಾದೀನಾಂ ಪೃಥಕ್ಕಾರ್ಯೋ ರಥಕ್ರಮಃ ।
ಮನಸಾ ಚಿಂತಯೇದೇವಂ ಯಥಾಸ್ಥಾನೇಷು ದೇವತಾಂ ॥ ೫ ॥

ದಿಕ್ಪಾಲಾನ್ಲೋಕಪಾಲಾಂಶ್ಚ ಕಲ್ಪಯೇನ್ಮನಸೈವ ತು ।
ದೇವೋ ದೇವಮಯಶ್ಚೈವ ಸರ್ವದೇವಮಯಸ್ತಥಾ ॥ ೬ ॥

ಮಂಡಲಂ ತ್ವೃಙ್ಮಯಂ ಚೈವ ಛಂದಾಂಸಿ ಚ ತಥೈವ ಚ ।
ಗಾಯತ್ರೀ ಚೈವ ತ್ರಿಷ್ಟುಪ್ಚ ಜಗತ್ಯಾನುಷ್ಟುಬೇವ ಚ ॥ ೭ ॥

ಪಂಕ್ತಿಶ್ಚ ಬೃಹತೀಚೈವ ಉಷ್ಣಿಗೇವ ಚ ಸಪ್ತಮೀ ।
ಅತೋ ವೇದಮಯತ್ವಾಚ್ಚ ಛಂದಸಾಂ ಚೈವ ಕಲ್ಪನಾತ್ ॥ ೮ ॥

---

೪-೫. ಹಿಂದೆ ಹೇಳಿದಂತೆಯೇ ಅಂತರಿಕ್ಷಕ್ಕೆ ರಾಜ್ಞೀ ಎಂದೂ, ಪೃಥಿವಿಗೆ ನಿಕ್ಷುಭಾ ಎಂದೂ ಸಂಜ್ಞೆಯನ್ನು ಅರಿಯಬೇಕು. ಇವರಿಬ್ಬರೂ ಸೂರ್ಯನ ಪತ್ನಿಯರು. ಇವರೊಡನೆ ಸೂರ್ಯನಿಗೂ ದಂಡಿ ಮತ್ತು ಪಿಂಗಲ ಇವರೇ ಮೊದಲಾದ ವರಿಗೂ ರಥದಲ್ಲಿ ಸ್ಥಾನಗಳನ್ನು ಪ್ರತ್ಯೇಕವಾಗಿ ಕಲ್ಪಿಸಬೇಕು. ದೇವತೆಗಳೆಲ್ಲರೂ ಅವರವರಿಗೆ ವಿಹಿತವಾದ ಸ್ಥಾನಗಳಲ್ಲಿರುವರೆಂದು ಮನಸಾ ಯೋಚಿಸಿ ಸ್ಥಾಪಿಸಬೇಕು.

೬-೭. ಸೂರ್ಯಮಂಡಲವು ಋಗ್ವೇದ ಮಯವಾಗಿರುವುದು. ಆ ಮಂಡಲದಲ್ಲಿ ಹಿಂದೆ ಹೇಳಿದಂತೆಯೇ ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್, ಪಂಕ್ತಿ, ಬೃಹತೀ,ಮತ್ತೂ ಉಷ್ಣಿಕ್, ಈ ಏಳು ಛಂದಸ್ಸುಗಳೂ ಅಶ್ವರೂಪದಿಂದ ಇರುವುವು.

೮-೯. ಸೂರ್ಯನ ರಥವೆಲ್ಲವೂ ವೇದಮಯವೂ ಛಂದೋವಿಶಿಷ್ಟವೂ ಆದುದರಿಂದ ರಥವನ್ನು ಬ್ರಹ್ಮವಾದಿಗಳಾದ ಬ್ರಾಹ್ಮಣರೇ ಎಳೆಯಬಹುದು. ಆದರೆ

ರಥಪ್ರಕ್ರಮಣೇ ಸೂರ್ಯೋ ವೋಢವ್ಯೋ ಬ್ರಹ್ಮವಾದಿಭಿಃ ।
ಉಪವಾಸಪರೈರ್ಯುಕ್ತೈರ್ಬ್ರಾಹ್ಮಣೈರ್ವೇದಪಾರಗೈಃ ॥ ೯ ॥

ಯಥೋಕ್ತಕರಣಾಚ್ಚೈವ ಶುಭಾ ಶಾಂತಿರ್ಭವಿಷ್ಯತಿ ।
ನಾಯಕಶ್ಚಾಪಿ ಸರ್ವಾಸಾಂ ದೇವತಾನಾಂ ದಿವಾಕರಃ ॥ ೧೦ ॥

ವಿನ್ಯಾಸೇಷು ರಥಾನಾಂ ಚ ದೇವತಾಯತನೇಷು ಚ ॥ ೧೧ ॥

ತತೋ ಧೂಪೋಪಹಾರೈಶ್ಚ ಸಂಪೂಜ್ಯ ಪ್ರಥಮಂ ತತಃ ।
ದಿಗ್ದೇವಾನುಚರಾಂಶ್ಚೈವ ಪೂಜಯನ್ಪೂಜ್ಯತೇ ಶ್ರಿಯಾ ॥ ೧೨ ॥

ಅಪೂಜ್ಯ ಪ್ರಥಮಂ ಸೂರ್ಯಮಪರಾನ್ಯಸ್ತು ಪೂಜಯೇತ್ ।
ತದಜ್ಞಾನಕೃತಂ ಪಾಪಂ ನ ತದ್ಗೃಹ್ಣಂತಿ ದೇವತಾಃ ॥ ೧೩ ॥

---

ಬ್ರಾಹ್ಮಣರು, ಬ್ರಹ್ಮಜ್ಞಾನಿಗಳಾಗಿಯೂ, ವೇದಪಾರಂಗತರಾಗಿಯೂ ಉಪವಾಸದಿಂದಿರುವವರೂ ಆಗಿರಬೇಕು. ಇಂತಹ ಬ್ರಾಹ್ಮಣರೇ ಸೂರ್ಯನ ರಥವನ್ನು ಎಳೆಯಲು ಅಧಿಕಾರಿಗಳೆನಿಸುವರು.

೧೦-೧೧. ಹಿಂದೆ ಹೇಳಿದಂತೆ ಕ್ರಮವಾಗಿ ಶಾಂತಿ ಕರ್ಮಗಳನ್ನು ನಡೆಸಿ, ರಥೋತ್ಸವ ನಡೆಸಿದರೆ ಪ್ರಪಂಚಕ್ಕೆ ಮಂಗಳಕರವಾದ ಶಾಂತಿಯು ಲಭಿಸುವುದು. ರಥವಿನ್ಯಾಸಮಾಡುವಾಗಲೂ, ದೇವಾಲಯಗಳನ್ನು ನಿರ್ಮಿಸುವಾಗಲೂ ಎಲ್ಲಾ ದೇವತೆಗಳಿಗೂ ಸೂರ್ಯನೇ ಒಡೆಯನೆಂದು ದೃಢವಾಗಿ ಅರಿತಿರಬೇಕು.

೧೨. ಮೊದಲು ಧೂಪ ದೀಪ ನೈವೇದ್ಯಾದಿಗಳಿಂದ ಸೂರ್ಯನನ್ನು ಪೂಜಿಸಿ ಅನಂತರ ದಿಕ್ಪಾಲಕರು, ಪಾರ್ಶ್ವದೇವತೆಗಳು ಇವರನ್ನೆಲ್ಲಾ ಕ್ರಮವಾಗಿ ಪೂಜಿಸಬೇಕು. ಹೀಗೆ ಪೂಜೆಮಾಡಿದರೆ ಪೂಜಕನು ಐಶ್ವರ್ಯಶಾಲಿಯಾಗುವನು.

೧೩. ಮೊದಲು ಸೂರ್ಯನನ್ನು ಪೂಜಿಸದೇ, ಇತರ ದೇವತೆಗಳನ್ನು ಪೂಜಿಸುವವನು ಮೂಢನೆನಿಸುವನು. ಆತನು ಸಮರ್ಪಿಸಿದ ಪೂಜೆಯನ್ನು, "ತಿಳಿಯದೆ ಮಾಡಿದ ಪಾಪಸ್ವರೂಪವೆಂದು" ದೇವತೆಗಳು ಭಾವಿಸಿ ಅದನ್ನು ಸ್ವೀಕರಿಸುವುದೇ ಇಲ್ಲ. ಅಲ್ಲದೆ ಹಾಗೆ ಮಾಡುವುದರಿಂದ ಪಾಪವು ಸಂಘಟಿಸುವುದೇ ಹೊರತು ಪುಣ್ಯಪ್ರಾಪ್ತಿಯಿರುವುದಿಲ್ಲ.

ಯಾತ್ರಾಕಾಲೇ ತು ಸಂಪ್ರಾಪ್ತೇ ಸವಿತುರ್ದೀಕ್ಷಿತಾಂ ತನುಂ ।
ಯೇ ದ್ರಕ್ಷ್ಯಂತಿ ತದಾ ಭಕ್ತ್ಯಾ ತೇ ಭವಿಷ್ಯಂತ್ಯಕಲ್ಮಷಾಃ ॥ ೧೪ ॥

ಪೌರ್ಣಮಾಸ್ಯಾಮಮಾವಾಸ್ಯಾಂ ದಾನಂ ಪುಣ್ಯತರಂ ತಥಾ ।
ಆಷಾಢೀ ಕಾರ್ತಿಕೀ ಮಾಘೀ ತಿಥ್ಯಃ ಪುಣ್ಯತರಾಃ ಸ್ಮೃತಾಃ ॥ ೧೫ ॥

ಮಹತ್ವಂ ಚ ತಿಥೇಃ ಪುಣ್ಯಂ ಯಥಾಶಾಸ್ತ್ರೇಷು ಭಾಷಿತಂ ।
ಕಾರ್ತಿಕ್ಯಾಂ ಚ ವಿಶೇಷೇಣ ಮಹಾಕಾರ್ತಿಕ್ಯುದಾಹೃತಾ ॥ ೧೬ ॥

ಏವಂ ಕಾಲಸಮಾಯೋಗಾಚ್ಚಾತ್ರ ಕಾಲೇ ವಿಶಿಷ್ಯತೇ ।
ದರ್ಶನಾಚ್ಚ ಮಹತ್ಪುಣ್ಯಂ ಸರ್ವಪಾಪಹರಂ ಪರಂ ॥ ೧೭ ॥

---

೧೪. ಸೂರ್ಯನ ರಥೋತ್ಸವಕಾಲದಲ್ಲಿ ದೀಕ್ಷಾವಿಶಿಷ್ಟನಾಗಿರುವ ಆ ಸೂರ್ಯನ ಶರೀರವನ್ನು ಭಕ್ತಿಯಿಂದ ನೋಡಿದವರು ಪಾಪರಹಿತರಾಗುವರು.

೧೫. ಹುಣ್ಣಿಮೆ ಮತ್ತು ಅಮಾವಾಸ್ಯೆ ಈ ದಿನಗಳಲ್ಲಿ ಸೂರ್ಯನನ್ನುದ್ದೇಶಿಸಿ ದಾನಕೊಡುವುದು ಪುಣ್ಯಕರವೆನಿಸುವದು. ಆದರಲ್ಲೂ ಆಷಾಢ, ಕಾರ್ತಿಕ, ಮಾಘಮಾಸಗಳ ಪೂರ್ಣಿಮಾ ಮತ್ತು ಅಮಾವಾಸ್ಯಾ ತಿಥಿಗಳು ವಿಶೇಷ ಸುಕೃತ ಪ್ರದಗಳೆಂದು ಭಾವಿಸಬೇಕು.

೧೬. ತಿಥಿಗಳಿಗೆ ಇರುವ ಪುಣ್ಯವಿಚಾರವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ತಿಳಿದು ನಡೆಯಬೇಕು. ಆದರಲ್ಲೂ ಕಾರ್ತಿಕ ಮಾಸದ ತಿಥಿಗಳು ಮಹಾ ಪ್ರಶಸ್ತವೆಂದೂ, ಕೃತ್ತಿಕಾಯುತವಾದ ತಿಥಿಗೆ ಮಹಾ ಕಾರ್ತಿಕವೆಂದು ಶಾಸ್ತ್ರದಲ್ಲಿ ಉಕ್ತವಾಗಿದೆ.

೧೭. ಈ ರೀತಿ ಶಾಸ್ತ್ರದಲ್ಲಿ ಹೇಳಿರುವಂತೆ ಕಾಲೋಚಿತವಾದ ಕರ್ಮಗಳನ್ನು ಆಚರಿಸುತ್ತಾ ನಡೆದರೆ ಪುಣ್ಯಬರುವುದು. ಆದರಲ್ಲೂ ಸೂರ್ಯಯಾತ್ರೆಯ ಕಾಲದಲ್ಲಿ ಕೇವಲ ದರ್ಶನಮಾತ್ರದಿಂದಲೇ ಸಕಲಪಾಪಗಳೂ ನಾಶವಾಗಿ ಮಹಾ ಪುಣ್ಯವುಂಟಾಗುವುದು.

ಉಪವಾಸಪರೋ ಯಶ್ಚ ತಸ್ಮಿನ್ಕಾಲೇ ಧೃತವ್ರತಃ ।
ಪೂಜಯೇದ್ಭಾಸ್ಕರಂ ಭಕ್ತ್ಯಾ ಸ ಗಚ್ಛೇತ್ಪರಮಾಂ ಗತಿಂ ॥ ೧೮ ॥

ದೇವೋಽಯಂ ಯಜ್ಞಪುರುಷೋ ಲೋಕಾನುಗ್ರಹಕಾಂಕ್ಷಯಾ ।
ಪ್ರತಿಮಾಯಾಂ ಸ್ಥಿತೋ ಭೂತ್ವಾ ಪೂಜ್ಯತೇ ಮಾನುಷ್ಯೈಃ ಸದಾ ॥ ೧೯ ॥

ಸ್ನಾನಾದ್ದಾನಾಜ್ಜಪಾದ್ಧೋಮಾತ್ಸಂಯೋಗಾದ್ದೇವಕರ್ಮಣಃ ।
ಶಿರಸೋ ವಪನಾಚ್ಚಾಪಿ ದೀಕ್ಷಿತಃ ಪುರುಷೋ ಭವೇತ್ ॥ ೨೦ ॥

ಕೇಶಾನಾಂ ವಪನಂ ಕಾರ್ಯಂ ಸೂರ್ಯಭಕ್ತ್ಯೈಃ ಸದಾ ನರೈಃ ।
ಸೂರ್ಯಕ್ರತೌ ಶುಚಿಶ್ಚೈವಂ ದೀಕ್ಷಿತಃ ಪುರುಷೋಭವೇತ್ ॥ ೨೧ ॥

---

೧೮. ಮೇಲೆ ಹೇಳಿದ ಪುಣ್ಯಕಾಲದಲ್ಲಿ ಉಪವಾಸವಿದ್ದು ವ್ರತನಿಯಮವುಳ್ಳವನಾಗಿ ಭಕ್ತಿಯಿಂದ ಸೂರ್ಯನನ್ನು ಪೂಜಿಸುವವನು ಉತ್ತಮವಾದ ಗತಿಯನ್ನು ಪಡೆಯುವನು.

೧೯. ಯಜ್ಞಪುರುಷನಾದ ಆ ಸೂರ್ಯದೇವನು ಲೋಕಾನುಗ್ರಹ ಮಾಡಬೇಕೆಂಬ ಅಪೇಕ್ಷೆಯಿಂದ ಪ್ರತಿಮಾರೂಪದಲ್ಲಿ ಯಾವಾಗಲೂ ಭಕ್ತರಿಂದ ಪೂಜಿಸಿಕೊಳ್ಳುತ್ತಾ ಅವರ ಇಷ್ಟಾರ್ಥಗಳನ್ನು ಸಲ್ಲಿಸುತ್ತಿರುವನು.

೨೦. ಸ್ನಾನ, ದಾನ, ಜಪ, ಹೋಮ, ದೇವಕಾರ್ಯದಲ್ಲಿ ಓಡಾಡುವುದು ಮತ್ತು ವಪನ, ಇವುಗಳೆಲ್ಲವನ್ನೂ ವಿಧಿವತ್ತಾಗಿ ನಡೆಸಿ ಸೂರ್ಯಾರಾಧನೆಮಾಡುವ ಪುರುಷನು ದೀಕ್ಷಿತನೆನಿಸಿಕೊಳ್ಳುವನು.

೨೧. ಸೂರ್ಯವ್ರತದಲ್ಲಿ ನಿರತರಾದ ಮನುಷ್ಯರು ಮೊದಲು ಕ್ಷೌರ ಮಾಡಿಸಿಕೊಳ್ಳಬೇಕು. ಹೀಗೆ ಮಾಡಿದರೆ ಸೂರ್ಯಯಾಗದಲ್ಲಿ ಆ ಪುರುಷನು ಪರಿಶುದ್ಧನೆನಿಸಿಕೊಂಡು ದೀಕ್ಷಿತನೆಂದು ಹೇಳಿಸಿಕೊಳ್ಳುವನು.

ಚತುರ್ಣಾಮಪಿ ವರ್ಣಾನಾಂ ಭಕ್ತ್ಯಾ ಸೂರ್ಯಂ ಚ ನಿತ್ಯಶಃ ।
ಏವಂ ಯೇ ತು ಕರಿಷ್ಯಂತಿ ತೇ ನರಾ ನಿತ್ಯದೀಕ್ಷಿತಾಃ ।
ತೀರ್ಣವ್ರತಾ ಮಹಾತ್ಮಾನಃ ಪ್ರಾಪ್ನುವಂತಿ ಶುಭಾಂ ಗತಿಂ ॥ ೨೨ ॥

ಇತಿ ಶ್ರೀ ಸಾಂಬಪುರಾಣೇ ಪಂಚತ್ರಿಂಶೋಽಧ್ಯಾಯಃ.

---

೨೨. ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯದಲ್ಲಿ ಯಾರು ನಿತ್ಯವೂ ಭಕ್ತಿಯಿಂದ ಸೂರ್ಯನನ್ನು ಪೂಜಿಸುವರೋ, ಆ ಜನರು ನಿತ್ಯದೀಕ್ಷಿತರೆನಿಸುವರು ಮತ್ತು ತಮ್ಮ ಸೂರ್ಯಾರ್ಚನವ್ರತವು ಮುಗಿದಮೇಲೆ ಉತ್ತಮವಾದ ಗತಿಯನ್ನು ಪಡೆಯುವರು. ಎಂದು ವಸಿಷ್ಠರು ಬೃಹದ್ಬಲರಾಜನಿಗೆ ಹೇಳಿದರು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಮೂವತ್ತೈದನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಷಟ್ತ್ರಿಂಶೋಽಧ್ಯಾಯಃ

॥ ಬೃಹದ್ಬಲ ಉವಾಚ ॥

**ಶ್ರುತಂ ಮಯೇದಂ ವಿಪ್ರೇಂದ್ರ ಯಾತ್ರಾಯಾಃ ಕರಣಂ ಶುಭಂ ।**
**ಅಗ್ನೇರ್ಧೂಪಸ್ಯ ಚ ತಥಾ ವಿಧಿಮಾಚಕ್ಷ್ವ ಸುವ್ರತ ॥ ೧ ॥**

॥ ವಸಿಷ್ಠ ಉವಾಚ ॥

**ಅಥಾತಃ ಸಂಪ್ರವಕ್ಷ್ಯಾಮಿ ಹ್ಯಗ್ನಿಧೂಪವಿಧಿಕ್ರಿಯಾಂ ।**
**ಸ್ನಾನಮಾಚಮನಂ ಚಾಥೋಽರ್ಘ್ಯದಾನಂ ತಥೈವ ಚ ॥ ೨ ॥**

---

## ಮೂವತ್ತಾರನೆಯ ಅಧ್ಯಾಯ.

೧. " ಎಲೈ ಬ್ರಾಹ್ಮಣಶ್ರೇಷ್ಠನಾದ ವಸಿಷ್ಠಮಹರ್ಷಿಯೇ; ನೀನು ಹೇಳಿದ ಸೂರ್ಯನ ಶುಭಕರವಾದ ಯಾತ್ರಾಪ್ರಕರಣವು ನನಗೆ ತಿಳಿಯಿತು. ಈಗ ಅಗ್ನಿಯ ಸಹಾಯದಿಂದ ಧೂಪಗಳನ್ನು ಉಪಯೋಗಿಸುವ ವಿಧಿಯನ್ನು ದೇವಸ್ವರೂಪನಾದ ನೀನು ನನಗೆ ತಿಳಿಸಬೇಕು " ಎಂದು ಬೃಹದ್ಬಲನು ವಸಿಷ್ಠರನ್ನು ಕುರಿತು ಪ್ರಾರ್ಥಿಸಿಕೊಂಡನು.

೨. ಹಾಗೆ ಬೃಹದ್ಬಲರಾಜನ ಅಪೇಕ್ಷೆಯನ್ನು ತಿಳಿದು ವಸಿಷ್ಠಮಹರ್ಷಿಯು " ಎಲೈ ರಾಜನೆ; ಇನ್ನು ಮುಂದೆ ಅಗ್ನಿ ಧೂಪದ ವಿಧಿಯನ್ನೂ, ಸ್ನಾನ, ಆಚಮನ ಮತ್ತು ಅರ್ಘ್ಯದಾನ ಇವುಗಳ ಕ್ರಮವನ್ನೂ ಸಹ ತಿಳಿಸುವೆನು ಕೇಳು " ಎಂದು ಹೀಗೆಂದನು.

ಅಥ ಮೃದ್ಭಿಸ್ತ್ರಿಭಿಃ ಸ್ನಾತ್ವಾ ವಾಸಸೀ ನಿರ್ಮಲೇ ಶುಭೇ ।
ಪರಿಧಾಯ ಚ ಸಾವಿತ್ರ್ಯಾ ಹ್ಯಾಚಮೇಚ್ಚ ಪ್ರಯತ್ನತಃ ॥ ೩ ॥

ಜಲಸ್ಥೋ ನಾಚಮೇದ್ವಿದ್ವಾನ್ಜಲಾದುತ್ತೀರ್ಯ ನಿತ್ಯಶಃ ।
ಆಚಮೇತ್ತು ಪ್ರಯತ್ನೇನ ಸಾವಿತ್ರ್ಯಾ ಸುಸಮಾಹಿತಃ ॥ ೪ ॥

ಅಪ್ಸು ಸೂರ್ಯಸ್ತಥಾಗ್ನಿಶ್ಚ ನಾಗದೇವೀ ಸರಸ್ವತೀ ।
ತಸ್ಮಾದುತ್ತೀರ್ಯ ಚಾಚಾಮೇನ್ನೋಪಹನ್ಯಾಜ್ಜಲಾಶಯಂ ॥ ೫ ॥

ಉಪವಿಶ್ಯ ಶುಚೌ ದೇಶೇ ಪ್ರಯತಃ ಪ್ರಾಗುದಙ್ಮುಖಃ ।
ಪಾದೌ ಪ್ರಕ್ಷಾಲ್ಯ ಹಸ್ತೌ ಚ ಅಂತರ್ಜಾನುಸ್ತಥಾಽಽಚಮೇತ್ ॥ ೬ ॥

---

೩. ಮೊದಲು ಮೂರುಸಲ ಮೃತ್ತಿಕಾಶೌಚಪೂರ್ವಕವಾಗಿ ಸ್ನಾನಮಾಡಿ ಅನಂತರ ಶುಭ್ರವೂ, ನಿಷ್ಕಲ್ಮಶವೂ, ಆದ ಮಂಗಳವಸ್ತ್ರಗಳನ್ನು ಧರಿಸಿಕೊಂಡು ಆಮೇಲೆ ಸಾವಿತ್ರೀಮಂತ್ರದಿಂದ ಪ್ರಯತ್ನಪೂರ್ವಕವಾಗಿ ಆಚಮನ ಮಾಡಬೇಕು.

೪. ನೀರಿನಲ್ಲಿ ನಿಂತುಕೊಂಡು ಯಾವಾಗಲೂ ಆಚಮನ ಮಾಡಬಾರದು. ಪಂಡಿತನಾದವನು ನೀರಿನಿಂದ ಮೇಲಕ್ಕೆ ಬಂದು ಪ್ರಯತ್ನಪೂರ್ವಕವಾಗಿ (ಶ್ರದ್ಧೆಯಿಂದ) ಗಾಯತ್ರೀಮಂತ್ರವನ್ನು ಅನುಸಂಧಾನ ಮಾಡುತ್ತಾ ಆಚಮನ ಮಾಡಬೇಕು.

೫. ನೀರಿನಲ್ಲಿ, ಸೂರ್ಯನೂ, ಅಗ್ನಿಯೂ, ನಾಗದೇವಿ (ಸ್ವರ್ಗಕನ್ಯೆಯೂ) ಸರಸ್ವತಿಯೂ ಸದಾ ನೆಲಸಿರುವರು. ಆದುದರಿಂದ ಆ ನೀರಿನಲ್ಲಿ ನಿಂತುಕೊಂಡು ಆಚಮನ ಮಾಡದೇ ಮೇಲಕ್ಕೆ ದಡದಮೇಲೆ ಬಂದೇ ಆಚಮನ ಮಾಡಬೇಕು. ಅದರಿಂದಲೇ ಜಲಾಶಯವನ್ನು ಯಾವರೀತಿಯಿಂದಲೂ ನಾಶಪಡಿಸಬಾರದು.

೬. ಜಲಾಶಯದ ದಡದಲ್ಲಿ, ಕೈಕಾಲುಗಳನ್ನು ತೊಳೆದುಕೊಂಡನಂತರ, ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಭಿಮುಖವಾಗಿ ಕುಳಿತು, ಶ್ರದ್ಧೆಯಿಂದ ಎರಡು ಮೊಳಕಾಲುಗಳ ಒಳಗೆ ಕೈ ಬರುವಂತೆ ಮಾಡಿಕೊಂಡು ಆಚಮನ ಮಾಡಬೇಕು.

ಪ್ರಸನ್ನಸ್ತ್ರಿಃ ಪಿಬೇದಾಪಃ ಪ್ರಯತಃ ಸುಸಮಾಹಿತಃ ।
ದ್ವಿಧಾಪಮಾರ್ಜನಂ ಕೃತ್ವಾ ತ್ರಿಭಿರಭ್ಯುಕ್ಷಣಂ ಪುನಃ ॥ ೭ ॥

ಮೂರ್ಧಾನಂ ಖಾನಿ ಚಾತ್ಮಾನ ಮುಪಸ್ಪೃಶ್ಯಾನುಪೂರ್ವಶಃ ।
ಆಚಾಂತೋಽರ್ಕಂ ನಮಸ್ಕೃತ್ಯ ಶೌಚೇಚ್ಛುಃ ಶುಚಿತಾಮಿಯಾತ್ ॥ ೮ ॥

ಕ್ರಿಯಾಂ ಯಃ ಕುರುತೇ ಮೋಹಾದನಾಚಮ್ಯೇಹ ನಾಸ್ತಿಕಃ ।
ಭವಂತಿ ತಾ ವೃಥಾ ತಸ್ಯ ಕ್ರಿಯಾಃ ಸರ್ವಾ ನ ಸಂಶಯಃ ॥ ೯ ॥

ಶುಚಿಕಾಮಾ ಹಿ ವೈ ದೇವಾ ವೇದೈರೇವಮುದಾಹೃತಾಃ ।
ನಾಸ್ತಿಕಂ ಚಾಶುಚಿಂ ಚೈವ ವರ್ಜಯಂತಿ ಸದಾ ಸುರಾಃ ॥ ೧೦ ॥

---

೭-೮. ಆಚಮನ ಮಾಡುವಾಗ ಪ್ರಸನ್ನವಾದ ಮನಸ್ಸಿನಿಂದ ಮೂರುಸಲ ನೀರನ್ನು ಕುಡಿಯಬೇಕು. ಅನಂತರ ಎರಡುಸಲ ಮಾರ್ಜನೆಮಾಡಿಕೊಂಡು ಪುನಃ ಮೂರುಸಲ ನೀರನ್ನು ಪ್ರೋಕ್ಷಣೆ ಮಾಡಿಕೊಳ್ಳಬೇಕು. ಆಮೇಲೆ ಕ್ರಮವಾಗಿ ತಲೆಯನ್ನೂ ಕಣ್ಣುಗಳನ್ನೂ ಮತ್ತು ಹೃದಯವನ್ನೂ ಮುಟ್ಟಿಕೊಂಡು ಆಚಮನಮಾಡಿ ಸೂರ್ಯನನ್ನು ನಮಸ್ಕಾರ ಮಾಡಿದರೆ ಶೌಚಾಪೇಕ್ಷಿಯಾದ ಪುರುಷನು ಶುಚಿಯಾಗುವನು.

೯. ಮೊದಲು ಆಚಮನ ಮಾಡದೆ ಅಜ್ಞಾನದಿಂದ ಕರ್ಮಗಳನ್ನು ಮಾಡುವ ನಾಸ್ತಿಕನು ಮಾಡಿದ ಸಕಲ ಕರ್ಮಗಳೆಲ್ಲಾ ನಿಶ್ಚಯವಾಗಿಯೂ ವ್ಯರ್ಥವಾಗುವುದೆಂದು ತಿಳಿಯಬೇಕು.

೧೦. ದೇವತೆಗಳು ಯಾವಾಗಲೂ ಶುಚಿಯಾಗಿರುವಿಕೆಯನ್ನು ಅಪೇಕ್ಷಿಸತಕ್ಕವರೆಂದು ವೇದಗಳಲ್ಲಿ ಹೇಳಿದೆ. ಅಶುಚಿಯೂ, ನಾಸ್ತಿಕನೂ (ಕರ್ಮಶ್ರದ್ಧೆಯಿಲ್ಲದವನು) ಆದ ಜನರನ್ನು ಯಾವಾಗಲೂ ದೇವತೆಗಳು ತ್ಯಾಗಮಾಡುವರು. ಅಂದರೆ ಅಂತಹವರು ಮಾಡುವ ಪೂಜೆ ಮೊದಲಾದವುಗಳನ್ನು ಸ್ವೀಕರಿಸುವುದಿಲ್ಲ.

ಋಷಯಃ ಪಿತರಶ್ಚಾಪಿ ಯೇ ಚಾನ್ಯೇಪಿ ಶುಚಿವ್ರತಾಃ ।
ಶೌಚಮೇವಂ ಪ್ರಶಂಸಂತಿ ಶೌಚಾಜ್ಞಾನಂ ವಿಧೀಯತೇ ॥ ೧೧ ॥

ಆಚಾಂತೋ ಮೌನಮಾಸ್ಥಾಯ ದೇವಾಗಾರಂ ವಿಶೇತ್ತತಃ ।
ಶ್ವಾಸಾಂತರ್ಹಿ ನಿಮಿತ್ತಂ ಹಿ ಪ್ರಾಣಮಾಚ್ಛಾದ್ಯ ವಾಸಸಾ ॥ ೧೨ ॥

ಶಿರಃ ಪ್ರಾವೃತ್ಯ ಚೈವಾಥ ಕೇಶೋದವಿನಿವೃತ್ತಯೇ ।
ತತಃ ಪೂಜಾಂ ರವೇಃ ಕುರ್ಯಾತ್ಪುಷ್ಪೈರ್ನಾನಾವಿಧೈಃ ಶುಭೈಃ ॥ ೧೩ ॥

ಜಪೇನ ವರ್ತಮಾನೇನ ಸಂಹಿತಾಯಾಂ ಕರಜ್ಞಾಪನ್ ।
ಧೂಪಂ ತತೋಽಗ್ನಯೇ ದತ್ವಾ ಪ್ರಥಮಂ ಗುಗ್ಗುಲಾಹುತಿಂ ॥ ೧೪ ॥

---

೧೧. ಋಷಿಗಳೂ ಪಿತೃಗಳೂ ಮತ್ತು ಇತರ ಶುದ್ಧರಾದ ಆಚಾರ ಶೀಲರೂ ಸಹ ಈ ರೀತಿ ಶೌಚಕರ್ಮವನ್ನು ಮುಖ್ಯವೆಂದು ಹೊಗಳುವರು. ಶುದ್ಧವಾದ ಈ ಕರ್ಮಾನುಷ್ಠಾನವು ಜ್ಞಾನಪ್ರಾಪ್ತಿಗೆ ಕಾರಣವಾಗಿರುವುದು.

೧೨-೧೩. ಆಚಮನ ಮಾಡಿ ಅನಂತರ ಮೌನವನ್ನು ತಾಳಿ ದೇವಾಲಯವನ್ನು ಪ್ರವೇಶಿಸಬೇಕು. ಅಲ್ಲಿಯೂ ಸೂರ್ಯನನ್ನು ಪೂಜೆಮಾಡುವುದಕ್ಕೆ ಮೊದಲು ಶ್ವಾಸಾಂತರ್ಗತವಾದ ಪ್ರಾಣವಾಯುವನ್ನು ಪ್ರಾಣಾಯಾಮ ವಿಧಿಯಿಂದ ಶುದ್ಧಿ ಮಾಡಿ, ತಲೆಯ . ಕೂದಲು ನೀರು ಬಿದ್ದು ಮೈಲಿಗೆಯಾಗದಿರುವಂತೆ ತಲೆಯನ್ನು ಬಟ್ಟೆಯಿಂದ ಕಟ್ಟಿಕೊಂಡು ನಾನಾವಿಧವಾದ ಮಂಗಳಕರವಾದ ಪುಷ್ಪಗಳಿಂದ ಸೂರ್ಯನನ್ನು ಪೂಜಿಸಬೇಕು.

೧೪-೧೬. ಮುಂದೆ ಹೇಳುವ ಮೂಲ ಮಂತ್ರ ಜಪವನ್ನು ಕೈ ಗುರುತಿಟ್ಟುಕೊಂಡು ಜಪಮಾಡುತ್ತಾ, ಮೊದಲು ಅಗ್ನಿಗೆ ಗುಗ್ಗುಲಾಹುತಿಯನ್ನು ಅರ್ಪಿಸಿ ಅನಂತರ ಧೂಪವನ್ನು ಸೂರ್ಯನಿಗೆ ಸಮರ್ಪಿಸಬೇಕು. ಕೈಯಿಂದ ಹೂವುಗಳನ್ನು ಹಿಡಿದು, ಬೊಗಸೆಮಾಡಿಕೊಂಡು, ಆ ಹೂವುಗಳನ್ನೂ ಧೂಪದ ವಾಸನೆಯಿಂದ ಸುವಾಸಿತವ

**ಪುಷ್ಪಾಂಜಲಿಂ ತತೋ ಗೃಹ್ಯ ತಚ್ಛಿಲಾಯಾಂ ಪ್ರಧೂಪ್ಯ ಚ ।**
**ರವೇರ್ಮೂರ್ಧನಿ ತಂ ದತ್ವಾ ವಾಚನೋತಾಮುದಾಹರೇತ್ ॥ ೧೫ ॥**

**ಓಂವ್ರತನಯಂ ವ್ರತಿನೋ ವರ್ಧಯಂತಿ ದೇವಾ ಮನುಷ್ಯಾಃ**
**ಪಿತರಶ್ಚ ಸರ್ವೇ ತಸ್ಯಾದಿತ್ಯಸ್ಯ ಪ್ರಸವಮನಾಮಹೇ ಯಸ್ತೇಜಸಃ**
**ಪ್ರಥಮಮಜೋ ವಿಭಾತಿ ॥ ೧೬ ॥**

**ಧೂಪವೇಲಾಃ ಸ್ಮೃತಾಃ ಪಂಚ ಜಪೇಷ್ವೇವಂ ಚ ಪಂಚಸು ।**
**ಮಹಾವಿದ್ಯಾಸು ಯಾಃ ಪಂಚ ವಕ್ಷ್ಯೇಽಹಂ ತಾಃ ಪುನಃ ಕ್ರಮಾತ್॥ ೧೭ ॥**

**ದಂಡನಾಯಕವೇಲಾ ತು ಪ್ರದೋಷೇ ಋಕ್ಷದರ್ಶನಾತ್ ।**

---

ಸ್ನಾಗಿ ಮಾಡಿ ಆಮೇಲೆ ಅದನ್ನು ಸೂರ್ಯನ ಶಿರಸ್ಸಿನ ಮೇಲಿಟ್ಟು, "ಓಂ ವ್ರತನಯಂ ವ್ರತಿನೋ ವರ್ಧಯಂತಿ ದೇವಾ ಮನುಷ್ಯಾಃ ಪಿತರಶ್ಚ ಸರ್ವೇ, ತಸ್ಯಾದಿತ್ಯಸ್ಯ ಪ್ರಸವಮನಾಮಹೇಯ ಸ್ತೇಜಸಃ ಪ್ರಥಮಮಜೋ ವಿಭಾತಿ" ಎಂಬ ವಾಕ್ಯವನ್ನು ಉಚ್ಚರಿಸಬೇಕು.

(ಹೇ ಸೂರ್ಯದೇವನೆ; ನಿನ್ನಿಂದಲೇ ಸಕಲ ದೇವತೆಗಳೂ ಆವಿರ್ಭವಿಸಿರುವರು. ನಿನ್ನ ಕಾಂತಿಯಿಂದಲೇ ಪಿತೃದೇವತೆಗಳೇ ಮೊದಲಾದವರೆಲ್ಲಾ ಪ್ರಕಾಶಿಸುತ್ತಿರುವರು. ಬ್ರಹ್ಮಾದಿ ದೇವತೆಗಳಿಗೆ ಶಕ್ತಿಯನ್ನೂ, ತೇಜಸ್ಸನ್ನೂ ಕೊಡಬೇಕೆಂದೇ ನೀನು ಪ್ರಕಾಶಿಸುತ್ತಿರುವೆ.)

೧೭. ಧೂಪಹಾಕುವ ವೇಲೆಯೂ ಮತ್ತು ಜಪ ಮಾಡುವ ಕಾಲವೂ ಸಹ ಐದು ರೀತಿಯಾಗಿ ಹೇಳಲ್ಪಟ್ಟಿದೆ. ಮಹಾಜ್ಞಾನ ಸಂಪಾದಕವಾದ ಈ ಸೂರ್ಯನ ಉಪಾಸನಾ ವಿದ್ಯೆಯಲ್ಲಿ ಹೇಳಿರುವ ಐದು ವೇಲೆಯನ್ನೂ ಕ್ರಮವಾಗಿ ಈಗ ನಿನಗೆ ಹೇಳುವೆನು.

೧೮. ಪ್ರದೋಷಕಾಲದಲ್ಲಿ ನಕ್ಷತ್ರಗಳು ಕಾಣುವ ವೇಲೆಯು ದಂಡನಾಯಕವೇಲೆಯೆನಿಸುವುದು. ಸೂರ್ಯೋದಯಕ್ಕಿಂತಲೂ ಮೊದಲಿನ ಕಾಲವು ಪ್ರತ್ಯೂಷ

ರಾಜ್ಞೀವೇಲಾ ತು ಪ್ರತ್ಯೂಷೇ ತದ್ವತ್ಕಾರ್ಯೋ ವಿಜಾನತಾ ॥ ೧೮ ॥

ತ್ರಿಕಾಲಂ ತು ರವೇಃ ಪೂಜಾ ಕರ್ತವ್ಯಾ ಸೂರ್ಯದರ್ಶನಾತ್ ।
ಅರ್ಧೋದಿತೇ ಖಮಧ್ಯಸ್ಥೇ ಭಾನೋರ್ವಾಸ್ತಂಗತೇ ತಥಾ ॥ ೧೯ ॥

ಮಿಹಿರಾಯ ಚ ಪೂರ್ವಾಹ್ಣೇ ಮಧ್ಯಾಹ್ನೇ ಜ್ವಲನಾಯ ಚ ।
ಅರ್ಧೋದ್ಯನ್ಮಂಡಲೇ ದೇಯಾ ನೀಚಾಹ್ನೇ ವರುಣಾಯ ಚ ॥ ೨೦ ॥

ರಕ್ತಚಂದನಮಿಶ್ರಾಣಿ ಗಂಧೋದಕಯುತಾನಿ ಚ ।
ಪದ್ಮಾನಿ ಕರವೀರಾಣಿ ತಥಾ ರಕ್ತೋತ್ಪಲಾನಿ ಚ ॥ ೨೧ ॥

---

ವೆನಿಸುವುದು. ಈ ಪ್ರತ್ಯೂಷಕಾಲವು ರಾಜ್ಞೀವೇಲ ಎಂದು ಹೇಳಲ್ಪಡುವುದು ಈ ರೀತಿ ಈ ಎರಡು ವೇಳೆಯನ್ನೂ ಸರಿಯಾಗಿ ತಿಳಿದು ಪಂಡಿತನಾದವನು ಆ ಕಾಲದಲ್ಲಿ ಸೂರ್ಯಾರ್ಚನೆ ಮಾಡಬೇಕು.

೧೯-೨೦. ಸೂರ್ಯನು ಕಾಣಲು ಪ್ರಾರಂಭವಾದ ಕಾಲದಿಂದ ಹಿಡಿದು, ಮೂರು ಕಾಲಗಳಲ್ಲಿಯೂ ಸೂರ್ಯನಿಗೆ ಪೂಜೆ ಮಾಡಬೇಕು. ಸೂರ್ಯನು ಅರ್ಧಹುಟ್ಟಿರುವುದು ಮೊದಲನೆಯ ಕಾಲವು. ಇದೇ ಪೂರ್ವಾಹ್ಣವೆನಿಸುವುದು. ಅಂತರಿಕ್ಷದ ಮಧ್ಯಕ್ಕೆ ಬಂದಾಗ ಎರಡನೆಯ ಕಾಲವಾಗಿ ಮಧ್ಯಾಹ್ನವೆನಿಸುವುದು. ಸೂರ್ಯನು ಅರ್ಧಮುಳುಗಿದಾಗ ಮೂರನೆಯ ಕಾಲವು ಪ್ರಾರಂಭವಾಗಿ ನೀಚಾಹ್ನ ಅಥವಾ ಸಾಯಾಹ್ನವೆನಿಸುವುದು. ಈ ರೀತಿ ಪೂರ್ವಾಹ್ಣದಲ್ಲಿ ಮಿಹಿರಸಂಜ್ಞಕನಾದ ಸೂರ್ಯನಿಗೂ, ಮಧ್ಯಾಹ್ನದಲ್ಲಿ ಜ್ವಲನ ಸಂಜ್ಞಕನಾದ ಸೂರ್ಯನಿಗೂ ನೀಚಾಹ್ನದಲ್ಲಿ ವರುಣಸಂಜ್ಞಕನಾದ ಸೂರ್ಯನಿಗೂ ಪೂಜೆಯನ್ನು ಸಲ್ಲಿಸಬೇಕು.

೨೧-೨೨. ರಕ್ತ ಚಂದನದಿಂದಲೂ ಗಂಧೋದಕದಿಂದಲೂ ಪರಿಮಳಯುಕ್ತವಾಗಿರುವ ಪದ್ಮ ಪುಷ್ಪಗಳನ್ನೂ ಕಣಿಗಲು ಹೂವುಗಳನ್ನೂ ಮತ್ತು ಕೆಂಪು ನೈದಿಲೆ ಹೂವನ್ನೂ ಕುಂಕುಮ ಕೇಸರಿಯ ನೀರಿನಿಂದ ಮಿಶ್ರವಾದ ಕುರಟಕ ಪುಷ್ಪಗಳನ್ನೂ

ಕುಂಕುಮೋದಕಮಿಶ್ರಾಣಿ ತಥಾ ಕುರಟಿಕಾನಿ ಚ ।
ಗಂಧಾದ್ಯಾನ್ಯಥ ಪಾನ್ಯಾನಿ ಕೃತ್ವಾ ತಾಮ್ರಸ್ಯ ಭಾಜನೇ ॥ ೨೨ ॥

ಭೂಯೋ ಧೂಪಂ ತತೋ ದದ್ಯಾತ್ಸಮಂತ್ರಾಂ ಗುಗ್ಗುಲಾಹುತಿಂ ।
ಅರ್ಘ್ಯಪಾತ್ರಂ ತತೋ ಗೃಹ್ಯ ಕುರ್ಯಾದಾವಾಹನಂ ರವೇಃ ॥ ೨೩ ॥

ಏಹಿ ಸೂರ್ಯಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।
ಅನುಕಂಪಯ ಮಾಂ ಭಕ್ತಂ ಗೃಹಾಣಾರ್ಘ್ಯಂ ದಿವಾಕರ ॥ ೨೪ ॥

ಅನೇನಾವಾಹನಂ ಕೃತ್ವಾ ಜಾನುಭ್ಯಾಂ ಸಂಸ್ಥಿತಃ ಕ್ಷಿತೌ ।
ರವೇರ್ನಿವೇದಯೇದರ್ಘ್ಯಮಾದಿತ್ಯಹೃದಯಂ ಜಪೇತ್ ॥ ೨೫ ॥

---

ಅಲ್ಲದೆ ಇತರ ಗಂಧ ವಸ್ತುಗಳನ್ನೂ ಮತ್ತು ಇತರ ಪೂಜಾ ಸಾಮಗ್ರಿಗಳನ್ನೂ ತಾಮ್ರದ ಪಾತ್ರೆಯಲ್ಲಿ ಸಿದ್ಧವಾಗಿಟ್ಟುಕೊಳ್ಳಬೇಕು.

೨೩. ಆಮೇಲೆ ಮಂತ್ರ ಪೂರ್ವಕವಾದ ಗುಗ್ಗುಲಾಹುತಿ ಪೂರ್ವಕವಾದ ಧೂಪವನ್ನು ಹಾಕಿ, ಅನಂತರ ಅರ್ಘ್ಯಪಾತ್ರೆಯನ್ನು ಹಿಡಿದುಕೊಂಡು ಸೂರ್ಯನನ್ನು ಆಹ್ವಾನಿಸಬೇಕು.

೨೪-೨೫. "ಏಹಿ, ಸೂರ್ಯ, ಸಹಸ್ರಾಂಶೋ ತೇಜೋರಾಶೇ ಜಗತ್ಪತೇ, ಅನುಕಂಪಯಮಾಂ ಭಕ್ತಂ ಗೃಹಾಣಾರ್ಘ್ಯಂ ದಿವಾಕರ; ಎಂದು ಹೇಳುತ್ತಾ ಸೂರ್ಯನನ್ನು ಈ ಮಂತ್ರದಿಂದ ಆವಾಹನೆ ಮಾಡಿ, ಮೊಳಕಾಲುಗಳನ್ನೂರಿ ನೆಲದ ಮೇಲೆ ಕುಳಿತುಕೊಂಡು ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು, ಆಮೇಲೆ ಆದಿತ್ಯ ಹೃದಯವನ್ನು ಜಪಮಾಡಬೇಕು. (ಎಲೈ ಸೂರ್ಯಪರಮಾತ್ಮನೇ, ಸಹಸ್ರ ಕಿರಣಗಳುಳ್ಳವನೇ, ತೇಜೋರಾಶಿಯೇ, ಜಗದೊಡೆಯನೆ, ಭಕ್ತನಾದ ನಾನು ಕೊಡುವ ಅರ್ಘ್ಯಾದಿಗಳನ್ನು ಸ್ವೀಕರಿಸಿ ನನ್ನನ್ನು ಉದ್ಧರಿಸು. ಎಂಬುದೇ ಆ ಮಂತ್ರದ ಅರ್ಥ.)

ಓಂನಮೋ ಭಗವತೇ ಆದಿತ್ಯಾಯ ಪರಿಷ್ಠಾಯ ವರೇಣ್ಯಾಯ
ಬ್ರಹ್ಮಲೋಕೈಕಕರ್ತ್ರೇ ।
ಓಂ ಈ ಈಶಾನಾಯ ಪುರಾಣಾಯ ಪುರಾಣಪುರುಷಾಯ ಚ ॥ ೨೬ ॥

ಓಂ ಸೋಮಾಯ ೯ಕ ಋಗ್ಯಜುಃ ಸಾಮಾಥರ್ವಣೇ ॥ ೨೭ ॥

ಓಂ ಭೂಃ ಓಂಭುವಃ ಓಂಸ್ವಃ ಓಂಮಹಃ ಓಂಜನಃ ।
ಓಂತಪಃ ಓಂಸತ್ಯಂ ಬ್ರಹ್ಮಣೇ ಮಧ್ಯಪರತಆದಿತ್ಯಾಯಸ್ವಾಹಾ ॥ ೨೮ ॥

ಸಾವಿತ್ರ್ಯಾ ಪರಿಪೂತೇನ ನಾರಿಣಾ ತು ತತಃ ಪರಂ ।
ಪರಿತಃ ಪರಿಮ್ಯಜ್ಯಾಥ ಧೂಪಭಾಜನಮುಚ್ಛ್ರಯೇತ್ ॥ ೨೯ ॥

ಓಂ ಭೂರ್ಭುವಸ್ಸ್ವಸ್ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ।
ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ ॥ ೩೦ ॥

ತತೋ ನಿವೇದಯೇದ್ಧೂಪಂ ತ್ಯಚಮೇನಾಮುದಾಹರನ್ ॥ ೩೧ ॥

ತ್ವಮೇಕೋ ರುದ್ರಾಣಾಂ ವಸೂನಾಂ ಪುರಾತನೋ ।
ದೇವಾನಾಂ ಗೀರ್ಭಿರಭಿಷ್ಟುತಃ ಶಾಶ್ವತೋ ದಿವಿ ॥ ೩೨ ॥

---

೨೬-೨೯. ಹಿಂದೆ ಹೇಳಿದ "ಓಂ ನಮೋ ಭಗವತೇ..............ಬ್ರಹ್ಮಣೇ ಮಧ್ಯಪರತ ಆದಿತ್ಯಾಯ" ಎಂಬ ಮಂತ್ರವನ್ನುಚ್ಚರಿಸಿ, ಸಾವಿತ್ರೀಮಂತ್ರಪೂರ್ವಕ ವಾಗಿ ಪರಿಶುದ್ಧವಾದ ನೀರಿನಿಂದ ಸುತ್ತಲೂ ಸಾರಿಸಿ ಅನಂತರ ಧೂಪವನ್ನು ಹಾಕ ಬೇಕು.

೩೦. ಇದು ಗಾಯತ್ರೀಮಂತ್ರವು. ಇದನ್ನೇ ಹೇಳುತ್ತಾ ಸ್ಥಳಶುದ್ಧಿಯನ್ನು ಮಂತ್ರಪೂರ್ವಕವಾದ ನೀರಿನಿಂದ ಮಾರ್ಜನೆ ಮಾಡಬೇಕು.

೩೧-೩೨. ಸ್ಥಲವನ್ನು ಶುದ್ಧಿಮಾಡಿದಮೇಲೆ ಧೂಪಹಾಕುವಾಗ, "ತ್ವಮೇಕೋ ರುದ್ರಾಣಾಂ ವಸೂನಾಂ ಪುರಾತನೋ ದೇವಾನಾಂ ಗೀರ್ಭಿರಭಿಷ್ಟುತಃ" । ಎಂಬ

ಪೂರ್ವಾಹ್ಣೇನೇನ ಮಂತ್ರೇಣ ಮಧ್ಯಾಹ್ನೇ ಚಾಪ್ಯನೇನ ತು ॥ ೩೩ ॥
ಓಂ ನಮೋ ಜ್ವಾಲಾಮಾಲಾಯ । ತದ್ವಿಷ್ಣೋಃ ಪರಮಂ ಪದಂ ।
ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ಸಾಯಾಹ್ನೇ
ಚಾಪ್ಯನೇನ ತು ॥ ೩೪ ॥
ಓಂ ನಮೋ ವರುಣಾಯ ಓಂಆಕೃಷ್ಣೇನ ರಜಸಾ ವರ್ತಮಾನೋ ।
ನಿವೇಶಯನ್ನಮೃತಂ ಮರ್ತ್ಯಂ ಚ । ಹಿರಣ್ಯಯೇನ ಸವಿತಾ ರಥೇನಾ
ದೇವೋ ಯಾತಿ ಭುವನಾನಿ ಪಶ್ಯನ್ ॥ ೩೫ ॥

ಅನೇನ ವಿಧಿನಾ ದತ್ವಾ ಧೂಪಂ ಸೂರ್ಯಾಯ ಭೋಜಕಃ ।
ಉತ್ಕ್ಷಿಪ್ತೇನೈವ ಧೂಪೇನ ವಿಶೇದ್ಗರ್ಭಗೃಹಂ ತತಃ ॥ ೩೬ ॥
ತತಃ ಪ್ರವಿಶ್ಯ ಧೂಪಂ ತು ಪ್ರತಿಮಾಯೈ ನಿವೇದಯೇತ್ ।
ಮಂತ್ರೇಣ ಮಿಹಿರಾಯೇಹಿ ಧೂಪಂ ದತ್ವೇತಿ ನಿತ್ಯಶಃ ॥ ೩೭ ॥

---

ಋಕ್ಕನ್ನು ಉಚ್ಚರಿಸಬೇಕು. ಪೂರ್ವಾಹ್ಣ ಮತ್ತು ಮಧ್ಯಾಹ್ನ ಎರಡು ವೇಳೆಗಳ ಲ್ಲಿಯೂ ಇದೇ ಋಕ್ಕಿನಿಂದ ಧೂಪವನ್ನು ಹಾಕಬಹುದು.

೩೪. ಸೂರ್ಯನಿಗೆ ಸಾಯಂಕಾಲ ಧೂಪ ಹಾಕುವಾಗ, "ಓಂ ನಮೋ ಜ್ವಾಲಾಮಾಲಾಯ ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ದಿವೀವ ಚಕ್ಷುರಾತತಂ" ಎಂಬ ಮಂತ್ರವನ್ನುಚ್ಚರಿಸಬೇಕು.

೩೫-೩೬. "ಓಂ ನಮೋ ವರುಣಾಯ ................ಭುವನಾನಿ ಪಶ್ಯನ್" ಎಂಬ ಮಂತ್ರದಿಂದ ಆರಾಧಕನು ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಆ ಧೂಪ ವನ್ನು ಕೈಯಲ್ಲಿ ಹಿಡಿದುಕೊಂಡೇ ಆಮೇಲೆ ಗರ್ಭಗುಡಿಗೆ ಪ್ರವೇಶಮಾಡಬೇಕು.

೩೭. ಗರ್ಭಗುಡಿಯನ್ನು ಪ್ರವೇಶಮಾಡಿದಮೇಲೆ ಆ ಸೂರ್ಯಪ್ರತಿಮೆಗೆ ಮಿಹಿರಾಯನಮಃ ಎಂಬ ಮಂತ್ರದಿಂದ ನಿತ್ಯವೂ ಧೂಪವನ್ನು ಹಾಕಬೇಕು.

ತತೋ ರಾಜ್ಞೀ ನಮಸ್ಕೃತ್ಯ ನಿಕ್ಷುಭಾಯ್ಯೈ ನಮೋ ನಮಃ ।
ದಂಡನಾಯಕಸಂಜ್ಞಾಯ ಪಿಂಗಲಾಯ ಚ ವೈ ನಮಃ ॥ ೩೮ ॥

ತತೋ ರಾಜ್ಞೀ ಚ ತೋಷಾಯ ಕಲ್ಮಾಷಾಯ ಗರುತ್ಮತೇ ।
ತತಃ ಪ್ರದಕ್ಷಿಣಂ ಕುರ್ವನ್ ದಿಗ್ದೇವೇಭ್ಯೋ ನಿವೇದಯೇತ್ ॥ ೩೯ ॥

ದಂಡಿನೇ ಚ ತತೋ ದದ್ಯಾದ್ರೈವಂತಾನುಚರಾಯ ಚ ।
ಪೂರ್ವೇಣ ನಮ ಇಂದ್ರಾಯ ದಕ್ಷಿಣೇನ ಯಮಾಯ ಚ ॥ ೪೦ ॥

ಪಶ್ಚಿಮೇನ ಜಲೇಶಾಯ ಕುಬೇರಾಯೋತ್ತರೇಣ ಚ ।
ಉತ್ತರೇಣೈವ ಸೋಮಾಯ ದದ್ಯಾದ್ಧೂಪಂ ವಿಚಕ್ಷಣಃ ॥ ೪೧ ॥

ಶೃಂಗೇ ಸೌಮನಸೇ ಧೂಪಮಿಶಾನಾಯ ನಿವೇದಯೇತ್ ।
ಜ್ಯೋತಿಷ್ಕೇ ತ್ವಗ್ನಯೇ ದತ್ವಾ ಪಿತೃಭ್ಯಶ್ಚಿತ್ರಸಂಜ್ಞಿತೇ ॥ ೪೨ ॥

---

೩೮-೩೯. ಅನಂತರ ರಾಜ್ಞೀದೇವಿಗೂ, ನಿಕ್ಷುಭಾದೇವಿ, ದಂಡನಾಯಕ, ಪಿಂಗಲ, ರಾಜ್ಞ, ತೋಷ, ಕಲ್ಮಾಷ, ಗರುಡ, ಇವರೇ ಮೊದಲಾದ ದೇವತೆಗಳಿಗೆ ಭಕ್ತಿಪೂರ್ವಕವಾಗಿ ಮಾಡಬೇಕು. ಆಮೇಲೆ ದಿಗ್ದೇವತೆಗಳಿಗೆ ಪ್ರದಕ್ಷಿಣೆ ಮಾಡಿ ಧೂಪವನ್ನು ಹಾಕಬೇಕು.

೪೦-೪೧. ಆಮೇಲೆ ದಂಡಿಗೂ ರೈವಂತನಿಗೂ ಧೂಪವನ್ನು ಹಾಕಬೇಕು. ಅನಂತರ ಪೂರ್ವದಿಕ್ಕಿನಲ್ಲಿ 'ಇಂದ್ರಾಯನಮಃ' ಎಂದು ಇಂದ್ರನಿಗೂ, ದಕ್ಷಿಣ ದಿಕ್ಕಿನಲ್ಲಿ 'ಯಮಾಯನಮಃ' ಎಂದು ಯಮನಿಗೂ, ಪಶ್ಚಿಮ ದಿಕ್ಕಿನಲ್ಲಿ 'ಜಲೇಶಾಯನಮಃ' ಎಂದು ವರುಣನಿಗೂ, ಉತ್ತರದಿಕ್ಕಿನಲ್ಲಿ 'ಕುಬೇರಾಯನಮಃ, ಎಂದು ಕುಬೇರನಿಗೂ ಸಹ ಧೂಪವನ್ನು ಸಮರ್ಪಿಸಬೇಕು.

೪೨-೪೩. ಸೌಮನಸ್ಸೆಂಬ ಮೇರುಪರ್ವತದ ಶಿಖರದಲ್ಲಿ ಈಶಾನನಿಗೂ, ಜ್ಯೋತಿಷ್ಕವೆಂಬ ಶಿಖರದಲ್ಲಿ ವಾಯುವಿಗೂ ಧೂಪವನ್ನು ಸಮರ್ಪಣೆಮಾಡಬೇಕು.

ಚಂದ್ರಭಾಸೇ ತತಃ ಶೃಂಗೇ ಧೂಪಂ ದತ್ವಾ ತು ವಾಯವೇ ।
ಮಧ್ಯೇ ನಾರಾಯಣಾಖ್ಯಾಯ ಸೂರ್ಯಾಯ ಪರಮಾತ್ಮನೇ ॥ ೪೩ ॥

ಆದಿತ್ಯೇಭ್ಯೋಽಥ ರುದ್ರೇಭ್ಯೋ ಮರುದ್ಭ್ಯಶ್ಚಾಶ್ವಿನೋಸ್ತಥಾ ।
ಯಾಶ್ಚಾಸ್ಮಿನ್ದೇವತಾ ವ್ಯೋಮ್ನಿ ನಮಸ್ತಾಭ್ಯೋಽಪಿ ನಿತ್ಯಶಃ ॥ ೪೪ ॥

ಏವಮುದ್ದಿಶ್ಯ ನಾಮಾನಿ ಧೂಪಂ ದತ್ವಾ ತತಸ್ಸ್ವಯಃ ।
ಉತ್ಕ್ಷಿಪ್ತೋ ಯತ್ರ ವೈ ಧೂಪೋ ಮುಕ್ತ್ವಾ ತತ್ರೈವ ತಂ ಪುನಃ ॥೪೫॥

ಸೂರ್ಯಂ ಗುಹ್ಯೈರಭಿಷ್ಟುತ್ಯ ಹ್ಯೇವಂ ವಿಜ್ಞಾಪಯೇತ್ತತಃ ।
ಅರ್ಚಿತೋ ಹಿ ಯಥಾ ಶಕ್ತ್ಯಾ ಮಯಾ ಭಕ್ತ್ಯಾ ವಿಭಾವಸೋ ॥ ೪೬ ॥

---

ಆಮೇಲೆ ಎಲ್ಲಾ ಶಿಖರಗಳ ಮಧ್ಯದಲ್ಲಿಯೂ ಇರುವ ನಾರಾಯಣನೆಂಬ ಹೆಸರುಳ್ಳ ಸೂರ್ಯಪರಮಾತ್ಮನಿಗೆ ಧೂಪವನ್ನು ಹಾಕಬೇಕು.

೪೪. ಅನಂತರ ದ್ವಾದಶಾದಿತ್ಯರಿಗೂ, ಏಕಾದಶ ರುದ್ರರಿಗೂ, ಸಪ್ತ ಮರುತ್ತುಗಳಿಗೂ, ಇಬ್ಬರು ಅಶ್ವಿನೀ ದೇವತೆಗಳಿಗೂ, ಮತ್ತು ಈ ವ್ಯೋಮದಲ್ಲಿರುವ ಸಕಲ ದೇವತೆಗಳಿಗೂ ನಮಸ್ಕಾರವೆಂದು ಹೇಳಿ ಎಲ್ಲರಿಗೂ ಧೂಪವನ್ನು ಹಾಕಬೇಕು.

೪೫-೪೬. ಹಿಂದೆ ಹೇಳಿದಂತೆ ಪ್ರತಿಯೊಂದು ದೇವತೆಯ ಹೆಸರನ್ನೂ ಉದ್ದೇಶಮಾಡಿ ಅವುಗಳಿಗೆಲ್ಲಾ ಧೂಪವನ್ನು ಸಮರ್ಪಿಸಿ, ಆಮೇಲೆ ಧೂಪವನ್ನಿಟ್ಟಿದ್ದ ಸ್ಥಳದಲ್ಲಿ ಕುಳಿತು ರಹಸ್ಯವಾದ ಸ್ತೋತ್ರಗಳಿಂದ ಸ್ತುತಿಸಬೇಕು ಅನಂತರ ಆ ಸೂರ್ಯದೇವನನ್ನು ಕುರಿತು, "ಎಲೈ ಸೂರ್ಯಭಗವಂತನೆ, ನನ್ನ ಯೋಗ್ಯತಾನುಸಾರವಾಗಿ ನಿನ್ನನ್ನು ನಾನು ಹೀಗೆ ಪೂಜೆಮಾಡುವೆನು. ಈಗ ನೀನು ಇದರಿಂದಲೇ ತೃಪ್ತಿಹೊಂದಿ, ಐಹಿಕ, ಮತ್ತು ಆಮುಷ್ಮಿಕ ಕಾರ್ಯ ಸಿದ್ಧಿಗಳನ್ನುಂಟುಮಾಡು" ಎಂದು ಪ್ರಾರ್ಥಿಸಿಕೊಳ್ಳಬೇಕು.

ಐಹಿಕಾಮುಷ್ಮಿಕೇನಾಥ ಕಾರ್ಯಸಿದ್ಧಿಂ ಕುರುಷ್ವ ಮೇ ।
ಏವಂ ತ್ರಿಷವಣಸ್ನಾತೋ ಯೋಽರ್ಚಯೇತ್ಪ್ರಯತಃ ಸದಾ ।
ವಿಧಿನಾ ತು ಯಥೋಕ್ತೇನ ಸೋಽಶ್ವಮೇಧಫಲಂ ಲಭೇತ್ ॥ ೪೭ ॥

ಯಶ್ಚೈವಂ ಕುರುತೇ ನಿತ್ಯಂ ಯಥೋಕ್ತಂ ಧೂಪವಿಸ್ತರಂ ।
ಸ ಪುತ್ರವಾನರೋಗೀ ಚ ಮೃತಃ ಸಂಲೀಯತೇ ರವೌ ॥ ೪೮ ॥

ವಿಧಿನಾ ತು ಯಥೋಕ್ತೇನ ಕ್ರಿಯಮಾಣಾನಿ ಯತ್ನತಃ ।
ಸರ್ವಕರ್ಮಾಣಿ ಸಿದ್ಧ್ಯಂತಿ ಸಫಲಾನಿ ಭವಂತಿ ಚ ॥ ೪೯ ॥

ಪುಷ್ಪಶ್ರೇಷ್ಠಂ ಯದಾ ನಸ್ಯಾತ್ಪತ್ರಂ ಸಮುಪಹಾರಯೇತ್ ।
ಪತ್ರಂ ನ ಸ್ಯಾತ್ತತೋ ಧೂಪಂ ಧೂಪೋ ನ ಸ್ಯಾತ್ತತೋ ಜಲಂ ॥ ೫೦ ॥

---

೪೭. ಈ ರೀತಿ ಮೂರು ವೇಳೆಯೂ ಸ್ನಾನಮಾಡಿ ಶ್ರದ್ಧೆಯಿಂದ ಹಿಂದೆ ಹೇಳಿದ ಕ್ರಮದಂತೆ ಸೂರ್ಯನನ್ನು ಆರಾಧಿಸುವವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೪೮. ಪ್ರತಿನಿತ್ಯವೂ ಈ ರೀತಿ ದೇವತೆಗಳಿಗೆ ಧೂಪವನ್ನು ಹಾಕುವವನು ಪುತ್ರವಂತನಾಗಿಯೂ, ನೀರೋಗಿಯಾಗಿಯೂ ಇದ್ದು ಮೃತನಾದಮೇಲೆ ಸೂರ್ಯ ಪರಮಾತ್ಮನಲ್ಲಿ ಐಕ್ಯವಾಗುವನು.

೪೯. ಹಿಂದೆ ಹೇಳಿದಂತೆ ಕ್ರಮವಾಗಿ ಶ್ರದ್ಧೆಯಿಂದ ಸೂರ್ಯನೇ ಮೊದಲಾದ ದೇವತೆಗಳಿಗೆ ಧೂಪವೇ ಮೊದಲಾದವನ್ನು ಸಮರ್ಪಿಸಿ, ಪೂಜೆಮಾಡುವವರಿಗೆ ಸಕಲ ಕರ್ಮಗಳೂ ಸಿದ್ಧಿಸಿ ಸಫಲವಾಗುವುವು.

೫೦-೫೧. ಸೂರ್ಯನನ್ನು ಪೂಜಿಸಲು ಉತ್ತಮವಾದ ಪುಷ್ಪವು ದೊರೆಯದಿದ್ದರೆ ಪತ್ರೆಯನ್ನೇ ಪೂಜೆಮಾಡಬಹುದು. ಪತ್ರವಿಲ್ಲದಿದ್ದರೆ ಧೂಪವನ್ನೂ, ಧೂಪವೂ

ಪರ್ವಂ ನ ಸ್ಯಾತ್ತದಾ ಚೈವ ಪ್ರಣಿಪಾತೇನ ಪೂಜಯೇತ್ ।
ಅಶಕ್ತಃ ಪ್ರಣಿಪಾತೇಽಪಿ ಮನಸಾ ಪೂಜಯೇತ್ತತಃ ॥ ೫೧ ॥

ಅಸಂಭವೇ ತು ದ್ರವ್ಯಾಣಾಂ ವಿಧಿರೇಷಃ ಪ್ರಕೀರ್ತಿತಃ ।
ದ್ರವ್ಯಾಣಾಂ ಸಂಭವೇ ಚೈವ ಸರ್ವಮೇವೋಪಹಾರಯೇತ್ ॥ ೫೨ ॥

ಮಂತ್ರಾದ್ಯಾಃ ಕಥಿತಾ ಯೇ ತು ಪುಷ್ಪಧೂಪನಿವೇದನೇ ।
ವ್ಯಾಹಾರಾತ್ಸ್ಮರಣಾಚ್ಚೈವ ತೇಷಾಂ ಪ್ರೀತೋ ಭವೇದ್ರವಿಃ ॥ ೫೩ ॥

ಇತಿ ಶ್ರೀ ಸಾಂಬಪುರಾಣೇ ಷಟ್ತ್ರಿಂಶೋಽಧ್ಯಾಯಃ.

---

ಇಲ್ಲದಿದ್ದರೆ ಕೇವಲ ನಮಸ್ಕಾರದಿಂದಲೂ, ಪೂಜಿಸಬಹುದು. ನಮಸ್ಕಾರ ಮಾಡುವುದಕ್ಕೂ ಶಕ್ತಿಯಿಲ್ಲದವನು ಕೇವಲ ಮನಸ್ಸಿನಲ್ಲಿಯಾದರೂ ಧ್ಯಾನಮಾಡಬಹುದು.

೫೨. ಪೂಜಾದ್ರವ್ಯಗಳು ನಿಶ್ಚಯವಾಗಿಯೂ ಇಲ್ಲದಿರುವ ಸಮಯದಲ್ಲಿ ಈ ರೀತಿ ಮಾಡಬೇಕು. ಬೇಕಾದ ದ್ರವ್ಯಗಳಿದ್ದಾಗ ಮಾತ್ರ ಆ ರೀತಿ ಕೇವಲ ಮನಸಾ ಧ್ಯಾನ ಮಾಡಬಾರದು. ದ್ರವ್ಯಗಳನ್ನು ಒದಗಿಸಿಕೊಂಡು ಕ್ರಮವಾಗಿ ಸೂರ್ಯದೇವನನ್ನು ಆರಾಧಿಸಬೇಕು.

೫೩. ಸೂರ್ಯನಿಗೆ ಪುಷ್ಪಗಳೂ, ಧೂಪಗಳೂ, ಇವುಗಳನ್ನು ಸಮರ್ಪಣೆ ಮಾಡುವುದಕ್ಕೆ ಮಂತ್ರಗಳನ್ನೂ ಹೇಳಿಯಾಯಿತು. ಆ ಮಂತ್ರೋಚ್ಚಾರಣೆಯಿಂದಲೂ ಮತ್ತು ಸ್ಮರಣೆಯಿಂದಲೂ ಸಹ ಸೂರ್ಯನು ಪ್ರೀತಿಹೊಂದುವನು. ಎಂದು ವಸಿಷ್ಠ ಮಹರ್ಷಿಗಳು ಬೃಹದ್ಬಲನಿಗೆ ಸೂರ್ಯಪೂಜಾವಿಧಾನವನ್ನು ವಿವರಿಸಿ ಹೇಳಿದರು.

ಇಲ್ಲಿಗೆ ಸಾಂಬಪುರಾಣದಲ್ಲಿ ಮೂವತ್ತಾರನೆಯ
ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಸಪ್ತತ್ರಿಂಶೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ಅತೋಽಗ್ರೇ ಸಂಪ್ರವಕ್ಷ್ಯಾಮಿ ವಿಧಾನಮನುಪೂರ್ವಶಃ ।
ಧೂಪೋ ನಿವೇದ್ಯತೇ ಯೇನ ಆದಿತ್ಯಸ್ಯಾಗ್ನಿನಾ ಸದಾ ॥ ೧ ॥

ಶುಚಿರಗ್ನಿಃ ಸ್ಮೃತಃ ಸೂರ್ಯೋ ವಾಯುಸ್ತಸ್ಯ ಸುತಃ ಸ್ಮೃತಃ ।
ಅಸ್ಯಾಂತಸ್ಸ್ಥಃ ಸ ವೈ ಯಸ್ಮಾತ್ತತೋಽಸೌ ವಾಯುನಾಂತರಃ ॥ ೨ ॥

---

## ಮೂವತ್ತೇಳನೆಯ ಅಧ್ಯಾಯ.

೧. ಅಯ್ಯ ಬೃಹದ್ಬಲನೆ, ಇನ್ನು ಮುಂದೆ ಸೂರ್ಯನಿಗೆ ಅಗ್ನಿಯೊಡನೆ ಧೂಪವನ್ನು ನಿವೇದನಮಾಡುವ ವಿಧಿಯನ್ನು ಇನ್ನೂ ವಿವರವಾಗಿ ನಿನಗೆ ತಿಳಿಸುವೆನು ಕೇಳು, ಎಂದು ವಸಿಷ್ಠಮಹರ್ಷಿಯು ಇಂತೆಂದನು.

೨. ಅಗ್ನಿಗೆ ಶುಚಿ ಎಂದು ಹೆಸರಿದೆ. ಆ ಅಗ್ನಿಪುರುಷನು ವಾಯುಪುತ್ರನು. ವಾಯುವೇ ಸೂರ್ಯನು. ವಾಯುವಿನಿಂದಲೇ ಸೂರ್ಯನು ಹುಟ್ಟುವುದರಿಂದ ಬೆಂಕಿ ವಾಯುಗಳು ಪರಸ್ಪರ ಸಮೀಪದಲ್ಲಿಯೇ ಇದ್ದುಕೊಂಡು ಕಾರ್ಯವನ್ನು ನೆರವೇರಿಸುವರು. ಅಂದರೆ ಅಗ್ನಿವಾಯುಗಳು ಇಬ್ಬರೂ ಅನ್ಯೋನ್ಯವಾಗಿದ್ದೇ ಪ್ರಜ್ವಲಿಸುವರು.

ಅತೋಽಸ್ಯ ತೇಜ ಉತ್ಥಾಪ್ಯ ರವೇರ್ಧೂಪಂ ನಿವೇದಯೇತ್ ।
ತಮುತ್ಥಾಪ್ಯ ವಿಧಾನೇನ ಶುಚೌ ದೇಶೇ ನಿವೇಶ್ಯ ಚ ॥ ೩ ॥

ಮಂತ್ರೇಣ ತು ರವಿಂ ದೇವಂ ನಿತ್ಯಮೇವಂ ಪ್ರಸಾದಯೇತ್ ।
ಅರಣ್ಯಾಂ ತು ಶಮೀಮಯ್ಯಾಂ ಪಿಪ್ಪಲ್ಯಾಂ ಪುತ್ರಕಂ ರವೇಃ ॥ ೪ ॥

ನಿರ್ಮಥ್ಯ ತಂ ಸಮುತ್ಥಾಪ್ಯ ಧಮಯೇಧ್ಯಜನೇನ ತು ।
ಮೂರ್ತಿಮುಲ್ಲಿಖ್ಯ ದರ್ಭೇಣ ಹ್ಯಗ್ನಿಂ ಸಂಸ್ಥಾಪ್ಯ ಯತ್ನತಃ ॥ ೫ ॥

ತತಃ ಸ್ರುಚಂ ಸ್ರುವಂ ಚೈವ ಪ್ರಣೀತಾಮಾಜ್ಯಭಾಜನಂ ।
ಪ್ರಮೃಜ್ಯ ಸ್ಪರ್ಶಯೇದಗ್ನಿಂ ಕುಶೇನಾಗ್ನಿಂ ಚ ಸಂಸ್ಪೃಶೇತ್ ॥ ೬ ॥

---

೩. ಆದುದರಿಂದ ಅಗ್ನಿಪುರುಷನ ತೇಜಸ್ಸು ವಾಯುವಿನಿಂದ ಮೇಲೆ ಬರುವಂತೆ ಮಾಡಿ ಶುದ್ಧವಾದ ಸ್ಥಳದಲ್ಲಿ ಧೂಪವನ್ನು ಹಾಕಿ ಸೂರ್ಯನಿಗೆ ಸಮರ್ಪಿಸಬೇಕು. (ಅಂದರೆ ಅಗ್ನಿಗೆ ಧೂಪವನ್ನು ಹಾಕಿದರೆ ಆ ಧೂಪದ ಹೊಗೆಯು ಮೇಲಕ್ಕೆ ಬರುವಂತೆ ಸೂರ್ಯನ ಮುಂದುಗಡೆ ಶುದ್ಧವಾದ ಪ್ರದೇಶದಲ್ಲಿ ಗುಗ್ಗುಲಾದಿ ಧೂಪಗಳನ್ನು ಹಾಕಬೇಕು. ಎಂದು ತಾತ್ಪರ್ಯ)

೪-೫. ಹಿಂದೆ ಹೇಳಿದಂತೆ ಮಂತ್ರಪೂರ್ವಕವಾಗಿ ಸೂರ್ಯದೇವನನ್ನು ಸ್ತುತಿಸಿ ಸಂತೋಷಗೊಳಿಸಬೇಕು. ಬನ್ನೀಮರದ (ಅರಣಿ) ತುಂಡಿನಲ್ಲಾಗಲೀ ಅರಳೀಮರದ ಕೊಂಟಿನಲ್ಲಾಗಲೀ ಪುತ್ರನಾದ ಅಗ್ನಿಯನ್ನು ಕಡೆದು, ಅನಂತರ ಬೀಸಣಿಗೆಯಿಂದ ಬೀಸಿ ಪುಟ ಮಾಡಬೇಕು. ಆಮೇಲೆ ದರ್ಭೆಯಿಂದ ಸೂರ್ಯನ ಪ್ರತಿಮೆಯನ್ನು ಬರೆದು ಅಲ್ಲಿ ಪ್ರಯತ್ನಪೂರ್ವಕವಾಗಿ ಅಗ್ನಿಯನ್ನು ಪ್ರತಿಷ್ಠೆಮಾಡಬೇಕು.

೬. ಆಮೇಲೆ ಸ್ರುಕ್ ಸ್ರುವ ಎಂಬ ಹೋಮ ಸಾಧನಗಳನ್ನೂ ಪ್ರಣೀತಾಪಾತ್ರೆ ಮತ್ತು ಆಜ್ಯಪಾತ್ರೆ (ತುಪ್ಪದಪಾತ್ರೆ)ಗಳನ್ನೂ ದರ್ಭೆಯಿಂದ ಪರಿಶುದ್ಧಿಗೊಳಿಸಿ ದರ್ಭೆಯಿಂದಲೇ ಅಗ್ನಿಯನ್ನು ವೃದ್ಧಿಹೊಂದಿಸಬೇಕು.

ಕುಶಂ ಗೃಹ್ಯ ತು ಹಸ್ತಾಭ್ಯಾಮಾಜ್ಯಂ ಪ್ರಥಮಮುತ್ಸೃಜೇತ್ ।
ನಾಗ್ನಿಂ ಮುಖೇನೋಪಧಮೇನ್ನ ಚ ಪಾದೌ ಪ್ರತಾಪಯೇತ್ ॥ ೭ ॥

ಅಧಸ್ತಾನ್ನೋಪದಧ್ಯಾಚ್ಚ ನ ಚೈನಮಭಿಲಂಘಯೇತ್ ।
ಸುಸಮಿದ್ಧಂ ತತಃ ಕೃತ್ವಾ ಹೋಮಯೇಜ್ಜಾತವೇದಸಂ ॥ ೮ ॥

ಪ್ರಾದೇಶಮಾತ್ರಾಃ ಕರ್ತವ್ಯಾಃ ಸಮಿಧೋಽಥ ಪ್ರಮಾಣತಃ ।
ಪೃಥುಪ್ರಮಾಣಾ ಕರ್ತವ್ಯಾ ದೇವದಾರುಮಯೀ ತಥಾ ॥ ೯ ॥

ಅತಿಮಾತ್ರಾಸ್ತಥೇಧ್ಮಾಶ್ಚ ಕರ್ತವ್ಯಾಃ ಸ್ವಪ್ರಮಾಣತಃ ।
ಪಾಲಾಶೋಽರ್ಕಸ್ತ್ವಪಾಮಾರ್ಗಃ ಶಮ್ಯಶ್ವತ್ಥವಿಕಂಕತಃ ॥ ೧೦ ॥

---

೭-೮. ದರ್ಭೆಯನ್ನು ಕೈಯಿಂದ ಹಿಡಿದುಕೊಂಡು ತುಪ್ಪವನ್ನು ಮೊದಲು ಸಂಸ್ಕರಿಸಬೇಕು. ಅನಂತರ ಹೋಮಮಾಡಬೇಕು. ಅಗ್ನಿಯನ್ನು ಬಾಯಿಂದ ಊದಿ ಪ್ರಜ್ವಲಿಸುವಂತೆ ಮಾಡಬಾರದು. ಕಾಲುಗಳನ್ನು ಕಾಸಬಾರದು.

ಬೆಂಕಿ ಉರಿಯುವ ಸ್ಥಳದಲ್ಲಿ ಮತ್ತಾವ ಕಾರ್ಯವನ್ನೂ ಮಾಡಬಾರದು. ಮತ್ತು ಅಗ್ನಿಯನ್ನು ದಾಟಬಾರದು. ಅಗ್ನಿಯು ಚೆನ್ನಾಗಿ ಹುತವಾದ ಮೇಲೆ ಅದರಲ್ಲಿ ಹೋಮಮಾಡಬೇಕು.

೯. ಸಮಿತ್ತುಗಳನ್ನು ಒಂದು ಗೇಣುದ್ದ ಪ್ರಮಾಣಕ್ಕೆ ಸರಿಯಾಗಿ ಕತ್ತರಿಸಬೇಕು. ದೇವದಾರು ವೃಕ್ಷದ ಸಮಿತ್ತನ್ನು ಮಾತ್ರ ಸ್ವಲ್ಪ ದೊಡ್ಡದಾಗಿ ಮಾಡಿದ್ದರೂ ಬಾಧಕವಿಲ್ಲ.

೧೦-೧೧. ಸಮಿತ್ತುಗಳನ್ನು ತಮ್ಮ ಪ್ರಮಾಣಕ್ಕಿಂತಲೂ (ಒಂದು ಚೋಟಿಗಿಂತಲೂ) ಸ್ವಲ್ಪ ಹೆಚ್ಚು ಉದ್ದವಾಗಿ ಮಾಡಿರಬೇಕು. ಮುತ್ತುಗ, ಎಕ್ಕ, ಉತ್ತರಣಿ, ಬನ್ನಿ, ಅರಳೀ, ವಿಕಂಕತ (ವ್ಯಾಘ್ರಪಾದ ವೃಕ್ಷವೆಂದು ಹೇಳುವರು.) ಅತ್ತಿ

ಉದುಂಬರಸ್ತಥಾ ಬಿಲ್ವಃ ಚಂದನೋ ಯಜ್ಞಿಯಾಶ್ಚ ಯೇ ।
ಸರಲೋ ದೇವದಾರುಶ್ಚ ಶಾಲಶ್ಚ ಖದಿರಸ್ತಥಾ । ॥ ೧೧ ॥

ಸಮಿದರ್ಥೇ ಪ್ರಶಸ್ತಾಸ್ತು ವೃಕ್ಷಾಹ್ಯೇತೇ ಪ್ರಕೀರ್ತಿತಾಃ ।
ಶ್ಲೇಷ್ಮಾತಕೋ ನಕ್ತಮಾಲಃ ಕಪಿತ್ಥಃ ಶಾಲ್ಮಲೀ ತಥಾ ॥ ೧೨ ॥

ಬಿಲ್ವಜಃ ಕೋವಿದಾರಶ್ಚ ಕರಂಜಃ ಶಲ್ಲಕೀದ್ರುಮಃ ।
ಚಿರಬಿಲ್ವಸ್ತಥಾಕ್ರೋಟಃ ತಿಕ್ತಕಾವ್ರಾತಕೌ ತಥಾ ॥ ೧೩ ॥

ನಿಂಬೋ ವಿಭೀತಕಶ್ಚೈತೇ ಹೋಮಕರ್ಮಣಿ ಗರ್ಹಿತಾಃ ।
ಏವಂ ಸಮೇಧಿತಸ್ಯಾಗ್ನೇಃ ಸಮಂತಾತ್ಕುಶವಿಷ್ಟರಂ ॥ ೧೪ ॥

ದತ್ವಾ ಪ್ರಾಗುತ್ತಮಂ ತಂತುಂ ತತಸ್ತಂ ಪರಿಮಾರ್ಜಯೇತ್ ।
ಸಾವಿತ್ರೀ ಪರಿಪೂತೇನ ವಾರಿಣಾ ತ್ರಿಃ ಸಮಂತತಃ ॥ ೧೫ ॥

---

ಬಿಲ್ವಪತ್ರೆ, ಚಂದನ, ಯಜ್ಞಿಯ, ಸರಲ, ದೇವದಾರು, ಶಾಲ, ಮತ್ತು ಕಗ್ಗಲೀ ಈ ವೃಕ್ಷಗಳ ಸಮಿತ್ತುಗಳು ಶ್ರೇಷ್ಠವಾದವುಗಳೆಂದು ಹೇಳಲ್ಪಟ್ಟಿವೆ.

೧೨-೧೩. ಉದ್ದಾಲಕವೃಕ್ಷ, ಕರಂಜವೃಕ್ಷ, ಬೇಲದಮರ, ಬೂರುಗದಮರ ಕಿರುಬಿಲ್ವ, ಕೋವಿದಾರ, ಸಲ್ಲಕಿ, ಚಿರಬಿಲ್ವ, ಅಕ್ರೋಟಕವೃಕ್ಷ, ಹುಣಿಸೇಮರ, ಮತ್ತು ಅಮಟೇಮರ, ಬೇವಿನಮರ, ಕಲಿವೃಕ್ಷ, (ಭೂತಾವಾಸವೃಕ್ಷ) ಈ ಮರಗಳ ಸಮಿತ್ತುಗಳು ಹೋಮಕಾರ್ಯಕ್ಕೆ ಶ್ರೇಷ್ಠವಲ್ಲ.

೧೪-೧೫. ಹೀಗೆ ಪುಟಹಾಕಿರುವಾಗ ಅಗ್ನಿಯ ಸುತ್ತಲೂ ದರ್ಭೆಯಿಂದ ವಿಷ್ಟರವನ್ನು (ಪರಿಸ್ತರಣ) ಮಾಡಬೇಕು. ಅದು ಪೂರ್ವದಿಂದ ಶ್ರೇಷ್ಠವಾದ ದಾರವನ್ನಿಟ್ಟಂತೆ ತೋರಬೇಕು. ಅದನ್ನು ಗಾಯತ್ರೀ ಮಂತ್ರೋಚ್ಚಾರಣೆಯಿಂದ ಪರಿಶುದ್ಧವಾದ ನೀರಿನಿಂದ ಮೂರುಸಲ ಪ್ರೋಕ್ಷಿಸಬೇಕು.

ತತಃ ಕುಶಮಯಂ ಕೃತ್ವಾ ಹ್ಯಾತ್ಮನೋಽಥಾಂಗುಲೀಯಕಂ ।
ತತೋಽಗ್ನೇರ್ದಕ್ಷಿಣೇ ಪಾರ್ಶ್ವೇ ಕಲ್ಪಯೇದ್ಬ್ರಹ್ಮಣಸ್ತನುಂ ॥ ೧೬ ॥

ತತಃ ಸ್ರುಚಂ ಸ್ರುವಂ ಚೈವ ಪ್ರಣೀತಾಮಾಜ್ಯಭಾಜನಂ ।
ಪ್ರಕ್ಷಾಲ್ಯ ಸ್ಪರ್ಶಯೇದಗ್ನಿಂ ಸ್ರುವಂ ಚಾಜ್ಯೇನ ಸಂಸ್ಪೃಶೇತ್ ॥ ೧೭ ॥

ತತೋ ಭೂವೌ ನಿಷಣ್ಣೇನ ಜಾನುನಾ ಸುಸಮಾಹಿತಃ ।
ಪಾಣೀ ತು ಪುಟಕೌ ಕೃತ್ವಾ ಪ್ರಣಮೇಜ್ಜಾತವೇದಸಂ ॥ ೧೮ ॥

ಆಹ್ವಾನಂ ತು ತತಃ ಕೃತ್ವಾ ರವೇಸ್ತತ್ರ ಸಮಾಹಿತಃ ।
ಪುರಾಣೋಕ್ತೇನ ಮಂತ್ರೇಣ ಹ್ಯನೇನಾಥ ಕೃತಾಂಜಲಿಃ ॥ ೧೯ ॥

---

೧೬. ಅನಂತರ ತಾನೂ ದರ್ಭೆಯ ಪವಿತ್ರವನ್ನು ಕೈಯಲ್ಲಿ ಧರಿಸಿ, ಅಗ್ನಿ ಪುರುಷನಿಗೆ ದಕ್ಷಿಣದಿಕ್ಕಿನಲ್ಲಿ ಬ್ರಹ್ಮನ ಶರೀರವನ್ನು ಕಲ್ಪಿಸಬೇಕು. (ಅಂದರೆ ಬ್ರಹ್ಮನ ಸ್ಥಾನವನ್ನು ದಕ್ಷಿಣದಿಕ್ಕಿನಲ್ಲಿ ಏರ್ಪಡಿಸಬೇಕು.)

೧೭. ಆಮೇಲೆ ಸ್ರುಕ್, ಸ್ರುವ, ಆಜ್ಯಪಾತ್ರೆ, ಇವುಗಳನ್ನು ಸಂಸ್ಕರಿಸಿ, ಅಗ್ನಿಸ್ಪರ್ಶಮಾಡಿಸಿ, ಅನಂತರ ಸ್ರುವವನ್ನು ತುಪ್ಪದಿಂದ ತುಂಬಿದ ಪಾತ್ರೆಯಲ್ಲಿ ಸ್ಪರ್ಶಿಸಬೇಕು. ಅಂದರೆ ತುಪ್ಪದಿಂದ ಆ ಸ್ರುವವನ್ನು ಮುಟ್ಟಿಸಬೇಕು.

೧೮. ಅನಂತರ ನೆಲದಮೇಲೆ ಮೊಳಕಾಲುಗಳನ್ನೂರಿ ಕುಳಿತುಕೊಂಡು ಕೈಜೋಡಿಸಿ ಅಗ್ನಿಪುರುಷನಿಗೆ ಈ ರೀತಿ ನಮಸ್ಕಾರ ಮಾಡಬೇಕು.

೧೯-೨೧. ಆಮೇಲೆ, ನಿರ್ಮಲವಾದ ಅಂತಃಕರಣದಿಂದ, ಕೈ ಮುಗಿದು ಕೊಂಡು ಪುರಾಣೋಕ್ತವಾದ, " ನಮೋ ನಮೋ ಯೋ ಭವತೀಹ ಶಶ್ವದುತ್ತಿಷ್ಠ ಮಾನೋ ಜಗತೋ ಹಿತಾಯ । ಆವಾಹಯಾಮ್ಯದ್ಯ ತಮೀಶಮಾದ್ಯಂ ಕರೋತು ಸೋಗ್ನಾವಿಹ ಸಂನಿಧಾನಂ ". ॥ " ಏಹ್ಯೇಹಿ, ಸೂರ್ಯಾಕ್ಷಯ ವಿಶ್ವಮೂರ್ತೇ ಅಬಿಂಧನೋಗ್ನೇ ಶುಚಿನಾಮಧೇಯ । ಇಮಾಂ ಸ್ವಕೀಯಾಂ ತನುಮಾವಿಶಸ್ವ

ನಮೋನಮೋ ಭೋ ಭವತೀಹ ಶಶ್ವದುತ್ತಿಷ್ಠಮಾನೋ ।
ಜಗತೋ ಹಿತಾಯ ಆವಾಯಾಮ್ಯದ್ಯ ತಮೀಶಮಾದ್ಯಂ ॥
ಕರೋತು ಸೋऽಗ್ನಾವಿಹ ಸಂನಿಧಾನಂ ॥ ೨೦ ॥

ಏಹ್ಯೇಹಿ ಸೂರ್ಯ್ಯಾಕ್ಷಯ ವಿಶ್ವಮೂರ್ತೇ ಅಂಬಿಧನೋಗ್ನೇ
ಶುಚಿನಾಮಧೇಯ । ಇಮಾಂ ಸ್ವಕೀಯಾಂ ತನುಮಾವಿಶಸ್ವ
ಹವಿರ್ಹುತಂ ದೇವ ಮಯಾ ಸಮೀಕ್ಷ್ಯ ॥ ೨೧ ॥

ಏವಂ ಕೃತ್ವಾಗ್ನಿಸಂಸ್ಕಾರಂ ಸಾಹ್ವಾನಂ ಚ ದಿವಾಕರಂ ।
ತತೋ ವಿಜ್ಞಾಪಯೇದಗ್ನಿಂ ಋಚಮೇತಾಮುದಾಹರನ್ ॥ ೨೨ ॥

ಮಮಾಗ್ನೇರ್ವರ್ಚೋ ವಿಹವೇಷ್ವಸ್ತು ವಯಂತ್ವೇನ್ಧಾನಾಸ್ತನ್ವಂ ಪು
ಷೇಮ ಮಹ್ಯಂ ನಮಂತಾಂ ಪ್ರದಿಶಶ್ಚತಸ್ರಸ್ತ್ವಯಾಧ್ಯಕ್ಷೇಣ ಪೃತನಾ
ಜಯೇಮ ॥ ೨೩ ॥

---

ಹವಿರ್ಹುತಂ ದೇವ ಮಯಾ ಸಮೀಕ್ಷ್ಯ" ಎಂಬ ಮಂತ್ರದಿಂದ ಯಜ್ಞೇಶ್ವರನನ್ನು ಆವಾಹನೆ ಮಾಡಬೇಕು.

(ಜಗತ್ತಿನ ಸೃಷ್ಟಿರಕ್ಷಣೆಗಾಗಿ ಉದಯಾಸ್ತಗಳನ್ನು ಪಡೆಯುತ್ತಾ ಜಗತ್ತನ್ನೂ ರಕ್ಷಿಸುತ್ತಿರುವ ಸೂರ್ಯದೇವನಿಗೆ ವಂದನೆ. ಅಂತಹ ಸೂರ್ಯಪರಮಾತ್ಮನು ಈ ಅಗ್ನಿಯಲ್ಲಿ ಸನ್ನಿಧಿಯನ್ನು ಪಡೆಯಲಿ. ನಾಶರಹಿತನಾದ ವಿಶ್ವಮೂರ್ತಿಯೇ, ಜಲ ಭಕ್ಷಕನಾದ ಅಗ್ನಿರೂಪಿಯೇ, ನಿನ್ನ ನಿಜರೂಪವಾದ ಅಗ್ನಿ ಶರೀರವನ್ನು ಹೊಂದಿ ನಾನು ಕೊಡುವ ಹವಿಸ್ಸನ್ನು ಸ್ವೀಕರಿಸು ಎಂಬುದೇ ಈ ಮಂತ್ರದ ತಾತ್ಪರ್ಯ.)

೨೨-೨೪. ಈ ರೀತಿ ಅಗ್ನಿಸಂಸ್ಕಾರವನ್ನು ಮಾಡಿ ಸೂರ್ಯನನ್ನು ಆಹ್ವಾನ ಮಾಡಿ ಅನಂತರ, ಅಗ್ನಿದೇವನನ್ನು ಕುರಿತು, " ಮಮಾಗ್ನೇರ್ವರ್ಚೋ............ ಜಯೇಮ" || " ಉತ್ತಿಷ್ಠ ಪುರುಷರ್ಷಭ ...............ಸ್ವಾಹಾ " ಎಂಬ ಮಂತ್ರ ದಿಂದ, ಪ್ರಾರ್ಥಿಸಬೇಕು. "ಎಲೈ ಅಗ್ನಿರೂಪಿಯಾದ ಸೂರ್ಯನೇ, ಯಜ್ಞದಲ್ಲಿಯೂ ಅಥವಾ ರಣರಂಗದಲ್ಲಿಯೂ ನಿನ್ನ ಅನುಗ್ರಹದಿಂದ ನನಗೆ ವರ್ಚಸ್ಸು ವೃದ್ಧಿಹೊಂದಲಿ.

ಉತ್ತಿಷ್ಠ ಪುರುಷರ್ಷಭ ಹರಿಪಿಂಗಲ ದೀಪ್ತಜಿಹ್ವ ।
ಲೋಹಿತಾಕ್ಷ ದೇಹಿ ಮೇ ದದಾಮಿ ತೇ ಸ್ವಾಹಾ ॥ ೨೪ ॥

ತತಃ ಪರಮಗ್ನಿಹೋತ್ರಮಂತ್ರೇಣ ಮಾರ್ಗಮುಚ್ಚರನ್ ।
ಪರಮಾಹುತಿಂ ದದ್ಯಾದಾದಾಯ ಸ್ವಾಹಾ ॥ ೨೫ ॥

ತಥೈವ ಚ ಯಜ್ಞಆತ್ಮೀಯೇ ಮತ್ಸಿಷಾಸಹಿತಾಯ ಚ ।
ತತಃ ಪ್ರಾದೇಶಮಾತ್ರಾಭಿಃ ಪಾಲಾಶೀಭಿ ರ್ಯಥಾವಿಧಿ ॥ ೨೬ ॥

ದೇವದಾರುಮಯೀಭಿಶ್ಚ ಶಮೀಮಯೀಭಿರೇವ ಚ ।
ಸಮಿದ್ಭಿಶ್ಚ ಘೃತಾಕ್ತಾಭಿಃ ಹೋಮಯೇಜ್ಜಾತವೇದಸಂ ॥ ೨೭ ॥

ರತ್ನಿಮಾತ್ರಂ ಸ್ರುವಂ ಗೃಹ್ಯ ಘೃತೇನೈವ ತು ಹೋಮಯೇತ್ ।
ಅತಃ ಕ್ಷೀರೇಣ ಗನ್ಯೇನ ತತೋನ್ನೇನ ಚ ಹೋಮಯೇತ್ ॥ ೨೮ ॥

---

ನಿನ್ನ ಶರೀರವನ್ನು ನಾವು ಈ ಹವಿರ್ದ್ರವ್ಯಗಳಿಂದ ವೃದ್ಧಿಗೊಳಿಸುವೆವು. ನಿನ್ನ ಅನುಗ್ರಹದಿಂದ, ಸಕಲ ದಿಕ್ಕಿನಲ್ಲಿ ಇರುವವರೆಲ್ಲರೂ ನಮಗೆ ವಿಧೇಯರಾಗುವರು. ಶತ್ರುಸೈನ್ಯವನ್ನೆಲ್ಲಾ ನಿರಾಯಾಸವಾಗಿ ನಾವು ಜಯಿಸುವೆವು" ಎಂಬುದೇ ಆ ಮಂತ್ರಾರ್ಥ.

೨೫. ಆಮೇಲೆ ಅಗ್ನಿಹೋತ್ರ ಪ್ರಧಾನಹೋಮ ಮಂತ್ರದಿಂದ ಪರಮಾಹುತಿಯನ್ನು ಕೊಡಬೇಕು. ಮತ್ತು ಹೀಗೆ ಪ್ರಾರ್ಥನೆಮಾಡಬೇಕು.

೨೬-೨೭. ಅನಂತರ ಸೂರ್ಯಯಜ್ಞದಲ್ಲಿ ಕಾಂತಿಯುತವಾದ ಸೂರ್ಯನನ್ನುದ್ದೇಶಿಸಿ ಒಂದು ಪ್ರಾದೇಶಪ್ರಮಾಣವುಳ್ಳ ಮುತ್ತುಗದ ಮತ್ತು ದೇವದಾರು ಮರದ ಅಥವ ಬನ್ನೀ ಸಮಿತ್ತುಗಳನ್ನು ತುಪ್ಪದಿಂದ ನೆನಸಿ ಅಗ್ನಿಯಲ್ಲಿ ಹೋಮಮಾಡಬೇಕು.

೨೮. ಮುಷ್ಟಿಬದ್ಧವಾದ ಮೊಳದ ಪ್ರಮಾಣದಲ್ಲಿರುವ ಸ್ರುವದಿಂದ ಘೃತಹೋಮಮಾಡಬೇಕು. ಅನಂತರ ಹಸುವಿನ ಹಾಲು, ಸಂಸ್ಕೃತವಾದ ಚರು ಇವುಗಳ ಹೋಮವನ್ನೂ ನಡೆಸಬಹುದು.

ನವಾಭಿರೋಷಧೀಭಿಶ್ಚ ತಿಲವ್ರೀಹಿಯವೈಸ್ತಥಾ ।
ಶಾಲೀಫಲಕಶ್ಯಾಮಾಕೈರ್ಗೋಧೂಮೈಶ್ಚೈವ ಹೋಮಯೇತ್ ॥ ೨೯ ॥

ಪೌರ್ಣಮಾಸ್ಯಾಮಮಾಯಾಂ ವಾ ಹೋಮಯೇಚ್ಚ ವಿಶೇಷತಃ ।
ಚೈತ್ರ್ಯಾಂ ತಥಾಶ್ವಯುಜ್ಯಾಂ ವಾ ಕುರ್ಯಾದಗ್ನಿಂ ತಥಾ ಕ್ರಿಯಾಂ॥೩೦॥
ಬಹುದ್ರವ್ಯೇಂಧನೈಶ್ಚಾಗ್ನೌ ಸುಸಮಿದ್ಧೇ ವಿಶೇಷತಃ ।
ವಿಧೂಮೇ ಲೇಲಿಯಾನೇಚ ಹೋಮಯೇತ್ಕರ್ಮಸಿದ್ಧಯೇ ॥ ೩೧ ॥

ಅಪ್ರಬುದ್ಧೇ ಸಧೂಮೇ ವಾ ಜುಹುಯಾನ್ನಹುತಾಶನೇ ।
ಯಜಮಾನೋ ಭವೇದಂಧೋ ಹ್ಯಪುತ್ರ ಇತಿ ಚ ಶ್ರುತಿಃ ॥ ೩೨ ॥

ಅರ್ಚಿಷ್ಮಾನ್ಪಿಂಡಿತಶಿಖಃ ತಪ್ತಕಾಂಚನಸನ್ನಿಭಃ ।
ಸ್ನಿಗ್ಧಃ ಪ್ರದಕ್ಷಿಣಾವರ್ತೋ ವಹ್ನಿಃ ಸ್ಯಾತ್ಕರ್ಮಸಿದ್ಧಯೇ ॥ ೩೩ ॥

---

೨೯. ಒಣಗದಿರುವ ವನಸ್ಪತಿಗಳು, ಮತ್ತು ಎಳ್ಳು, ಅಕ್ಕಿ, ಬತ್ತ, ಸಾವೆ ಗೋಧಿ ಮುಂತಾದ ಈ ಧಾನ್ಯಗಳನ್ನು ಹೋಮ ಮಾಡಬೇಕು.

೩೦. ಪೂರ್ಣಿಮಾ ಅಥವ ಅಮಾವಾಸ್ಯೆ ಇವುಗಳಲ್ಲಿಯೂ ವಿಶೇಷವಾಗಿ ಚೈತ್ರ ಮತ್ತು ಆಶ್ವಯುಜ ಮಾಸಗಳಲ್ಲಿಯೂ ಅಗ್ನಿಯನ್ನು ಪ್ರತಿಷ್ಠೆಮಾಡಿ ತನ್ಮೂಲಕ ಸೂರ್ಯತೃಪ್ತ್ಯರ್ಥವಾದ ಹೋಮವನ್ನು ನೆರವೇರಿಸಬೇಕು. (ಹೋಮಾದಿಗಳನ್ನು ಮಾಡಲು ಆ ಕಾಲಗಳು ಶ್ರೇಷ್ಠವೆಂದು ತಿಳಿಯಬೇಕು.)

೩೧. ಅಗ್ನಿಯು ಪುಟವಾಗಿ ಹೊಗೆಯಿಲ್ಲದೆ ಜ್ವಾಲೆಯಿಂದ ಕೂಡಿರುವಾಗ ಅನೇಕ ದ್ರವ್ಯಗಳಿಂದಲೂ ಸೌದೆಗಳಿಂದಲೂ ಸ್ಪಷ್ಟವಾಗಿ ಪ್ರಜ್ವಲಿಸುವಂತೆ ಮಾಡಿ, ಆ ಅಗ್ನಿಯಲ್ಲಿ ಹೋಮಮಾಡಬೇಕು.

೩೨. ಬೆಂಕಿಯು ಚೆನ್ನಾಗಿ ಉರಿಯದೆ ಹೊಗೆಯಾಡುತ್ತಿರುವಾಗ ಹೋಮ ಮಾಡಬಾರದು. ಹೀಗೆಮಾಡಿದರೆ ಯಜಮಾನನು ಕುರುಡನಾಗುವನು. ಮತ್ತು ಪುತ್ರಹೀನನಾಗುವನು.

ನೈವಾಕಲ್ಯಾಣೀ ಯುವತಿರ್ನಾಲ್ಪವಿದ್ಯೋ ನ ಬಾಲಿಶಃ ।
ಹೋತಾ ಸ್ಯಾದಗ್ನಿಹೋತ್ರಸ್ಯ ನಾರ್ತೋ ನಾಸಂಸ್ಕೃತಸ್ತಥಾ ॥ ೩೪ ॥

ನರಕೇ ತು ಪತಂತ್ಯೇತೇ ಜುಹ್ವತಃ ಧನಕ್ಷಯಃ ।
ತಸ್ಮಾದ್ವೈ ಜ್ಞಾನಕುಶಲೋ ಹೋತಾ ಸ್ಯಾದ್ವೇದಪಾರಗಃ ॥ ೩೫ ॥

ಯತ್ಫಲಂ ಕರ್ಮಣಸ್ತಸ್ಯ ತತೋ ನಿಗದಿತಂ ಶೃಣು ।
ಅಧ್ಯಕ್ಷಃ ಸರ್ವಕಾಮೋಽಯಂ ಸೋಽಶ್ವಮೇಧಫಲಂ ಲಭೇತ್ ॥ ೩೬ ॥

---

೩೩. ಅಗ್ನಿಯು ಜ್ವಾಲೆಯಿಂದ ಸುತ್ತಲೂ ಹರಡಿಕೊಂಡು ಒಟ್ಟಿಗೆ ಕಾದ ಚಿನ್ನದಂತೆ ಬಣ್ಣವುಳ್ಳದ್ದಾಗಿ ಪ್ರದಕ್ಷಿಣಾಕಾರವಾಗಿ ಉರಿಯುತ್ತಿದ್ದಾಗ ಯಜಮಾನನು ಹೋಮಮಾಡಬೇಕು. ಅದರಿಂದ ಯಜಮಾನನ ಇಷ್ಟಸಿದ್ಧಿಯೊದಗುವುದು.

೩೪. ಅಮಂಗಳಸ್ವರೂಪಳಾದ ಸ್ತ್ರೀಯೂ, ಅಲ್ಪ ವಿದ್ಯೆಯುಳ್ಳ ಪುರುಷನೂ, ಮೂರ್ಖನಾದವನೂ ರೋಗಾದಿಗಳಿಂದ ಪೀಡಿತನಾದವನೂ ಗರ್ಭಾಧಾನಾದಿಷೋಡಶ ಕರ್ಮಗಳಿಂದ ಸಂಸ್ಕೃತ ನಲ್ಲದವನೂ ಸಹ ಅಗ್ನಿಯಲ್ಲಿ ಹೋಮಾದಿಗಳನ್ನು ಮಾಡಲು ಯೋಗ್ಯರಲ್ಲ.

೩೫. ಹೀಗೆ ಅಯೋಗ್ಯರಾದವರು ಹೋಮವನ್ನು ಮಾಡಿದರೆ ಅವರು ಇಹದಲ್ಲಿ ದ್ರವ್ಯನಾಶವನ್ನು ಹೊಂದಿ ಪರದಲ್ಲಿ ನರಕವನ್ನು ಹೊಂದುವರು. ಆದುದರಿಂದ ಹೋಮಮಾಡುವವನು ಜ್ಞಾನಿಯೂ, ವೇದಪಾರಂಗತನೂ ಆಗಿರಬೇಕು.

೩೬. ಹಿಂದೆ ಹೇಳಿದ ರೀತಿಯಿಂದ ಸೂರ್ಯದೇವನ ಪೂಜಾ ವಿಧಾನವನ್ನೂ ಅಗ್ನಿಮುಖ ಹೋಮಪ್ರಯೋಗವನ್ನೂ ಕ್ರಮವಾಗಿ ನಡೆಸಿದರೆ ಸಕಲ ಇಷ್ಟಾರ್ಥಗಳೂ ಉಂಟಾಗಿ ಅಶ್ವಮೇಧಯಾಗಮಾಡಿದ ಫಲವು ಲಭಿಸುವುದು. ಸರ್ವಕಾಮಾಧ್ಯಕ್ಷನಾಗುವನು. (ಎಂದರೆ ಅಪೇಕ್ಷಿಸಿದುದೆಲ್ಲವೂ ಸುಲಭವಾಗಿ ದೊರೆಯುವುವು.)

**ಇತಿ ಶ್ರೀ ಸಾಂಬಪುರಾಣೇ ಅಗ್ನಿವಿಧಾನಂ ನಾಮ ಸಪ್ತತ್ರಿಂಶೋಽಧ್ಯಾಯಃ.**

---

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಅಗ್ನಿವಿಧಿಯೆಂಬ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಸೂರ್ಯಾಯ ನಮಃ ॥

# ಅಥ ಶ್ರೀ ಸಾಂಬಪುರಾಣೇ ಅಷ್ಟತ್ರಿಂಶೋಽಧ್ಯಾಯಃ

---

॥ ವಸಿಷ್ಠ ಉವಾಚ ॥

ತತ್ತ್ರೇಽಹಂ ವರ್ಣಯಿಷ್ಯಾಮಿ ಸಾಂಬೇನ ಚ ಯಥಾ ಪುನಃ ।
ನಾರದಃ ಪರಮೋದಾರಃ ಪೃಷ್ಟೋಽಭೂತ್ಸಂಶಯಂ ಮಹತ್ ॥ ೧ ॥

॥ ಸಾಂಬ ಉವಾಚ ॥

ಶ್ರುತಾ ದಾರುಪರೀಕ್ಷಾ ಮೇ ಪ್ರತಿಮಾಲಕ್ಷಣಂ ತಥಾ ।
ದೇವಯಾತ್ರಾವಿಧಾನಂ ಚ ಹ್ಯಗ್ನಿಕಾರ್ಯವಿಧಿಸ್ತಥಾ ॥ ೨ ॥

---

## ಮೂವತ್ತೆಂಟನೆಯ ಅಧ್ಯಾಯ.

೧. ಅಯ್ಯ; ಬೃಹದ್ಬಲರಾಜನೇ, ಉದಾರ ಸ್ವಭಾವದವನಾದ ನಾರದಮಹರ್ಷಿಯನ್ನು ಕುರಿತು, ಸಾಂಬನು ಪ್ರಶ್ನೆಮಾಡಿದ ಮಹಾ ಸಂಶಯವನ್ನು ಈಗ ನಿನಗೆ ತಿಳಿಸುವೆನು ಕೇಳು ಎಂದು ವಸಿಷ್ಠಮಹರ್ಷಿಗಳು ಬೃಹದ್ಬಲನಿಗೆ ಹೇಳಿದರು.

೨-೫. ಎಲೈ ಬ್ರಾಹ್ಮಣೋತ್ತಮನಾದ ನಾರದನೆ; ಇಲ್ಲಿಯ ವರೆವಿಗೆ ಮರದ ಪರೀಕ್ಷೆ, ಪ್ರತಿಮೆಗಳ ಲಕ್ಷಣ, ದೇವರ ಯಾತ್ರಾವಿಧಾನ ಮತ್ತು ಅಗ್ನಿಕಾರ್ಯ ವಿಧಿ ಇವೆಲ್ಲವನ್ನೂ ನಾನು ನಿನ್ನಿಂದ ತಿಳಿದುಕೊಂಡೆನು. ಇನ್ನುಮುಂದೆ ನಾನು

ಅತಃ ಪರಂ ತು ವಿಪ್ರೇಂದ್ರ ಪ್ರಬ್ರೂಹಿ ಮಮ ಪೃಚ್ಛತಃ ।
ದೇವಪೂಜಾಫಲಂ ಯಚ್ಚ ಯಚ್ಚ ದಾನಫಲಂ ಭವೇತ್ ॥ ೩ ॥

ಪ್ರಣಿಪಾತೇ ನಮಸ್ಕಾರೇ ತಥಾ ಚೈವ ಪ್ರದಕ್ಷಿಣೇ ।
ಧೂಪದೀಪಪ್ರದಾನೇ ಚ ಸಂಮಾರ್ಜನವಿಧೌ ಚ ಯತ್ ॥ ೪ ॥

ಉಪವಾಸೇ ಚ ಯತ್ಪ್ರೋಕ್ತಂ ಯತ್ಫಲಂ ನಕ್ತಭೋಜನಂ ।
ಅರ್ಘಶ್ಚ ಕೀದೃಶಃ ಪ್ರೋಕ್ತಃ ಕುತ್ರ ವಾಸಂ ಪ್ರದೀಯತೇ ॥ ೫ ॥
ಕಥಂ ಚ ಕ್ರಿಯತೇ ಭಕ್ತಿಃ ಕಥಂ ದೇವಃ ಪ್ರಸೀದತಿ ।

॥ ನಾರದ ಉವಾಚ ॥

ಭಕ್ತಿಂ ಶ್ರದ್ಧಾಂ ಸಮಾಧಿಂ ಚ ಕಥ್ಯಮಾನಂ ನಿಬೋಧ ಮೇ ॥ ೬ ॥

---

ಕೇಳುವ ಈ ಕೆಲವು ಪ್ರಶ್ನೆಗಳಿಗೆ ಉತ್ತರ ಕೊಡಬೇಕು ಎಂದು ಪ್ರಾರ್ಥಿಸುತ್ತಾ ಸಾಂಬನು ಹೀಗೆಂದನು.

"ಅಯ್ಯಾ ಮಹರ್ಷಿಯೇ; ದೇವಪೂಜೆಯನ್ನು ನೆರವೇರಿಸುವುದರಿಂದ ಲಭಿಸುವ ಫಲವಾವುದು ? ದಾನಮಾಡುವುದರಿಂದ ಯಾವಫಲ ಲಭಿಸುವುದು ? ದೇವರಿಗೆ ಮಾಡುವ ಪ್ರದಕ್ಷಿಣೆ ನಮಸ್ಕಾರದಿಂದಲೂ, ಧೂಪ, ದೀಪ ಇವುಗಳನ್ನು ಹತ್ತಿಸಿಡುವುದರಿಂದಲೂ ದೇವಾಲಯವನ್ನು ಸಾರಿಸುವುದು ಮತ್ತು ಗುಡಿಸುವುದು ಇವುಗಳಿಂದಲೂ ಸಹ ಉಂಟಾಗುವ ಪ್ರಯೋಜನವೇನು ? ಸೂರ್ಯದೇವನನ್ನು ಉದ್ದೇಶಿಸಿ ಉಪವಾಸ ವ್ರತ ಮಾಡುವುದರಿಂದಲೂ ರಾತ್ರಿ ಮಾತ್ರ ಊಟ ಮಾಡುವುದರಿಂದಲೂ, ಲಭಿಸುವ ಸುಕೃತವಾವುದು ? ಆ ಸೂರ್ಯದೇವನಿಗೆ ಅರ್ಘ್ಯವನ್ನು ಯಾವ ರೀತಿ ಕೊಡಬೇಕು ? ಆ ದೇವಾಲಯವನ್ನು ಎಲ್ಲಿ ಸ್ಥಾಪಿಸಬೇಕು ? ಹೀಗೆ ನಿರ್ಮಿಸಿ ಪ್ರತಿಷ್ಠೆಮಾಡಿದ ಆ ಸೂರ್ಯದೇವನಲ್ಲಿ ಯಾವ ರೀತಿ ಭಕ್ತಿಯನ್ನು ತೋರಿಸಬೇಕು ? ಹೇಗೆ ಮಾಡಿದರೆ ಆ ದೇವನು ಪ್ರಸನ್ನನಾಗುವನು ? ಇವೆಲ್ಲವನ್ನೂ ದಯವಿಟ್ಟು ನನಗೆ ತಿಳಿಸಬೇಕೆಂದು ಬೇಡಿಕೊಂಡನು.

೬. ಎಲೈ ಸಾಂಬನೆ; ಭಕ್ತಿ, ಶ್ರದ್ಧೆ, ಮತ್ತು ಸಮಾಧಿ ಇವುಗಳ ಸ್ವರೂಪವೇನೆಂಬುದನ್ನು ಹೇಳುವೆನು ಕೇಳು. ಎಂದು ನಾರದರು ಸಾಂಬನನ್ನು ಕುರಿತು ಇಂತೆಂದರು.

ಮನಸೋ ಭಾವನಾ ಭಕ್ತಿರಿಚ್ಛಾ ಶ್ರದ್ಧಾ ಚ ಕಥ್ಯತೇ ।
ಧ್ಯಾನಂ ಸಮಾಧಿರಿತ್ಯುಕ್ತಂ ಶೃಣು ಭಕ್ತಿವಿಕಲ್ಪನಾಂ ॥ ೭ ॥

ತತ್ಕಥಾಯಾಂ ರಮೇದ್ಯಸ್ತು ಸ ವೈ ಭಕ್ತಃ ಸನಾತನಃ ।
ನಿತ್ಯಂ ತು ತನ್ಮನಾಶ್ಚೈವ ದೇವಪೂಜಾರತಃ ಸದಾ ॥ ೮ ॥

ತತ್ಕರ್ಮಕೃದ್ಭವೇದ್ಯಸ್ತು ಸ ವೈ ಭಕ್ತಃ ಸನಾತನಃ ।
ದೇವಾರ್ಥಂ ಕ್ರಿಯಮಾಣಾನಿ ಯಃ ಕರ್ಮಾಣ್ಯನುಮನ್ಯತೇ ॥ ೯ ॥

ಕೀರ್ತನಾದ್ಬಾಷ್ಪರೋಮಾಂಚೀ ಸ ವೈ ಭಕ್ತತರೋ ನರಃ ।
ನಾಭ್ಯಸೂಯೇಚ್ಚ ತದ್ಭಕ್ತಂ ನ ನಿಂದ್ಯಾಚ್ಚಾನ್ಯದೇವತಾಃ ॥ ೧೦ ॥

---

೭. ಅಯ್ಯಾ ಸಾಂಬನೆ; ಮನಸ್ಸಿನ ಸ್ಥಿರಭಾವನೆಯೇ ಭಕ್ತಿ ಯೆನಿಸುವುದು. ಮಾಡುವ ಕರ್ಮದಲ್ಲಿ ಉಂಟಾಗುವ ಅಪೇಕ್ಷೆಯೇ ಶ್ರದ್ಧೆಯು; ಧ್ಯಾನವೇ ಸಮಾಧಿ; ಈ ರೀತಿ ಭಕ್ತಿ, ಶ್ರದ್ಧಾ ಮತ್ತು ಸಮಾಧಿಗಳ ಲಕ್ಷಣಗಳನ್ನು ತಿಳಿದುಕೊ, ಈಗ ಭಕ್ತಿಯ ವಿಭಾಗಗಳನ್ನು ತಿಳಿಸುವೆನು ಕೇಳು.

೮. ಮನಃ ಪೂರ್ವಕವಾಗಿ ಯಾವಾಗಲೂ ಆ ಸೂರ್ಯ ದೇವನನ್ನು ಆರಾಧಿಸುತ್ತಾ ಅವನ ಸಂಬಂಧವಾದ ಕಥೆಗಳಲ್ಲಿಯೂ ಪುರಾಣವಾಚನ ವೊದಲಾದುವುಗಳಲ್ಲಿಯೂ ಆಸಕ್ತಿಯುಳ್ಳ ಮನುಜನು ಶ್ರೇಷ್ಠನಾದ ಭಕ್ತನೆನಿಸುವನು.

೯. ಸೂರ್ಯದೇವನ ಪೂಜೆಗೋಸ್ಕರ ಮಾಡುವ ಕಾರ್ಯಗಳಲ್ಲಿ ಯಾವಾಗಲೂ ಆಸಕ್ತಿಯುಳ್ಳವನಾಗಿ ಆ ಪೂಜಾಕರ್ಮವು ಸಾಂಗವಾಗಿ ನಡೆಯುವಂತೆ ಪ್ರೋತ್ಸಾಹಮಾಡುವವನೂ ಉತ್ತಮನಾದ ಭಕ್ತನೆನಿಸುವನು.

೧೦-೧೧. ಮತ್ತು ಸೂರ್ಯದೇವನ ಕಥೆಯನ್ನು ಕೇಳಿದ ಮಾತ್ರದಿಂದಲೇ ಆನಂದಬಾಷ್ಪವುಳ್ಳವನಾಗಿ ರೋಮಾಂಚವನ್ನು ಹೊಂದುವವನೂ ಸಹ ಸೂರ್ಯಭಕ್ತನೆಂದೇ ತಿಳಿಯಬೇಕು.

ಆದಿತ್ಯವ್ರತಧಾರೀ ಚ ಸ ವೈ ಭಕ್ತತರೋ ನರಃ ।
ಏವಂವಿಧಕ್ರಿಯಾಭಕ್ತಿಃ ಸದಾ ಕಾರ್ಯಾ ವಿಜಾನತಾ ॥ ೧೧ ॥

ಗಚ್ಛಂಸ್ತಿಷ್ಠಸ್ಸ್ವಪಞ್ಜಿಘ್ರನ್ನಶ್ನಂಶ್ಚಾನಿಮಿಷಂಸ್ತಥಾ ।
ಯಃ ಸ್ಮರೇದ್ಭಾಸ್ಕರಂ ನಿತ್ಯಂ ಸ ವೈ ಭಕ್ತತರೋ ನರಃ ॥ ೧೨ ॥

ಭಕ್ತ್ಯಾ ಸಮಾಧಿನಾ ಚೈವ ಶುದ್ಧೇನ ಮನಸಾ ತಥಾ ।
ಕ್ರಿಯತೇ ನಿಯಮೋ ಯಸ್ತು ಧ್ಯಾನಂ ವಾ ಯತ್ಪ್ರದೀಯತೇ ॥ ೧೩ ॥

ಪ್ರತಿಗೃಹ್ಣಂತಿ ತದ್ದೇವಾ ಮನುಷ್ಯಾಃ ಪಿತರಸ್ತಥಾ ।

---

ಸೂರ್ಯಭಕ್ತನಲ್ಲಿ ಅಸೂಯೆಪಡದೆ ಸೂರ್ಯಾತಿರಿಕ್ತ ದೇವತೆಗಳನ್ನು ನಮಸ್ಕರಿಸುವುದರಲ್ಲಿ ಅಪೇಕ್ಷೆಯಿಲ್ಲದವನಾಗಿ ಯಾವಾಗಲೂ ಸೂರ್ಯವ್ರತವನ್ನು ಪಾಲಿಸುತ ಇರುವ ಮನುಷ್ಯನು ಅತ್ಯಂತ ಶ್ರೇಷ್ಠನಾದ ಭಕ್ತನೆನಿಸುವನು.

ಆದುದರಿಂದ ಜ್ಞಾನಿಗಳು ಈ ರೀತಿ ಸೂರ್ಯದೇವನ ವಿಷಯದಲ್ಲಿ ಯಾವಾಗಲೂ ತಮ್ಮ ಭಕ್ತಿಯನ್ನು ತೋರಿಸುತ್ತಾ ಸೇವೆಮಾಡಬೇಕು.

೧೨. ಸಂಚರಿಸುವಾಗಲೂ, ನಿಂತುಕೊಂಡಿರುವಾಗಲೂ, ಮಲಗಿ ನಿದ್ರಿಸುವಾಗಲೂ, ಪದಾರ್ಥಗಳ ವಾಸನೆಯನ್ನು ಅನುಭವಿಸುವಾಗಲೂ, ಊಟಮಾಡುವಾಗಲೂ, ಪ್ರತಿಯೊಂದು ನಿಮಿಷದಲ್ಲಿಯೂ ಎಡಬಿಡದೆ ಸೂರ್ಯಭಗವಂತನನ್ನು ಸ್ಮರಣೆ ಮಾಡುವ ಮಾನವನು ಭಕ್ತಶ್ರೇಷ್ಠನೆನಿಸುವನು.

೧೩. ಭಕ್ತಿಯಿಂದಲೂ ಧ್ಯಾನದಿಂದಲೂ ಮತ್ತು ಪರಿಶುದ್ಧವಾದ ಮನಸ್ಸಿನಿಂದಲೂ ಸಹ ಆಚರಿಸುವ ನಿಯಮ (ವ್ರತ) ಮತ್ತು ದಾನ ಇವುಗಳನ್ನು, ದೇವತೆಗಳೂ ಮನುಷ್ಯರೂ ಮತ್ತು ಪಿತೃದೇವತೆಗಳೂ ಸಹ ಸಂತೋಷದಿಂದ ಸ್ವೀಕರಿಸುವರು.

೧೪. ಭಕ್ತಿಯಿಂದ ಸಮರ್ಪಿಸಿದ ಪತ್ರೆ, ಹೂವು, ಹಣ್ಣು ಮತ್ತು ನೀರು ಇವೇ ಮೊದಲಾದ ಎಲ್ಲಾ ಪದಾರ್ಥಗಳನ್ನೂ ದೇವತೆಗಳು ಸ್ವೀಕರಿಸುವರು. ಆದರೆ

ಪತ್ರಂ ಪುಷ್ಪಂ ಫಲಂ ತೋಯಂ ಭಕ್ತ್ಯಾ ಯತ್ಸಮುಪಾಹೃತಂ ॥ ೧೪ ॥

ಪ್ರತಿಗೃಹ್ಣಂತಿ ತದ್ದೇವಾ ನಾಸ್ತಿಕಾನ್ವರ್ಜಯಂತಿ ಚ ।
ಭಾವಶುದ್ಧಿಃ ಪ್ರಯೋಕ್ತವ್ಯಾ ನಿಯಮಾಚಾರಸಂಯುತಾ ॥ ೧೫ ॥

ಭಾವಶುದ್ಧ್ಯಾ ಕೃತಂ ಯಚ್ಚ ತತ್ಸರ್ವಂ ಸಫಲಂ ಭವೇತ್ ।
ಸ್ತುತಿಜಾಪ್ಯೋಪಹಾರೇಣ ಪೂಜಯಾ ಚ ವಿವಸ್ವತಃ ॥ ೧೬ ॥

ಉಪವಾಸೇನ ಷಷ್ಠ್ಯಾಂ ಚ ಸರ್ವಪಾಪೈಃ ಪ್ರಮುಚ್ಯತೇ ।
ಪ್ರಣಿಧಾಯ ಶಿರೋ ಭೂಮ್ಯಾಂ ನಮಸ್ಕಾರಂ ಕರೋತಿ ಯಃ ॥ ೧೭ ॥

---

ಮಾತ್ರ ನಾವು ಸಮರ್ಪಿಸುವ ಪದಾರ್ಥವು ಯೋಗ್ಯವಾಗಿ ಆಸ್ತಿಕ ಬುದ್ಧಿಯಿಂದ ಕೂಡಿರಬೇಕು; ಅಲ್ಲದೇ ಸಿಕ್ಕಿದ ಪದಾರ್ಥಗಳೆಲ್ಲವನ್ನೂ ಅಂದರೆ ವಿಧಿಚೋದಿತವಲ್ಲದ ವಸ್ತುಗಳ ಸಮರ್ಪಣೆಮಾಡಿದರೆ ಆಗ ದೇವತೆಗಳು ಅದನ್ನು ಎಂದಿಗೂ ಸ್ವೀಕರಿಸುವುದಿಲ್ಲ.

೧೫. ಪೂಜೆಮಾಡುವವನು ನಿಯಮ, ಆಚಾರ ಇವುಗಳಿಗೊಳಪಟ್ಟವನಾಗಿ ಶುದ್ಧವಾದ ಮನಸ್ಸಿನಿಂದ ತಾನು ಮಾಡುವ ಕರ್ಮವನ್ನು ನಡೆಸಬೇಕು. ಹೀಗೆ ಪರಿಶುದ್ಧವಾದ ಭಾವದಿಂದ ಮಾಡಿದ ಕರ್ಮವೇ ಸಫಲವಾಗುವುದು. ಸಾರ್ಥಕವಾಗುವುದು. ಭಾವಶುದ್ಧಿಯಿಲ್ಲದೇ ನಿಯಮಾಚಾರಗಳನ್ನು ತೊರೆದು, ಆಡಂಬರಕ್ಕೋಸ್ಕರ ಮಾಡುವ ದೈವಪೂಜೆಯು ಎಂದಿಗೂ ಸಾರ್ಥಕವಾಗಲಾರದೆಂದು ತಿಳಿಯಬೇಕು.

೧೬. ಯಾವಾಗಲೂ ಸೂರ್ಯನ ಸ್ಮರಣೆ, ಜಪ, ಮಿತವಾದ ಆಹಾರಸೇವನೆ, ಇವುಗಳಿಂದ ಸೂರ್ಯನನ್ನು ಭಕ್ತಿಯಿಂದ ಪೂಜಿಸುತ್ತಾ ಷಷ್ಠೀದಿವಸ ವಿಶೇಷವಾಗಿ ಆಹಾರವೇನನ್ನೂ ತೆಗೆದುಕೊಳ್ಳದೆ ಉಪವಾಸದಿಂದಿದ್ದು ಸಪ್ತಮೀ ತಿಥಿಯಲ್ಲಾರಾಧಿಸುವವನಸಕಲ ಪಾಪಗಳೂ ನಾಶವಾಗುವುವು.

೧೭. ಸೂರ್ಯದೇವನನ್ನು ಉದ್ದೇಶಿಸಿ ಭೂಮಿಯಮೇಲೆ ತಲೆಯನ್ನಿರಿಸಿ ನಮಸ್ಕಾರ ಮಾಡಿದರೆ (ದೀರ್ಘದಂಡ ನಮಸ್ಕಾರ ಮಾಡಿದರೆ,) ಆ ಕ್ಷಣದಲ್ಲಿಯೇ ನಮಸ್ಕಾರ ಮಾಡಿದವನ ಸಕಲ ಪಾಪಗಳೂ ಸಂಶಯವಿಲ್ಲದೇ ನಾಶವಾಗುವುವು.

ತತ್ಕ್ಷಣಾತ್ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ಭಕ್ತಿಯುಕ್ತೋ ನರೋ ಯಸ್ತು ರವೇಃ ಕುರ್ಯಾತ್ಪ್ರದಕ್ಷಿಣಾಂ ॥೧೮॥

ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ।
ಸೂರ್ಯಂ ಮನಸಿ ಯಃ ಕೃತ್ವಾ ಕುರ್ಯಾದ್ವಾ ಚ ಪ್ರದಕ್ಷಿಣಾಂ ॥ ೧೯ ॥

ಪ್ರದಕ್ಷಿಣೀಕೃತಾಸ್ತೇನ ಸರ್ವೇ ದೇವಾ ಭವಂತಿ ಹಿ ।
ಏಕಾಹಾರಪರೋ ಭೂತ್ವಾ ಷಷ್ಠ್ಯಾಂ ಯೋಽರ್ಚಯತೇ ರವಿಂ ॥ ೨೦ ॥

ನಿಯಮವ್ರತಧಾರೀ ಚ ರವೇರ್ಭಕ್ತಿಸಮನ್ವಿತಃ ।
ಸಪ್ತಮ್ಯಾಂ ಚ ಮಹಾಭಾಗ ಸೋಽಶ್ವಮೇಧಫಲಂ ಲಭೇತ್ ॥ ೨೧ ॥

---

೧೮. ಭಕ್ತಿಯಿಂದ ಸೂರ್ಯದೇವನಿಗೆ ಪ್ರದಕ್ಷಿಣೆಮಾಡಿದರೆ, " ಜಂಬೂ, ಪ್ಲಕ್ಷ ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ, " ಎಂಬ ಸಪ್ತದ್ವೀಪಗಳನ್ನೊಳಗೊಂಡ ಭೂಮಿಯನ್ನೇ ಪ್ರದಕ್ಷಿಣೆ ಮಾಡಿದಂತಾಗುವುದು.

೧೯. ಸೂರ್ಯದೇವನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಆ ದೇವನನ್ನು ನಮಸ್ಕಾರ ಮಾಡಿದವನು ,ಸಕಲ ದೇವತೆಗಳನ್ನು ಪ್ರದಕ್ಷಿಣೆ ಮಾಡಿದಂತೆಯೇ ಆಗುವುದು. (ಸೂರ್ಯನು ಸಕಲ ದೇವತಾ ಸ್ವರೂಪನಾದುದರಿಂದ ಅವನೊಬ್ಬನಿಗೆ ನಮಸ್ಕಾರ ಮಾಡಿದರೇ ಎಲ್ಲಾ ದೇವತೆಗಳನ್ನು ನಮಸ್ಕರಿಸಿದ ಫಲವುಂಟಾಗುವುದೆಂದು ಭಾವ.)

೨೦-೨೧. ಎಲೈ ಮಹಾಪುರುಷನಾದ ಸಾಂಬನೆ, ಒಂದೇಹೊತ್ತು ಆಹಾರ ತೆಗೆದುಕೊಂಡು ನಿಯಮದಿಂದ ಷಷ್ಠೀದಿವಸ ಸೂರ್ಯದೇವನನ್ನು ಪೂಜಿಸಿ, ಹಾಗೆಯೆ ಸಪ್ತಮಿಯದಿನವೂ ಒಂದೇಹೊತ್ತಿನ ಆಹಾರ ನಿಯಮದಿಂದ ಕೂಡಿದವನಾಗಿ ಭಕ್ತಿ ನಿಯಮಗಳಿಂದ ಸೂರ್ಯದೇವನನ್ನು ಪೂಜಿಸುವ ಮನುಜನೂ ಸಹ, ಅಶ್ವಮೇಧ ಯಾಗ ಮಾಡಿರುವುದರಿಂದುಂಟಾಗುವ ಫಲವನ್ನು ಪಡೆಯುತ್ತಾನೆ.

ಅಹೋರಾತ್ರೋಪವಾಸೇನ ಪೂಜಯೇದ್ಯಸ್ತು ಭಾಸ್ಕರಂ ।
ಸಪ್ತಮ್ಯಾಮಥ ಷಷ್ಠ್ಯಾಂ ಚ ಸೂರ್ಯಲೋಕಂ ಸ ಗಚ್ಛತಿ ॥ ೨೨ ॥

ಶುಕ್ಲಪಕ್ಷಸ್ಯ ಸಪ್ತಮ್ಯಾಮುಪವಾಸಪರೋ ನರಃ ।
ಸ್ವರಕ್ತೋಪಹಾರೇಣ ಪೂಜಯೇದ್ಯಸ್ತು ಭಾಸ್ಕರಂ ॥ ೨೩ ॥

ಸರ್ವಪಾಪವಿನಿರ್ಮುಕ್ತಸ್ಸೂರ್ಯಲೋಕಂ ಸ ಗಚ್ಛತಿ ।
ಅರ್ಕಸಂಪುಟಸಂಯೋಜ್ಯಮುದಕಪ್ರಸೃತಿಂ ಪಿಬೇತ್ ॥ ೨೪ ॥

ಕ್ರಮವೃದ್ಧ್ಯಾ ಚತುರ್ವಿಂಶದೇಕೈಕಂ ಜಾಪಯೇತ್ಪುನಃ ।
ದ್ವಾಭ್ಯಾಂ ಸಂವತ್ಸರಾಭ್ಯಾಂ ತು ಸಮಾಪ್ತನಿಯಮೋ ಭವೇತ್ ॥ ೨೫ ॥

---

೨೨. ಷಷ್ಠೀ ಮತ್ತು ಸಪ್ತಮೀ ತಿಥಿಗಳಲ್ಲಿ ಹಗಲು ರಾತ್ರಿಗಳೆರಡುಹೊತ್ತೂ ಉಪವಾಸವಿದ್ದು ಸೂರ್ಯದೇವನನ್ನು ಪೂಜೆಮಾಡುವವನು ಸೂರ್ಯಲೋಕವನ್ನೇ ಸೇರುವನು.

೨೩. ಶುಕ್ಲಪಕ್ಷದ ಸಪ್ತಮಿಯದಿನ ಉಪವಾಸದಿಂದಿದ್ದು ಸೂರ್ಯದೇವನಿಗೆ ಇಷ್ಟವಾದ ನೈವೇದ್ಯಗಳಿಂದಲೂ, ಇತರ ಪೂಜಾರ್ಹವಾದ ರಕ್ತವರ್ಣದ ಸಲಕರಣೆಗಳಿಂದಲೂ ಸಹ ಆ ಸೂರ್ಯದೇವನನ್ನು ಭಕ್ತಿಯಿಂದ ಪೂಜಿಸುವ ಮನುಜನು ಸಕಲ ಪಾಪಗಳನ್ನೂ ಕಳೆದುಕೊಂಡು ಕೊನೆಗೆ ಸೂರ್ಯಲೋಕವನ್ನು ಪಡೆಯುವನು.

೨೪-೨೫. ಹೀಗೆ ಶುಕ್ಲಪಕ್ಷದ ಸಪ್ತಮಿಯದಿವಸ ಸೂರ್ಯದೇವನನ್ನು ಪೂಜಿಸುತ್ತಾ, ಆ ದೇವನಿಗೆ ಅಭಿಷೇಕ ಮಾಡಿದ ಸೂರ್ಯಸಂಪುಟದ ಸಂಬಂಧವಾದ, ಒಂದುಬೊಗಸೆ ನೀರನ್ನು ಮಾತ್ರ ಸೂರ್ಯಮಂತ್ರವನ್ನುಚ್ಚರಿಸುತ್ತಾ ಕುಡಿಯಬೇಕು. ಹೀಗೆ ಒಂದು ಸಪ್ತಮಿಗೆ ಒಂದು ಬೊಗಸೆಯಂತೆ (24) ಇಪ್ಪತ್ತನಾಲ್ಕು ಸಪ್ತಮಿಗಳು ಸಂಖ್ಯಾವೃದ್ಧಿಯಿಂದ ಪಾನಮಾಡಬೇಕು. ಹೀಗೆ ಮಾಡಿದರೆ ಎರಡು ವರ್ಷಗಳಲ್ಲಿ ಇಪ್ಪತ್ತುನಾಲ್ಕುಬೊಗಸೆ ನೀರು ದೊರೆಯುವುದು. ಆಗ ಸೂರ್ಯ ವ್ರತನಿಯಮವು ಮುಗಿಯುವುದು.(ಶುಕ್ಲಪಕ್ಷದ ಸಪ್ತಮಿಯು ವರ್ಷಕ್ಕೆ ಹನ್ನೆರಡು ಬರುವುದು. ಎರಡುವರ್ಷಕ್ಕೆ ಇಪ್ಪತ್ತುನಾಲ್ಕು ಸಪ್ತಮಿಗಳು ಬರುವುವು. ಅಷ್ಟು ಕಾಲಕ್ಕೆ ಈ ನಿಯಮವೂ ಮುಗಿಯುವುದು.) ಇದೊಂದು ಆದಿತ್ಯವ್ರತದ ನಿಯಮವೆಂದು ತಿಳಿಯಬೇಕು.

ಸರ್ವಕಾಮಪ್ರದಾ ಹ್ಯೇಷಾ ಪ್ರಸಿದ್ಧಾರ್ಕಸ್ಯ ಸಪ್ತಮೀ ।
ಮಾಘಶುಕ್ಲಸ್ಯ ಸಪ್ತಮ್ಯಾಂ ಸದಾದಿತ್ಯದಿನಂ ಭವೇತ್ ॥ ೨೬ ॥

ಸಪ್ತಮೀ ವಿಜಯಾ ನಾಮ ತತ್ರ ದತ್ತಂ ಮಹತ್ಫಲಂ ।
ಸ್ನಾನಂ ದಾನಂ ಜಪೋ ಹೋಮ ಉಪವಾಸಸ್ತಥೈವ ಚ ॥ ೨೭ ॥

ಸರ್ವಂ ವಿಜಯಸಪ್ತಮ್ಯಾಂ ಮಹಾಪಾತಕನಾಶನಂ ।
ಯೇ ತ್ವಾದಿತ್ಯದಿನೇ ಪ್ರಾಪ್ತೇ ಶ್ರಾದ್ಧಂ ಕುರ್ವಂತಿ ಮಾನವಾಃ ॥ ೨೮ ॥

ಜಪಂತಿ ಚ ಮಹಾಶ್ವೇತಾಂ ತೇ ಲಭಂತೇ ಯಥೇಪ್ಸಿತಂ ।
ಯೇಷಾಂ ಧರ್ಮಕ್ರಿಯಾಃ ಸರ್ವಾಃ ಸದೈವೋದ್ದಿಶ್ಯ ಭಾಸ್ಕರಂ ॥ ೨೯ ॥

---

೨೬-೨೭. ಮಾಘಶುಕ್ಲಸಪ್ತಮಿಯ ತಿಥಿಯು ಸೂರ್ಯನಿಗೆ ಪ್ರೀತಿ ಪಾತ್ರವಾದ ದಿನವೆಂದು ತಿಳಿಯಬೇಕು. ಈ ಮಾಘಶುಕ್ಲ ಸಪ್ತಮಿಗೆ ವಿಜಯಾಸಪ್ತಮೀ ಎಂದು ಹೆಸರುಂಟು. ವಿಜಯ ಸಪ್ತಮಿಯ ದಿನದಲ್ಲಿ ಸೂರ್ಯಪ್ರೀತ್ಯರ್ಥವಾಗಿ ಕೊಡುವ ಪದಾರ್ಥಗಳೆಲ್ಲವೂ ವಿಶೇಷ ಫಲ ಪ್ರದವಾದವುಗಳು. ಅಲ್ಲದೇ ಆ ದಿವಸ ಮಾಡುವ ಸ್ನಾನ, ದಾನ, ಜಪ, ಹೋಮ ಮತ್ತು ಉಪವಾಸ ಮೊದಲಾದ ಇವೆಲ್ಲವೂ, ಯಜಮಾನನ ಬ್ರಹ್ಮಹತ್ಯವೇ ಮೊದಲಾದ ಮಹಾಪಾಪಗಳನ್ನು ಧ್ವಂಸಮಾಡುವುವು.

೨೮. ಈ ಆದಿತ್ಯದಿನದಲ್ಲಿ ಅಂದರೆ ಮಾಘಶುಕ್ಲ ಸಪ್ತಮಿಯ ದಿನ ಶ್ರಾದ್ಧ ಮಾಡುವ ಮಾನವರೂ, ಮಹಾ ಶ್ವೇತೆಯನ್ನು ಧ್ಯಾನ ಮಾಡುವವರೂ, ಸಹ ತಮ್ಮ ಇಷ್ಟಾರ್ಥಗಳನ್ನೆಲ್ಲಾ ಪಡೆಯುವರು.

೨೯. ಯಾವಾಗಲೂ ಸೂರ್ಯನನ್ನೇ ಉದ್ದೇಶಿಸಿ ಸಕಲ ಧರ್ಮಕಾರ್ಯಗಳನ್ನೂ ಮಾಡುವವರ ವಂಶದಲ್ಲಿ ಹುಟ್ಟುವವರೆಲ್ಲರೂ ದಾರಿದ್ರ್ಯ ಮತ್ತು ರೋಗಇವುಗಳಿಗೆ ಗುರಿಯಾಗದೆ ಸುಖವಾಗಿ ಜೀವಿಸುವರು.

ನ ಕುಲೇ ಜಾಯತೇ ತೇಷಾಂ ದರಿದ್ರೋ ವ್ಯಾಧಿತೋಽಪಿ ವಾ ।
ಶ್ವೇತಯಾ ರಕ್ತಯಾ ವಾಪಿ ಪೀತಮೃತ್ತಿಕಯಾಪಿ ವಾ ॥ ೩೦ ॥

ಉಪಲೇಪನಕರ್ತಾ ಚ ಚಿಂತಿತಂ ಲಭತೇ ಸುಖಂ ।
ಚಿತ್ರಭಾನುಂ ವಿಚಿತ್ರೈಶ್ಚ ಕುಸುಮೈಸ್ತು ಸುಗಂಧಿಭಿಃ ॥ ೩೧ ॥

ಪೂಜಯೇತ್ಸೋಪವಾಸೋ ಯಃ ಸ ಕಾಮಾನೀಪ್ಸಿತಾನ್ಲಭೇತ್ ।
ಘೃತೇನ ದೀಪಂ ಪ್ರಜ್ವಾಲ್ಯ ತಿಲತೈಲೇನ ವಾ ಪುನಃ ॥ ೩೨ ॥

ದೀರ್ಘಾಯುರ್ವಪುಷಾ ಯುಕ್ತಶ್ಚಕ್ಷುಷಾ ನ ಚ ಹೀಯತೇ ।
ದೀಪದಾನಾನ್ನರೋ ನಿತ್ಯಂ ಜ್ಞಾನದೀಪೇನ ದೀಪ್ಯತೇ ॥ ೩೩ ॥

---

೩೦. ಬಿಳಿಯದು, ಕೆಂಪು ಅಥವಾ ಹೊಂಬಣ್ಣದ ಮಣ್ಣಿನಿಂದ ಸೂರ್ಯದೇವನ ದೇವಾಲಯವನ್ನು ಉಪಲೇಪನ ಮಾಡಿಸುವವನು ಅಂದರೆ ಅಲಂಕರಿಸುವವನು ತಾನು ಅಪೇಕ್ಷಿಸಿದ ಸುಖವನ್ನೆಲ್ಲಾ ಪಡೆಯುವನು.

೩೧. ಬಣ್ಣಬಣ್ಣವಾದ ಮತ್ತು ಸುವಾಸನೆಯಿಂದ ಕೂಡಿದ ಅನೇಕ ಪುಷ್ಪಗಳಿಂದ ಕೂಡಿ ಉಪವಾಸವ್ರತದಲ್ಲಿದ್ದು ಚಿತ್ರಭಾನುವನ್ನು (ಸೂರ್ಯನನ್ನು) ಪೂಜಿಸುವ ಮಾನವನು ತನಗೆ ಇಷ್ಟವಾದ ಮನೋರಥಗಳನ್ನೆಲ್ಲಾ ಪಡೆಯುವನು.

೩೨. ತುಪ್ಪದಿಂದಲಾಗಲೀ ಅಥವಾ ಎಳ್ಳಿನ ಎಣ್ಣೆಯಿಂದಾಗಲೀ ಸೂರ್ಯದೇವನಿಗೆ ದೀಪವನ್ನು ಹತ್ತಿಸಿ ದೀಪಾರಾಧನೆ ಮಾಡಿದವನು ದೀರ್ಘಾಯುಸ್ಸನ್ನು ಹೊಂದಿ ದೃಢವಾದ ಶರೀರವುಳ್ಳವನಾಗಿ ನೇತ್ರ ಸಂಬಂಧವಾದ ರೋಗಗಳಿಗಾವುದಕ್ಕೂ ಗುರಿಯಾಗದೆ ಸುಖದಿಂದ ಬಾಳುವನು.

೩೩. ಸೂರ್ಯದೇವನನ್ನು ಉದ್ದೇಶಿಸಿ ನಿತ್ಯವೂ ಸತ್ಪಾತ್ರನಿಗೆ ದೀಪ ದಾನ ಮಾಡುವ ಮನುಷ್ಯನು ಜ್ಞಾನ ದೀಪದಿಂದ ಪ್ರಜ್ವಲಿಸುವನು. (ಜ್ಞಾನಿಯಾಗುವನು) ಮತ್ತು ಆವನು, ಬುದ್ಧಿ, ಇಂದ್ರಿಯ ಇವುಗಳನ್ನು ಯಾವಾಗಲೂ ದುಷ್ಟಮಾರ್ಗಕ್ಕೆ ಹೋಗದಂತೆ ತಡೆಯುವನು. (ಅಂದರೆ ಅವನಿಗೆ ಇಂದ್ರಿಯ ವೈಕಲ್ಯವಾಗಲೀ, ಬುದ್ಧಿ ಭ್ರಮಣೆಯಾಗಲೀ ಉಂಟಾಗುವುದಿಲ್ಲ.)

ಸ ಚ ಬುದ್ಧೀಂದ್ರಿಯೈಶ್ಚಾಪಿ ನ ಕದಾಚಿದ್ವಿಮುಚ್ಯತಿ ।
ತಿಲಾಃ ಪವಿತ್ರಂ ಪರಮಂ ತಿಲದಾನಮನುತ್ತಮಂ ॥ ೩೪ ॥

ಅಗ್ನಿಕಾರ್ಯೇ ಚ ದೀಪೇ ಚ ಮಹಾಪಾತಕನಾಶನಂ ।
ದೀಪಂ ದದಾತಿ ಯೋ ನಿತ್ಯಂ ದೇವಸ್ಯಾಯತನೇಷು ಚ ॥ ೩೫ ॥

ಚತುಷ್ಪಥೇಷು ರಥ್ಯಾಸು ರೂಪವಾನ್ಸುಭಗೋ ಭವೇತ್ ।
ಹವಿಷಾ ಪ್ರಥಮೋ ಕಲ್ಪೋ ದ್ವಿತೀಯಸ್ತ್ವೌಷಧೀರಸಃ ॥ ೩೬ ॥

ವಸಾಮೇದೋಽಸ್ಥಿನಿರ್ಯಾಸಾನ್ನ ತು ದೇಯಂ ಕಥಂಚನ ।
ಭವತ್ಯೂರ್ಧ್ವಗತಿರ್ದೀಪೋ ನ ಕದಾಚಿದಧೋಗತಿಃ ॥ ೩೭ ॥

---

೩೪. ಎಳ್ಳು ಪರಮಪವಿತ್ರವಾದುದು. ಈ ಎಳ್ಳುದಾನವು ವಿಶೇಷ ಪುಣ್ಯ ಪ್ರದವಾದುದು. ಅಗ್ನಿಕಾರ್ಯದಲ್ಲಿಯಾಗಲೀ, ದೀಪವನ್ನು ಉರಿಸುವುದರಲ್ಲಿಯಾಗಲೀ ಎಳ್ಳನ್ನು ಉಪಯೋಗಿಸುವುದರಿಂದ ಅವನ ಸಮಸ್ತ ಪಾಪವೂ ಸಹ ನಾಶವಾಗುವುದು.

೩೫. ದೇವಾಲಯ, ನಾಲ್ಕು ಬೀದಿಗಳು ಸೇರುವ ಚೌಕಗಳು ಮತ್ತು ರಸ್ತೆಗಳು ಇವುಗಳಲ್ಲಿ ದೀಪಗಳನ್ನಿಡಿಸುವವನು, ರೂಪವಂತನೂ ಸೌಭಾಗ್ಯವಂತನೂ ಆಗುವನು.

೩೬. ಅಗ್ನಿಕಾರ್ಯದಲ್ಲಿ, ಸೂರ್ಯದೇವನ ಪ್ರೀತ್ಯರ್ಥವಾಗಿ ಹೋಮಮಾಡುವಾಗ ಹವಿಸ್ಸಿನಿಂದ ಹೋಮಮಾಡುವುದು ಮೊದಲನೆಯ ಕಲ್ಪವು; ವನಸ್ಪತಿಗಳ ರಸಗಳಿಂದ ಹೋಮಮಾಡುವುದು ಎರಡನೆಯ ಕಲ್ಪ. ಆದರೆ, ವಪೆ, ಮೇದಸ್ಸು (ಕೊಬ್ಬು) ಮೂಳೆ ಮತ್ತು ಮಾಂಸ ಮೊದಲಾದುವುಗಳನ್ನು ಅಗ್ನಿಯಲ್ಲಿ ಸೂರ್ಯೋದ್ದೇಶಕವಾಗಿ ಯಾವ ಪ್ರಕಾರದಿಂದಲೂ ಹೋಮಮಾಡಬಾರದು.

೩೭-೩೮. ದೇವಾಲಯ ಮೊದಲಾದ ಸ್ಥಳಗಳಲ್ಲಿ ದೀಪವನ್ನು ಸ್ಥಾಪಿಸುವುದರಿಂದ ಊರ್ಧ್ವಗತಿಯುಂಟಾಗುವುದೇ ಹೊರತು ಎಂದಿಗೂ ಅಧೋಗತಿ ಬರ

ದಾನಂ ದೀಪಸ್ಯ ಚಾಪ್ಯೇವಂ ನ ತಿರ್ಯಗ್ಗತಿಮಾಪ್ನುಯಾತ್ ।
ಜ್ವಲಮಾನಂ ಸದಾ ದೀಪಂ ನ ಹರೇನ್ನಾಪಿ ನಾಶಯೇತ್ ॥ ೩೮ ॥

ದೀಪಹರ್ತಾ ಭವೇದಂಧಸ್ತಮೋಗತಿರಸುಪ್ರಭಃ ।
ದೀಪದಾತಾ ಸ್ವರ್ಗಲೋಕೇ ದೀಪಮಾಲೇವ ರಾಜತೇ ॥ ೩೯ ॥

ಯಃ ಸದಾರ್ಚಯತೇ ಸೂರ್ಯಂ ಚಂದನಾಗುರುಕುಂಕುಮೈಃ ।
ಸ ಪೂಜ್ಯತೇ ನರೋ ನಿತ್ಯಂ ಧನೇನ ಯಶಸಾ ಶ್ರಿಯಾ ॥ ೪೦ ॥

ರಕ್ತಚಂದನಮಿಶ್ರೈಸ್ತು ರಕ್ತಪುಷ್ಪೈಃ ಶುಚಿರ್ನರಃ ।
ಉದಯೇಽರ್ಘ್ಯಂ ಸದಾ ದತ್ವಾ ಸಿದ್ಧಿಂ ಸಂವತ್ಸರಾಲ್ಲಭೇತ್ ॥ ೪೧ ॥

---

ಲಾರದು. ಏಕೆಂದರೆ ದೀಪದ ಉರಿಯು ಎಂದಿಗೂ ಅಧೋಭಾಗಕ್ಕೆ ಬರಲಾರದು. ಹೀಗೆಯೇ ದೀಪದಾನವನ್ನು ಮಾಡಿದರೂ ಅವನು ತಿರ್ಯಕ್ಪ್ರಾಣಿಗಳ ಗತಿಯನ್ನು (ಸದ್ಗತಿಯಿಲ್ಲದ ಇತರ ಗತಿಗಳನ್ನು) ಪಡೆಯುವುದಿಲ್ಲ. ಯಾವಾಗಲೂ ಉರಿಯುತ್ತಿರುವ ದೀಪವನ್ನು ಅಪಹರಿಸುವುದಾಗಲೀ ಆರಿಸುವುದಾಗಲೀ ಮಾಡಬಾರದು.

೩೯. ದೀಪವನ್ನು ಅಪಹರಿಸುವವನು ಕುರುಡನಾಗಿ ಕಾಂತಿ ಹೀನನಾಗುವನು. ದೀಪದಾನ ಮಾಡುವವನು ಸ್ವರ್ಗಲೋಕವನ್ನು ಹೊಂದಿ ಅಲ್ಲಿ ದೀಪಗಳ ಸಮೂಹದಂತೆಯೇ ತೇಜಸ್ವಿಯಾಗಿ ಪ್ರಕಾಶಿಸುವನು.

೪೦. ಸೂರ್ಯದೇವನನ್ನು ಯಾವಾಗಲೂ ಚಂದನ, ಅಗುರು ಮತ್ತು ಕುಂಕುಮ ಇವುಗಳಿಂದ ಪೂಜಿಸುವವನು ಐಶ್ವರ್ಯವನ್ನೂ ಕೀರ್ತಿಯನ್ನೂ ಸಹ ಪಡೆದು ಎಲ್ಲರಿಗೂ ಪೂಜ್ಯನೆನಿಸುವನು.

೪೧. ಮಾನವನು ಶುಚಿಯಾಗಿ ಕೆಂಪುಚಂದನ ಮಿಶ್ರಿತವಾದ ಹೂಗಳಿಂದ ಸೂರ್ಯ ದೇವನಿಗೆ ಉದಯ ಕಾಲದಲ್ಲಿ ನಿತ್ಯವೂ ಅರ್ಘ್ಯವನ್ನು ಒಂದು ವರ್ಷದವರೆವಿಗೆ ಕೊಟ್ಟರೆ ಅವನಿಗೆ ಸರ್ವ ಸಿದ್ಧಿಯುಂಟಾಗುವುದು.

ಉದಯಾತ್ಪರಿವರ್ತಂ ತು ಯಾವದಸ್ತಮನಸ್ಥಿತಿಃ ।
ಜಪನ್ನಭಿಮುಖಃ ಕಿಂಚಿನ್ಮಂತ್ರಂ ಸ್ತೋತ್ರಮಥಾಪಿ ವಾ ॥ ೪೨ ॥

ಆದಿತ್ಯವ್ರತಮೇತತ್ತು ಮಹಾಪಾತಕನಾಶನಂ ।
ಅರ್ಘ್ಯೇಣ ಸಹಿತಾಂ ಚೈವ ಸವತ್ಸಾಂ ಗಾಂ ಪ್ರದಾಪಯೇತ್ ।
ಉದಯೇ ಶ್ರದ್ಧಯಾ ಯುಕ್ತಃ ಸರ್ವಪಾಪೈಃ ಪ್ರಮುಚ್ಯತೇ ॥ ೪೩ ॥

ಸುವರ್ಣಧೇನ್ವನಡ್ವಾಹಂ ವಸುಧಾಂ ವಸ್ತ್ರಸಂಯುತಾಂ ।
ಅರ್ಘ್ಯಂ ಪ್ರದಾಯ ಲಭತೇ ಸದಾ ಜನ್ಮಾನುಗಂ ಫಲಂ ॥ ೪೪ ॥

ಅಗ್ನೌ ತೋಯೇ ಚಾಂತರಿಕ್ಷೇ ಶುಚೌ ಭೂಮ್ಯಾಂ ತಥೈವ ಚ ।
ಪ್ರತಿಮಾಯಾಂ ತಥಾ ಪಿಂಡ್ಯಾಂ ದದ್ಯಾದರ್ಘ್ಯಂ ಪ್ರಯತ್ನತಃ ॥ ೪೫ ॥

---

೪೨. ಸೂರ್ಯೋದಯದಿಂದ ಸೂರ್ಯನು ಮುಳುಗುವವರೆವಿಗೂ, ಸೂರ್ಯದೇವತಾಕವಾದ ಮಂತ್ರವನ್ನೋ ಅಥವಾ ಸ್ತೋತ್ರವೇ ಮೊದಲಾದುವುಗಳನ್ನೋ ಜಪಿಸುತ್ತಾ ಆ ಸೂರ್ಯದೇವನಿಗೆ ಅಭಿಮುಖವಾಗಿ ನಿಂತು ಧ್ಯಾನಮಾಡುವುದೇ ಆದಿತ್ಯಪ್ರೀತಿಕರವಾದ ಮಹಾ ವ್ರತವು. ಇದು ಬ್ರಹ್ಮಹತ್ಯಾದಿ ಮಹಾ ಪಾತಕಗಳನ್ನೂ ಸಹ ನಾಶಪಡಿಸುವುದು.

೪೩. ಉದಯಕಾಲದಲ್ಲಿ ಸೂರ್ಯದೇವನಿಗೆ ಅರ್ಘ್ಯವನ್ನು ಕೊಟ್ಟು ಅನಂತರ ಕರುವಿನೊಡಗೂಡಿದ ಕರೆಯುವ ಹಸುವನ್ನು ಶ್ರದ್ಧೆಯಿಂದ ದಾನಮಾಡಿದರೆ ಸಕಲ ಪಾಪಗಳೂ ತೊಲಗುವುವು.

೪೪. ಚಿನ್ನ, ಹಸು, ಎತ್ತು, ಭೂಮಿ ಇವುಗಳನ್ನು ವಸ್ತ್ರ ಸಮೇತವಾಗಿ ಸೂರ್ಯನಿಗೆ ಅರ್ಘ್ಯರೂಪವಾಗಿ ಕೊಟ್ಟು ಅನಂತರ ಆ ಸೂರ್ಯದೇವನಿಗೆ ಪ್ರೀತ್ಯರ್ಥವಾಗಿ ಅವುಗಳನ್ನು ದಾನಮಾಡಿದರೆ, ಒಳ್ಳೆಯ ಜನ್ಮವನ್ನು ಪಡೆದು ಅದಕ್ಕೆ ಯೋಗ್ಯವಾದ ಫಲಗಳೆಲ್ಲವನ್ನೂ ನಿಶ್ಚಯವಾಗಿಯೂ ಪಡೆಯುವನು.

೪೫. ಅಗ್ನಿಯಲ್ಲಿಯೂ, ನೀರಿನಲ್ಲಿಯೂ, ಅಂತರಿಕ್ಷದಲ್ಲಿಯೂ, ಶುಚಿಯಾದ ಭೂಮಿಯಲ್ಲಿಯೂ, ಪ್ರತಿಮೆಯಲ್ಲಿಯೂ ಅಥವಾ ಅರ್ಘ್ಯಪಾತ್ರೆಯಲ್ಲಿಯೂ ಸಹ ಪ್ರಯತ್ನಪೂರ್ವಕವಾಗಿ ನಿಯಮದಿಂದ ಸೂರ್ಯದೇವನಿಗೆ ಅರ್ಘ್ಯವನ್ನು ಕೊಡಬೇಕು.

ನಾಪಸವ್ಯಂ ನ ವಾ ಸವ್ಯಂ ದದ್ಯಾದಭಿಮುಖಃ ಸದಾ ।
ಸ ಘೃತಂ ಗುಗ್ಗುಲಂ ದಗ್ಧ್ವಾ ರವೇರ್ಭಕ್ತಿಸಮನ್ವಿತಃ ॥ ೪೬ ॥

ತತ್ಕ್ಷಣಾತ್ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ಶ್ರೀವಾಸಕೇತುರುಷ್ಕಾಣಾಂ ದೇವದಾರೋಸ್ತಥೈವ ಚ ।
ಕರ್ಪೂರಾಗುರುಧೂಪಾನಾಂ ದಾತಾರಃ ಸ್ವರ್ಗಗಾಮಿನಃ ॥ ೪೭ ॥

ಅಯನೇ ಹ್ಯುತ್ತರೇ ಸೂರ್ಯಮಥವಾ ದಕ್ಷಿಣಾಯನೇ ।
ಪೂಜಯಿತ್ವಾ ವಿಶೇಷೇಣ ಸರ್ವಪಾಪೈಃ ಪ್ರಮುಚ್ಯತೇ ॥ ೪೮ ॥

ವಿಷುವೇಷೂಪರಾಗೇಷು ಷಡಶೀತಿಮುಖೇಷು ಚ ।
ಪೂಜಯಿತ್ವಾ ರವಿಂ ಭಕ್ತ್ಯಾ ನಾತ್ಮಾನಂ ಶೋಚಯೇತ್ಪುನಃ ॥ ೪೯ ॥

---

೪೬. ಅರ್ಘ್ಯವನ್ನು ಕೊಡುವಾಗ ಸೂರ್ಯನಿಗೆ ಎಡ ಬಲಭಾಗದಲ್ಲಿ ನಿಂತು ಎಂದಿಗೂ ಕೊಡಬಾರದು. ಯಾವಾಗಲೂ ಸೂರ್ಯನಿಗೆ ಅಭಿಮುಖವಾಗಿಯೇ ಅರ್ಘ್ಯವನ್ನು ಸಮರ್ಪಿಸಬೇಕು. ಸೂರ್ಯನಿಗೆ ಭಕ್ತಿಯಿಂದ ತುಪ್ಪದಲ್ಲಿ ನೆನಸಿದ ಗುಗ್ಗುಲ ಧೂಪವನ್ನು ಹಾಕುವವನು, ಮರುಕ್ಷಣದಲ್ಲಿಯೇ ಸಕಲ ಪಾಪಗಳಿಂದಲೂ ಮುಕ್ತನಾಗುವನು.

೪೭. ಶ್ರೀಗಂಧ, ಹಾಲುಮಡ್ಡೀ, ಸಾಮ್ರಾಣಿ, ದೇವದಾರು, ಪಚ್ಚಕರ್ಪೂರ ಮತ್ತು ಅಗುರು ಇವುಗಳ ಧೂಪಗಳನ್ನು ಸೂರ್ಯದೇವನ ಪ್ರೀತ್ಯರ್ಥವಾಗಿ ಹಾಕುವವರು ಸ್ವರ್ಗಲೋಕವನ್ನು ಹೊಂದುವರು.

೪೮. ಉತ್ತರಾಯಣ ಅಥವಾ ದಕ್ಷಿಣಾಯನ ದಿನಗಳಲ್ಲಿ ಸೂರ್ಯದೇವನನ್ನು ವಿಶೇಷವಾಗಿ ಭಕ್ತಿಯಿಂದ ಪೂಜಿಸುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು.

೪೯. ವಿಷುವತ್ಪುಣ್ಯಕಾಲಗಳಲ್ಲಿಯೂ (ಮೇಷ ಮತ್ತು ತುಲಾಸಂಕ್ರಮಣ ದಿನಗಳಲ್ಲಿ) ಗ್ರಹಣವೊದಲಾದ ಸಮಯದಲ್ಲಿಯೂ ಮತ್ತು ಷಡಶೀತಿ ನೊದಲಾದ ಪುಣ್ಯದಿನಗಳಲ್ಲಿಯೂ (ಮಿಥುನಾ, ಕನ್ಯಾ, ಧನುಸ್ಸು, ಮೀನಸಂಕ್ರಮಣದಿನದಲ್ಲಿ) ಸೂರ್ಯನನ್ನು ಭಕ್ತಿಯಿಂದ ಆರಾಧಿಸುವವನು ಯಾವಾಗಲೂ ದುಃಖಗಳಿಗೊಳಗಾಗದೇ ಸುಖವಾಗಿರುವನು.

ಏವಂ ವೇಲಾಸು ಸರ್ವಾಸು ತ್ವವೇಲಾಸು ಚ ಮಾನವಃ ।
ಭಕ್ತ್ಯಾ ಪೂಜಯತೇ ಯೋಽರ್ಕಂ ಸೋಽರ್ಕಲೋಕೇ ಮಹೀಯತೇ ॥

ಕೃಸರೈಃ ಪಾಯಸಾಪೂಪೈಃ ಫಲಲೋನ್ಮಿಶ್ರಿತೋದನೈಃ ।
ಬಲಿಂ ದತ್ವಾ ತು ಸೂರ್ಯಾಯ ಸರ್ವಕಾಮಮವಾಪ್ನುಯಾತ್ ॥ ೫೧ ॥

ಘೃತೇನ ತರ್ಪಣಂ ಕೃತ್ವಾ ಕಾರ್ಯಸಿದ್ಧೋ ಭವೇನ್ನರಃ ।
ಕ್ಷೀರೇಣ ತರ್ಪಣಂ ಕೃತ್ವಾ ಮನಸ್ತಾಪೈರ್ನ ಯುಜ್ಯತೇ ॥ ೫೨ ॥

ದಧ್ನಾ ತು ತರ್ಪಣಂ ಕೃತ್ವಾ ಕಾರ್ಯಸಿದ್ಧಿಂ ಲಭೇನ್ನರಃ ।
ಮಧುನಾ ತರ್ಪಣಂ ಕೃತ್ವಾ ಸಿದ್ಧಿಂ ಸಂವತ್ಸರಾಲ್ಲಭೇತ್ ॥ ೫೩ ॥

---

೫೦. ಈ ರೀತಿ, ಶುಭದಿವಸಗಳಲ್ಲಿಯಾಗಲೀ. ಅಥವ ಗ್ರಹಣಾದಿ ಕ್ರೂರದಿನಗಳಲ್ಲಿಯಾಗಲೀ ಸೂರ್ಯನನ್ನು ಭಕ್ತಿಯಿಂದ ಪೂಜಿಸುವವನು ಸೂರ್ಯಲೋಕವನ್ನು ಪಡೆದು ಅಲ್ಲಿ ವಿರಾಜಿಸುತ್ತಾ ಸುಖಿಸುವನು.

೫೧. ಎಳ್ಳುಂಡೆ (ಚಿಗಳಿ ಉಂಡೆ) ಪಾಯಸ, ಒಬ್ಬಟ್ಟು, ಮಾಂಸ ಮಿಶ್ರಿತವಾದ ಅನ್ನ ಇವುಗಳನ್ನು ಸೂರ್ಯದೇವನಿಗೆ ನೈವೇದ್ಯಮಾಡುವವನು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು.

೫೨. ಸೂರ್ಯನಿಗೆ ತುಪ್ಪದಿಂದ ತರ್ಪಣಮಾಡಿದರೆ ಅಂದರೆ ಅಭಿಷೇಕ, ಅರ್ಘ್ಯ ಇವುಗಳನ್ನು ಕೊಟ್ಟರೆ ಮಾನವನು ಕಾರ್ಯಸಿದ್ಧಿಯನ್ನು ಪಡೆಯುವನು. ಹಾಲಿನಿಂದ ಅಭಿಷೇಕಮಾಡಿದರೆ ಮನಸ್ಸಿನಲ್ಲಿ ಉಂಟಾಗುವ ಸಕಲ ದುಃಖಗಳೂ ದೂರವಾಗುವುವು.

೫೩. ಮೊಸರಿನಿಂದ ಅಭಿಷೇಕ ಮಾಡಿದರೆ ಕಾರ್ಯಸಿದ್ಧಿಯು ಕೂಡಲೇ ಆಗುವುದು. ಜೇನುತುಪ್ಪದಿಂದ ಅಭಿಷೇಕಮಾಡಿದರೆ ಒಂದು ವರ್ಷದಲ್ಲಿ ಅವನ ಕಾರ್ಯವು ಸಿದ್ಧಿಸುವುದು.

ಸ್ನಾನಾರ್ಥಮಾಹರೇದ್ಯಸ್ತು ಜಲಂ ಭಾನೋಃ ಸಮಾಹಿತಃ ।
ತೀರ್ಥಾದ್ವಾ ಶುಚಿವಾರ್ಯನ್ಯತ್ಸ ಯಾತಿ ಪರಮಂ ಗತಿಂ ॥ ೫೪ ॥

ಛತ್ರಂ ಧ್ವಜಂ ವಿತಾನಂ ಚ ಪತಾಕಾಂ ಚಾಮರಾಣಿ ಚ ।
ಶ್ರದ್ಧಯಾ ಭಾನವೇ ದತ್ವಾ ಗತಿಮಿಷ್ಟಾಮವಾಪ್ನುಯಾತ್ ॥ ೫೫ ॥

ಯಚ್ಚ ದ್ರವ್ಯಂ ನರೋ ಭಕ್ತ್ಯಾ ಆದಿತ್ಯಾಯ ಪ್ರಯಚ್ಛತಿ ।
ತತ್ತಸ್ಯಾಚ್ಛತಸಾಹಸ್ರಮುತ್ಪಾದಯತಿ ಭಾಸ್ಕರಃ ॥ ೫೬ ॥

ಮಾನಸಂ ವಾಚಿಕಂ ಚಾಪಿ ಕಾಯಿಕಂ ಯಚ್ಚ ದುಷ್ಕೃತಂ ।
ಸರ್ವಂ ಸೂರ್ಯಪ್ರಸಾದೇನ ತತ್ಕ್ಷಣಾದೇವ ನಶ್ಯತಿ ॥ ೫೭ ॥

---

೫೪. ಸೂರ್ಯದೇವನ ಸ್ನಾನಕ್ಕೋಸ್ಕರ ನಿಯಮದಿಂದ ಪುಣ್ಯ ತೀರ್ಥಗಳಿಂದಲೋ ಅಥವಾ ಬೇರೆ ಶುಚಿಕರವಾದ ಜಲಾಶಯಗಳಿಂದಲೋ ನೀರನ್ನು ತಂದು ಅದರಿಂದ ಸ್ವಾಮಿಗೆ ಸ್ನಾನಮಾಡಿಸುವವನು ಉತ್ತಮವಾದ ಗತಿಯನ್ನು ಹೊಂದುವನು.

೫೫. ಛತ್ರಿ, ಧ್ವಜ, ಬಾವುಟ, ವಿತಾನ (ಬಿಸಿಲು ಬೀಳದೇ ಇರುವಂತೆ ದೇವರಮೇಲೆ ಚೌಕನಾಗಿ ನಾಲ್ಕು ಕೋಲುಗಳ ಆಧಾರದಿಂದ ಹಿಡಿದುಕೊಂಡು ಹೋಗುವ ಬಟ್ಟೆ) ಮತ್ತು ಚಾಮರ ಇವುಗಳನ್ನು ಶ್ರದ್ಧೆಯಿಂದ ಸೂರ್ಯನಿಗೆ ಸಮರ್ಪಿಸಿದವನು ತಾನು ಅಪೇಕ್ಷಿಸಿದ ಪದವಿಯನ್ನು ತಪ್ಪದೇಹೊಂದುವನು.

೫೬. ಮನುಜನು ಭಕ್ತಿಯಿಂದ ಸೂರ್ಯನ ಪ್ರೀತ್ಯರ್ಥವಾಗಿ ದಾನ ಅಥವ ಖರ್ಚುಮಾಡುವ ದುಡ್ಡಿನ, ನೂರು ಅಥವಾ ಸಾವಿರ ಪಾಲಿನಷ್ಟು ದ್ರವ್ಯವನ್ನು ಹೆಚ್ಚಾಗಿ ಸೂರ್ಯದೇವನು ಅವನಿಗೆ ಕರುಣಿಸುವನು.

೫೭. ಸೂರ್ಯನನ್ನು ಪೂಜಿಸುವ ಭಕ್ತನ, ಮಾನಸಿಕ, ವಾಚಿಕ ಮತ್ತು ಕಾಯಿಕವಾದ ಪಾಪಗಳೆಲ್ಲವೂ ಒಂದುಬಾರಿ ಸೂರ್ಯದೇವನನ್ನು ನೆನಮಸ್ಕರಿಸಿದ ಕೂಡಲೇ ನಾಶವಾಗುವುವು.

ಏಕಾಹೇನಾಪಿ ಯದ್ಭಾನೋಃ ಪೂಜಯಾ ಪ್ರಾಪ್ಯತೇ ಫಲಂ ।
ಯಥೋಕ್ತದಕ್ಷಿಣೈರಿಷ್ಟ್ವಾ ನ ತು ಕ್ರತುಶತೈರಪಿ ॥ ೫೮ ॥

ಇತಿ ಶ್ರೀ ಸಾಂಬಪುರಾಣೇಽಷ್ಟತ್ರಿಂಶೋಽಧ್ಯಾಯಃ.

---

೫೮. ಒಂದೇದಿನ ಸೂರ್ಯದೇವನನ್ನು ಪೂಜೆ ಮಾಡುವುದರಿಂದುಂಟಾಗುವ ಫಲವು ಕ್ರಮವಾಗಿ ದಕ್ಷಿಣೆಯನ್ನು ಕೊಟ್ಟು ಮಾಡಿದ ನೂರು ಯಾಗಗಳಿಂದಲೂ ಲಭಿಸಲಾರದು. (ಅಂದರೆ ನೂರು ಯಾಗಗಳಿಂದ ಕೂಡಿ ಉಂಟಾಗುವ ಫಲಕ್ಕಿಂತಲೂ ಒಂದೇದಿನದ ಸೂರ್ಯಾರಾಧನೆಯಿಂದುಂಟಾಗುವ ಫಲವು ಅಧಿಕವೆಂದು ಭಾವಿಸಬೇಕು) ಎಂದು ಬೃಹದ್ಬಲರಾಜನಿಗೆ ವಸಿಷ್ಠಮಹರ್ಷಿಗಳು ಹೇಳಿದರು.

ಇಲ್ಲಿಗೆ ಶ್ರೀ ಸಾಂಬಪುರಾಣದಲ್ಲಿ ಮೂವತ್ತೆಂಟನೆಯ
ಅಧ್ಯಾಯವು ಮುಗಿದುದು.

